# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :
ಎಸ್. ಎ. ಪಾಟೀಲ

ಸಹಸಂಪಾದಕ :
ಮಾಧವ ನಾ. ಮಹಿಷಿ

ಕಲೆ :
ಪಿ. ಆರ್. ಪಾಟೀಲ

ಮುಖಪುಟ :
ಗ್ರಾಮ ಕನ್ಯೆಯರು

ಚಿತ್ರ :
ಎಂ. ಸಿ. ಚೆಟ್ಟಿ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI, March 1985

# ಬೆಳಕಿಂಡಿ

'ಆ ಬಗೆಗೆ ಎರಡು ಮಾತೇ ಇಲ್ಲ,' ಎಂದು ಮೇಲಿಂದ ಮೇಲೆ ಹೇಳುವವ ಬ್ರಹ್ಮಚಾರಿಯಾಗಿರುವ ಸಂಭವವೇ ಹೆಚ್ಚು. -ಬಿಲ್ ಕೋಪ್‌ಲ್ಯಾಂಡ್

•

ಸಂಗೀತವೆಂದರೆ ಭಾವನೆಗಳ ಶೀಘ್ರ-ಲಿಪಿ. -ಲಿಯೋ ಟಾಲ್‌ಸ್ಟಾಯ್

ಜನರು ಹಕ್ಕನ್ನು ಕೊಡಿ ಎಂದು ಕೇಳುವ ಬದಲು ಹೊಣೆಯನ್ನು ವಹಿಸಿ ಕೊಡಿ ಎಂದು ಆಗ್ರಹಿಸುವುದನ್ನು ನಾನಿನ್ನೂ ನೋಡಬೇಕಾಗಿದೆ.

-ಪಾಲ್ ಸ್ವೀನೇ

•

ನಾವು ಆಳುವವರ ಮೇಲೆ ಕಣ್ಣಿರಿಸಬೇಕಲ್ಲದೆ ಆಳಲ್ಪಡುವವರ ಮೇಲೆ ಅಲ್ಲ.
-ಫ್ರೆಡರಿಕ್ ಡ್ಯುರೆನ್‌ಮಾತ್

---

## ಚಂದಾದಾರರಿಗೆ ಸೂಚನೆ

"ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಓದುಗ ಚಿಂತನ

## ಇಂಗ್ಲೀಷ್-ಕನ್ನಡ

ಫೆಬ್ರುವರಿ 'ಕಸ್ತೂರಿ'ಯಲ್ಲಿಯ 'ಇಂಗ್ಲೀಷ್ ಮಾಧ್ಯಮದ ಕನ್ನಡ' ಒಂದು ಕಣ್ತೆರೆಯಿಸುವ ಲೇಖನ. ಕನ್ನಡದ ಎಲ್ಲಾ ವೃತ್ತಗಳಲ್ಲೂ ಇಂಗ್ಲೀಷಿನ ಅತಿಕ್ರಮಣವನ್ನು ಲೇಖಕರು ಮನ ಮುಟ್ಟುವಂತೆ ಚಿತ್ರಿಸಿದ್ದಾರೆ. ಇಲ್ಲಿ ಇಣುಕದ ಒಂದೇ ವೃತ್ತವೆಂದರೆ ಕನ್ನಡದ ಅಂಕಿಗಳು ಧೂಳಿಪಟವಾದದ್ದು. ಲೇಖಕರು ಯಾವ ಪರಿಹಾರವನ್ನೂ ಇದಕ್ಕೆ ಸೂಚಿಸದಿರುವುದು ಸಮಸ್ಯೆ ಅಪರಿಹಾರ್ಯವೇನೋ ಎನ್ನಿಸುವಂತಿದೆ.

ಆಧುನಿಕತೆಯನ್ನು ಪ್ರದರ್ಶಿಸುವ ಒಂದು ಸಾಧನವಾಗಿ ಈ ಶಬ್ದಗಳು ಬಳಸಲ್ಪಡುತ್ತವೆ. ಈ ಹವ್ಯಾಸ ಯುವಪೀಳಿಗೆಯಲ್ಲಿ ಹೆಚ್ಚು. ಸಾಕಷ್ಟು ಸುಶಿಕ್ಷಿತರಾದರೂ ಪ್ರಜ್ಞಾವಂತ ಕನ್ನಡಿಗರಾಗಿ ಪರಿಶುದ್ಧ ಕನ್ನಡ ಶಬ್ದಗಳನ್ನು ಬಳಸುವ ಹಿರಿಯರನ್ನು ಗೇಲಿ ಮಾಡುವ ಯುವ ಜನಾಂಗ ಮನೆಯಲ್ಲಿರುತ್ತದೆ. ಅಂದ ಮೇಲೆ ಯುವ ಜನಾಂಗವನ್ನು ತಿದ್ದುವಲ್ಲಿಂದಲೇ ಪರಿಹಾರವನ್ನು ಪ್ರಾರಂಭಿಸಬೇಕು.

ಶಿಕ್ಷಣ ಸಂಸ್ಥೆಗಳು, ಚಲಚ್ಚಿತ್ರಗಳು, ಪತ್ರಿಕೆಗಳು ಈ ದಿಸೆಯಲ್ಲಿ ನಿಶ್ಚಿತ ಕೆಲಸ ಮಾಡಬಲ್ಲವು. ಇಂಗ್ಲೀಷನ್ನು ಅಲ್ಪ ಸ್ವಲ್ಪ ಬಲ್ಲವರು ಸಹ ಅದರ ಬಳಕೆಯನ್ನು ಒಂದು ಅಂತಸ್ತಿಗೆ ಅಗತ್ಯ ಎಂಬ ತೆರದಲ್ಲಿ ಮಾಡುತ್ತಿರುವುದು ಸಮಾಜದಲ್ಲಿ ಹೊಸತೊಂದು ವರ್ಗದ ಸೃಷ್ಟಿಗೆ ಕಾರಣವಾಗಬಹುದು. ಈ ಡಾಂಭಿಕತೆಯ ನಿರ್ಮೂಲನವೇ ಇಂದಿನ ನಮ್ಮ ಅಗ್ರ ಸಾಮಾಜಿಕ ಅಗತ್ಯ.

ಉಣಕಲ್ಲು — ಸುನಂದಾ ಪಾಟೀಲ

ಫೆಬ್ರುವರಿ ಸಂಚಿಕೆಯಲ್ಲಿ ಪ್ರಕಟವಾದ ಶ್ರೀ ವಿಠ್ಠಲ ಕುಲಕರ್ಣಿಯವರ ಲೇಖನ 'ಇಂಗ್ಲೀಷ್ ಮಾಧ್ಯಮದ ಕನ್ನಡ' ತುಂಬಾ ಸಮಯೋಚಿತವಾಗಿದೆ. ಕನ್ನಡಿಗರಾದ ನಾವು ಸ್ವಾಭಿಮಾನಶೂನ್ಯರಾಗುತ್ತಲಿದ್ದೇವೆ. ಪರಭಾಷೆಯ ಈ ಹುಚ್ಚು ವ್ಯಾಮೋಹದಲ್ಲಿ ಸಿಲುಕಿ ಇದೇ ರೀತಿ ಸ್ವಭಾಷೆಯನ್ನು ಮರೆಯುತ್ತಾ ಹೋದಲ್ಲಿ, ಶ್ರೀ ವಿಠ್ಠಲ ಕುಲಕರ್ಣಿಯವರು ಬರೆದಿರುವಂತೆ, ಎರಡು ಸಾವಿರ ವರ್ಷಗಳಿಗೂ ಮಿಕ್ಕಿದ ಪರಂಪರೆಯುಳ್ಳ ನಮ್ಮ ಚೆಲುವ-ಕಸ್ತೂರಿ ಕನ್ನಡ ಇಂಗ್ಲೀಷ್ ಭಾಷಾ ವ್ಯಾಮೋಹಕ್ಕೆ ಬಲಿಪಶುವಾಗಿಬಿಡಬಹುದು.

ಬೆಂಗಳೂರು — ಬಿ. ಸಿ. ರಾವ್

## ಉಪಯುಕ್ತ ಲೇಖನಗಳು

ಫೆಬ್ರುವರಿ ಸಂಚಿಕೆ ತುಂಬಾ ರಸವತ್ತಾಗಿದೆ. ಬಸವರಾಜ ಗಣಪ್ಪನವರ "ಕರಿಬೇವಿನ ಸಸಿ" ಕತೆ ತುಂಬಾ ಚೆನ್ನಾಗಿತ್ತು. ಕತೆಯ ನಾಯಕನು ಪರಿಸರಕ್ಕೆ ಹೇಗೆ ಒಗ್ಗಿಕೊಳ್ಳುತ್ತಾನೆಂಬ, ಹಾಗೂ ಬಡ ಹುಡುಗಿಯ ಚಿತ್ರಣ ಸೊಗಸಾಗಿದೆ.

ಇನ್ನೂ ತುಂಬಾ ಒಳ್ಳೆಯ ಲೇಖನವೆಂದರೆ ಆರ್. ಎಸ್. ವೆಂಕಟರಾವ್ ಅವರ 'ಕಲ್ಪನೆಯ ಅಗಾಧ ಶಕ್ತಿ'. ಎಷ್ಟೋ ಬಾರಿ ನನಗೆ ಈ ಸುಪ್ತ ಮಾನಸ್ಸಿನ ಅನುಭವವಾಗಿದೆ.

ಹಿರಿಯೂರು — ಟಿ. ಎಲ್. ಆರಾಧ್ಯ

## ತೀರದ ತೆರೆ

ಫೆಬ್ರುವರಿ ತಿಂಗಳ ಕಸ್ತೂರಿಯಲ್ಲಿ ಪ್ರಕಟವಾದ ಅಮೃತ ಸೋಮೇಶ್ವರ ಅವರ 'ತೀರದ ತೆರೆ' ಸಂಗ್ರಹ ಮನ ಮುಟ್ಟುವಂತೆ ಚಿತ್ರಿತವಾಗಿತ್ತು. ಕರಾವಳಿ ಪ್ರದೇಶದ 'ಕಡಲ ಕುಡಿ'ಗಳ ರೋಮಾಂಚಕಾರಿ ಜೀವನವನ್ನು ನೈಜತೆಗೆ ಲೋಪ ಬಾರದಂತೆ, ಸರಸ-ಸುಂದರ ಶೈಲಿಯಲ್ಲಿ ಬರೆದ ಕೃತಿಯನ್ನು ಶ್ರೀಮತಿ ನಾವಡ ಓದಿಸಿಕೊಂಡು ಹೋಗುವ ರೀತಿಯಲ್ಲಿ ಸಂಗ್ರಹಿಸಿದ್ದಾರೆ.

ಬರೋಡ — 'ಎಸ್ಕೆ' ಹಳೆಯಂಗಡಿ

ಪುಸ್ತಕ ವಿಭಾಗದ 'ತೀರದ ತೆರೆ'ಯಲ್ಲಿ ಬರುವ ವಿಧವೆ ನೀಲಮ್ಮಳನ್ನು ಕಾದಂಬರಿಕಾರರು ದುರದೃಷ್ಟದ ಹೆಣ್ಣಾಗಿ ಚಿತ್ರಿಸಿರುವುದರಿಂದ ಈ ವಾಚಕರಿಗೆ 'ವಿಧವೆ'ಯರ ಬಗ್ಗೆ ಕೀಳರಿಮೆ ಉಂಟಾಗಲು ಅವಕಾಶ ನೀಡುತ್ತದೆ. ಕಡಲ ತೀರದ ಬೆಸ್ತರ ಜನ ಜೀವನ, ನೀಲಮ್ಮ ಚುದ್ರಪ್ಪರ ಪ್ರೇಮವು 'ತೀರದ ತೆರೆ'ಯಾಗಿ ದಾಂಪತ್ಯಕ್ಕಿಳಿಯದೆ

ಹೋಗುವ ಸನ್ನಿವೇಶ ಮುಂತಾದ ಚಿತ್ರಣ–ಸೊಗಸಾಗಿ ಬಂದಿದೆ.

ಬೆಂಗಳೂರು –ಪ. ರಾಮಚಂದ್ರರಾವ್

ಅಮೃತ ಸೋಮೇಶ್ವರರ 'ತೀರದ ತೆರೆ' ಕಥೆಯನ್ನು 'ಕಸ್ತೂರಿ'ಗಾಗಿ ಶ್ರೀಮತಿ ಗಾಯತ್ರಿ ವಿ. ನಾವಡರವರು ಸುಂದರವಾಗಿ ಸಂಗ್ರಹಿಸಿದ್ದಾರೆ.

ವಿಟ್ಲ –ಬಾಲಗೋಪಾಲ

**ಮಧುಮೇಹ**

ಫೆಬ್ರುವರಿ ೮೫ರ 'ಕಸ್ತೂರಿ' ಯಲ್ಲಿ ಮಧುಮೇಹದ ಬಗೆಗಿನ ಡಾ. ಕೃಷ್ಣ ಅವರ ಲೇಖನ ಬಹಳ ಪ್ರಯೋಜನಕಾರಿ. ಆಯುರ್ವೇದ ಶಾಸ್ತ್ರಕ್ಕನುಗುಣವಾಗಿ ಸಾಮಾನ್ಯವಾಗಿ ಪ್ರಚಲಿತವಾಗಿರುವ ಸಿಹಿಮೂತ್ರ ಕಾಯಿಲೆಯ ಕಾರಣ, ಲಕ್ಷಣಗಳನ್ನು ವಿವರಿಸಿ ಸಾಮಾನ್ಯವಾಗಿ ಹಬ್ಬಿರುವ ತಪ್ಪು ಕಲ್ಪನೆಗಳನ್ನು ನಿವಾರಿಸಿದ್ದಾರೆ.

ಮಾಲೂರು –ಹೆಚ್. ಮೀನಾಕ್ಷಿ ಸಿಂಗ್

**ಹೆಸರು ?**

ಫೆಬ್ರುವರಿ ೧೯೮೫ರ 'ಕಸ್ತೂರಿ' ಯಲ್ಲಿ ಪ್ರಕಟಗೊಂಡಿರುವ ಶ್ರೀ ಡಾ. ಗುಂಡ್ಮಿ ಚಂದ್ರಶೇಖರ ಐತಾಳರ 'ಹೆಸರಿನ ಸಮಸ್ಯೆ' ಅಥವಾ 'ಕರ್ನಾಟಕವೊ–ಕರ್ಣಾಟಕವೊ' ಎನ್ನುವ ಲೇಖನ ಚಿಕ್ಕದಾದರೂ ಚೊಕ್ಕವಾಗಿ ಮೂಡಿ ಬಂದಿದೆ.

ವಿಜಾಪುರ –ಲಕ್ಷ್ಮಣ ಕಂದಕೂರ

ಫೆಬ್ರುವರಿ 'ಕಸ್ತೂರಿ'ಯು ನನ್ನ ಲೇಖನದ ಪರಿಚಯವನ್ನು ಮಾಡುತ್ತ ನೀವು ನಲ್ವತ್ತು ವರ್ಷಗಳ ಹಿಂದೆಯೇ ಶ್ರೀ ಶಂ. ಬಾ. ಜೋಶಿಯವರು ಕರ್ನಾಟಕಕ್ಕೆ 'ಕಂನಾಡು' ಎಂಬ ಹೆಸರು ಸೂಕ್ತ ಎಂದು ಹೇಳಿದರು ಎಂದು ಅವರು 'ಕಂನಾಡು' ಎಂದಿರುವುದು ಬೇರೊಂದು ಅರ್ಥದಲ್ಲಿ. 'ಕಂನಾಡು' ಎಂಬುದಕ್ಕೂ 'ಕನ್ನಾಡು' ಎಂಬುದಕ್ಕೂ ರೂಪ ಅರ್ಥಗಳೆರಡರಲ್ಲೂ ವ್ಯತ್ಯಾಸವಿದೆ.

ಮಂಗಳೂರು –ಗುಂಡ್ಮಿ ಚಂದ್ರಶೇಖರ ಐತಾಳ

**ಬ್ಯಾಂಕ್ ಮುಂದಿ**

ಫೆಬ್ರುವರಿ ೮೫ರ 'ಕಸ್ತೂರಿ'ಯಲ್ಲಿ ಪ್ರಕಟಿತ ವಿಜಯ ವಿಠಲ ಅವರ 'ಈ ಬ್ಯಾಂಕ್ ಮುಂದಿಗೆ ಏನಾಗಿದೆ?' ಲೇಖನ ನೋಡಿದೆ. ಸತ್ಯವನ್ನು ಮುಖದ ಮೇಲೆ ಹೊಡೆದು ಹೇಳಿದಂತೆ ಬರೆದ ಲೇಖಕರಿಗೂ ಪ್ರಕಟಿಸುವ ಧೈರ್ಯ ತೋರಿದ ನಿಮಗೂ ಅಭಿನಂದನೆಗಳು.

ಈ ಲೇಖನದಲ್ಲಿ ಹೇಳಿದಂತೆ ಕೋ ಆಪರೇಟಿವ್ ಬ್ಯಾಂಕು ವ್ಯವಸ್ಥೆಯನ್ನು ಪೂರ್ಣ ಕಡೆಗಣಿಸುವುದಕ್ಕಿಂತ ಈಗಿರುವ ಮೂರು ಸ್ತರ (ರಿಜರ್ವ್ ಬ್ಯಾಂಕು, ಅಪೆಕ್ಸ್ ಬ್ಯಾಂಕು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು)ಗಳನ್ನು ಕಡಿತಗೊಳಿಸಿ, ಅಪೆಕ್ಸ್ ಬ್ಯಾಂಕೇ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳನ್ನು ತನ್ನ ಶಾಖೆಗಳನ್ನಾಗಿ ಮಾಡಿಕೊಂಡು ಸಾಲ ನೀಡಿಕೆ ವ್ಯವಸ್ಥೆ ಮಾಡಿದರೆ ಸುಮಾರು ಎರಡೂವರೆಯಷ್ಟು ಬಡ್ಡಿ ದರ ಸಾಲ ಪಡೆದ ರೈತರಿಗೆ ರಿಯಾಯಿತಿ ಸಿಗುತ್ತದೆ.

ಚಿಕ್ಕಮಗಳೂರು –ನಾರಾಯಣ ಯಾಜಿ

**ಶಿವಮೊಗ್ಗ ಸುಬ್ಬಣ್ಣ**

ರಾಷ್ಟ್ರಪ್ರಶಸ್ತಿ ವಿಜೇತರೂ ಕನ್ನಡದ ಪ್ರತಿಭಾವಂತ ಹೆಮ್ಮೆಯ ಗಾಯಕರೂ ಆದ ಶ್ರೀ ಶಿವಮೊಗ್ಗ ಸುಬ್ಬಣ್ಣನವರ ವ್ಯಕ್ತಿಚಿತ್ರವನ್ನು ಯಥಾವತ್ತಾಗಿ ಅಷ್ಟೇ ರಸವತ್ತಾಗಿ ತುಂಬ ಆತ್ಮೀಯವಾಗಿ ಚಿತ್ರಿಸಿದ್ದಾರೆ ಡಾ. ಎ. ಎಸ್. ವೇಣುಗೋಪಾಲರಾಯರು.

"ನನಗೆ ರಾಷ್ಟ್ರಪ್ರಶಸ್ತಿಯೇನೋ ಬಂತು ನಿಜ. ಇದರಿಂದಾಗಿ ಜನಗಳು ನನ್ನಿಂದ ಹೆಚ್ಚು ನಿರೀಕ್ಷಿಸುವುದೂ ಅಷ್ಟೇ ಸಹಜ. ಆದ್ದರಿಂದ ಆಂತರಿಕವಾಗಿ ನಾನಿನ್ನೂ ಬೆಳೆಯಬೇಕಾಗಿದೆ..." ಎಂದು ಆಗಾಗ ಹೇಳುವ ಶ್ರೀ ಸುಬ್ಬಣ್ಣನವರ ಈ ಮಾತುಗಳು ತುಂಬ ಮಾರ್ಮಿಕವಾಗಿವೆ.

ಬೆಂಗಳೂರು –ನ. ಅ. ರಾವ್

ಫೆಬ್ರುವರಿ ಸಂಚಿಕೆಯಲ್ಲಿ ಡಾ. ಎ. ಎಸ್. ವೇಣುಗೋಪಾಲರಾಯರು ಶಿವಮೊಗ್ಗ ಸುಬ್ಬಣ್ಣನವರ ಬಗ್ಗೆ ನೀಡಿರುವ ನಿರೂಪಣೆ ನಿಜಕ್ಕೂ ಸತ್ಯ. ಸ್ವತಃ ಸುಬ್ಬಣ್ಣನವರೇ ಎದುರಿಗೆ ನಿಂತು ಮಾತನಾಡುತ್ತಿದ್ದಂತೆ ಭಾಸವಾಗುತ್ತಿತ್ತು.

ಹೊಸ ಹೊಳಲು –ಹೆಚ್. ವೈ. ವಿಠಲ

# ಕಸ್ತೂರಿ

ವರ್ಷ: ೨೯ ಮಾರ್ಚ್, ೧೯೮೫ ಸಂಚಿಕೆ : ೩

## ಸಿಂಹ-ಮೇಘ-ವಾಯು ಇತ್ಯಾದಿ

ಆ ದೊರೆಯ ಬಳಿ ಒಂದು ಬೆಕ್ಕು ಇತ್ತು. ಸುಂದರವಾದ ಗಂಡು ಬೆಕ್ಕು. ಅದನ್ನು ದೊರೆ ಪ್ರೀತಿಯಿಂದ 'ಸಿಂಹ'ವೆಂದೇ ಕರೆಯುತ್ತಿದ್ದ.

ಒಂದು ದಿನ ದೊರೆಸಾನಿ ಹೇಳಿದಳು, "ಮಹಾರಾಜಾ, ಸಿಂಹಕ್ಕಿಂತ ಶ್ರೇಷ್ಠವೆಂದರೆ ಮೇಘ. ಏಕೆಂದರೆ ಅದು ಸ್ವರ್ಗದ ಸೀಮೆಯನ್ನು ದಾಟಿ ಹೋಗಬಲ್ಲದು."

ದೊರೆ ಅಂದಿನಿಂದ ಸಿಂಹವನ್ನು 'ಮೇಘ'ವೆಂದು ಕರೆಯತೊಡಗಿದ.

ಒಂದು ದಿನ ಯುವರಾಜ ಬಂದವನೆ, "ಅಪ್ಪಾಜಿ, ಮೇಘಕ್ಕಿಂತ ಬಲಯುತವಾದದ್ದು ವಾಯು. ಅದು ಕ್ಷಣಾರ್ಧದಲ್ಲಿ ಮೇಘವನ್ನು ಚೆದರಿಸಿ, ಎಲ್ಲಿ ಬೇಕೆಂದರಲ್ಲಿ ಹೋಗಿ ಬರಬಲ್ಲದು. ಎಂಥ ಗಟ್ಟಿಯಾದುದನ್ನೂ ನಡುಗಿಸಬಲ್ಲದು," ಎಂದ.

ಮೇಘದ ಬದಲು ಆ ಬೆಕ್ಕಿಗೆ 'ವಾಯು'ವೆಂದು ಪುನರ್ನಾಮಕರಣವಾಯಿತು.

ಕೆಲ ದಿನಗಳ ನಂತರ ಮಹಾ ಮಂತ್ರಿಗಳು ದೊರೆಯೊಂದಿಗೆ ಮಾತನಾಡುತ್ತ, "ಪ್ರಭು, ವಾಯುಗಿಂತ ಬಲಶಾಲಿಯೆಂದರೆ ಗೋಡೆ. ಎಂಥ ಬಲವಾದ ಗಾಳಿಯನ್ನೂ ಅದು ತಡೆದು ನಿಲ್ಲಿಸುತ್ತದೆ," ಎಂದ. ದೊರೆಗೆ ಹೌದೆನ್ನಿಸಿತು. ಅಷ್ಟರಲ್ಲೇ ಸೇನಾಪತಿ, —

"ಸ್ವಾಮಿ, ಗೋಡೆಗಿಂತ ಇಲಿ ಬಲಶಾಲಿ. ಗಾಳಿಯನ್ನೂ ತಡೆಯಬಲ್ಲ ಗೋಡೆಯನ್ನು ಇಲಿ ಕೊರೆದು ಪೋರು ಮಾಡಿಕೊಳ್ಳುತ್ತದಲ್ಲವೆ?" ಎಂದ.

ಇದನ್ನೆಲ್ಲ ಕೇಳುತ್ತಿದ್ದ ಆಸ್ಥಾನ ವಿದೂಷಕ, "ಇಲಿಗಿಂತ ಬಲಶಾಲಿಯೆಂದರೆ ಬೆಕ್ಕು. ಆದ್ದರಿಂದ ನಿಮ್ಮ 'ಸಿಂಹ'ಕ್ಕೆ ಬೆಕ್ಕು ಎಂದು ಕರೆಯುವುದೇ ಒಳ್ಳೆಯದು," ಎಂದ.

ಅಂದಿನಿಂದ ಬೆಕ್ಕನ್ನು ಬೆಕ್ಕು ಎಂದೇ ಕರೆಯಲಾರಂಭಿಸಿದ ಆ ದೊರೆ.

- 'ಚೀನಿ ಪ್ರಹಸನ'ದಿಂದ

### ಅರ್ಥಶಾಸ್ತ್ರಜ್ಞ ನಾಟಕಕಾರ ಹರಿದಾಸ ಸಾಹಿತಿ

# ಡಾ. ರಂಗನಾಥ ಭಾರದ್ವಾಜ

**ವಸಂತ ಗುಮಾಸ್ತೆ**

ಅರ್ಥಶಾಸ್ತ್ರ ಒಂದು ಶೀತಲ-ಭಾವನಾ ಶೂನ್ಯವಾದ ಶಾಸ್ತ್ರವೆಂದು ಸರ್ವಸಾಮಾನ್ಯರ ಅಭಿಪ್ರಾಯವಾಗಿದೆ. ವಿಶೇಷತಃ ಈಚೆಗೆ ಗರುಡ ಭರಾಟೆಯಲ್ಲಿ ಬೆಳೆಯುತ್ತಿರುವ ಅರ್ಥಮಿತಿ ಶಾಸ್ತ್ರ( Econometrics )ವಂತೂ ಅದರ ಪರಿಚಯವಿರದವರಿಗೆ ಭಯಪೂರ್ಣವೆನ್ನಿಸುತ್ತದೆ. ಅದು ತೊಡಕಿನ ಪ್ರಮೇಯಗಳನ್ನು ಬಿಡಿಸುತ್ತಾ ಕೂಡುವುದರಲ್ಲಿ ಆಸ್ಥೆ ಇರುವವರ ಪ್ರಾಂತವೆಂಬ ಭಾವನೆ ನಿರ್ಮಾಣವಾಗುತ್ತದೆ. ಅರ್ಥಶಾಸ್ತ್ರವನ್ನು ಉದ್ವೇಗಜನಕ ಶಾಸ್ತ್ರ **(Dismal Science)** ಎಂದು ಕಾರ್ಲೈಲ್ ಹೇಳಿದ್ದನ್ನು ಇಲ್ಲಿ ನೆನಪಿಗೆ ತಂದು ಕೊಳ್ಳಬಹುದು. 'ಉದ್ವೇಗಜನಕ' ಶಾಸ್ತ್ರದ ಪ್ರತಿಪಾದಕರು ಔರಂಗಜೇಬನ ಸಮೀಪದ ಸಂಬಂಧಿಕರಿರಬಹುದೇನೋ ಎಂದೊಮ್ಮೆ ಶಂಕೆ ಕೂಡ ಬಂದು ಹೋಗಬಹುದು. ಆದರೆ ವಸ್ತುಸ್ಥಿತಿ ವಿಪರೀತವಾಗಿದೆ. ಅರ್ಥಶಾಸ್ತ್ರ ಎಷ್ಟೇ ವಸ್ತುನಿಷ್ಠಶಾಸ್ತ್ರವಾಗಿದ್ದರೂ ಅರ್ಥ ಶಾಸ್ತ್ರಜ್ಞರು ಬಡಿದುಕೊಳ್ಳುವ ಹೃದಯವಿರುವ ಭಾವನಾಪೂರ್ಣ ಜನರು. ಪ್ರಸಿದ್ಧ ಅರ್ಥ ತಜ್ಞ ಜಾನ್ ಮೆನಾರ್ಡ್ ಕೀನ್ಸನು ಸಂಗೀತ ನಾಟಕ ಮತ್ತು ಲಲಿತ ಕಲೆಗಳಲ್ಲಿ ಎಷ್ಟೊಂದು ಆಸ್ಥೆ ವಹಿಸುತ್ತಿದ್ದನೆಂದರೆ ಅವನು ಕೇಂಬ್ರಿಜ್‌ನಲ್ಲಿ ನಾಟ್ಯಗೃಹ ಕಟ್ಟಿದ. ಅಲ್ಲಿ ತನ್ನ ಹೆಂಡತಿಯೊಡನೆ ನಾಟಕಗಳಲ್ಲಿ ಪಾತ್ರವಹಿಸಿ ಶೇಕ್ಸ್‌ಪಿಯರನ ನಾಟಕಗಳನ್ನು ಪ್ರದರ್ಶಿಸುತ್ತಿದ್ದ. ನಾಟಕಗಳಿಗಾಗಿ ಕೀನ್ಸ್ ಏನೆಲ್ಲ ಮಾಡಿದ್ದಾನೆಂದು ಹೇಳುತ್ತ ಹೋದರೆ ಅದು ಒಂದು ಹೊತ್ತಿಗೆಯಾದೀತು. ಗೇಟಿನಲ್ಲಿ ನಿಂತು ತಿಕೀಟು ಕೂಡ ಮಾರಿದ್ದಾರೆ- ಖ್ಯಾತ ಅರ್ಥಶಾಸ್ತ್ರಜ್ಞನೆಂದು ಹೆಸರಾದ ಮೇಲೆಯೂ.

ಇಂತು ಅರ್ಥಶಾಸ್ತ್ರದಂತಹ ರುಕ್ಷ ಶಾಸ್ತ್ರ ಪ್ರತಿಪಾದಿಸುತ್ತಿರುವಾಗ ಕೂಡ ಕೀನ್ಸನ ಹೃದಯ ಹಂಬಲಿಸುತ್ತಿತ್ತು- ನಾಟಕಗಳಿಗಾಗಿ ಕೀನ್ಸನಿಗಿದ್ದ ನಾಟಕಗಳ ಹುಚ್ಚು ಎಲ್ಲ ಅರ್ಥ ಶಾಸ್ತ್ರಜ್ಞರಿಗೆ ಬಡಿದುಕೊಂಡಿದೆಯೋ ಇಲ್ಲವೊ ನಾವರಿಯೆವು. ಆದರೆ ಮುಂಬಯಿ ವಿಶ್ವವಿದ್ಯಾಲಯದ ಅರ್ಥಮಿತಿಶಾಸ್ತ್ರದ ಪ್ರಾಧ್ಯಾಪಕರಾದ ಡಾ. ರಂಗನಾಥ ಭಾರಧ್ವಾಜರ ಮಟ್ಟಿಗೆ ಹೇಳುವುದಾದರೆ ನಾಟಕ, ನಾಟ್ಯಶಾಸ್ತ್ರ, ನಟನೆ, ಗಾಯನ, ಇತ್ಯಾದಿಗಳೆಲ್ಲ ಅವರ ಕಣ ಕಣಗಳಲ್ಲಿ ಹರಿಯುತ್ತಿವೆ. ನಾಟ್ಯಶಾಸ್ತ್ರದಲ್ಲಿ ವಿನೂತನ



**ಡಾ. ರಂಗನಾಥ ಭಾರದ್ವಾಜ**

ನಿಟ್ಟೋಂವನ್ನು ನಿರ್ಮಿಸಿದ್ದಾರೆ.

ಆಡು ಮುಟ್ಟದ ಗಿಡವಿಲ್ಲ. ಡಾ. ರಂಗನಾಥ ಭಾರದ್ವಾಜರು ಹಿಡಿಯದ ವಿಷಯವಿಲ್ಲ. ಅವರು ಅರ್ಥಶಾಸ್ತ್ರ ಮತ್ತು ನಾಟ್ಯಶಾಸ್ತ್ರಗಳೊಂದಿಗೆ ಹರಿದಾಸ ಸಾಹಿತಿ, ತತ್ವಜ್ಞಾನಿ, ವಿಜ್ಞಾನಿ, ಗಣಿತಜ್ಞ ಮತ್ತು ಇವೆಲ್ಲಕ್ಕೂ ಮಿಗಿಲಾಗಿ ಪ್ರಚಲಿತ ಸಮಾಜದ ಆಗುಹೋಗುಗಳ ಚಿಂತಕ. ಅರಿಸ್ಟಾಟಲ್‌ನಿಂದ ಹಿಡಿದು ಸಾರ್ತ್ರನವರೆಗೆ, ಭಾಸ್ಕರಾಚಾರ್ಯನಿಂದ ಹಿಡಿದು ಮಹಾತ್ಮಾ ಗಾಂಧಿಯವರೆಗೆ ಎಲ್ಲರ ಕೊಡುಗೆಗಳ ಬಗ್ಗೆ ಅವರು ವಿದ್ವತ್‌ಪೂರ್ಣವಾಗಿ ಭಾಷ್ಯ ಮಾಡುತ್ತಾರೆ. ಎಂತಲೇ ಅವರನ್ನು 'ವೈಜ್ಞಾನಿಕ ತತ್ವಜ್ಞಾನಿ' ಎಂದು ಕರೆಯಲಾಗುತ್ತದೆ.

ಧಾರವಾಡದ ಮಣ್ಣಿನಲ್ಲಿ ಹಿಂದೂಸ್ತಾನಿ ಸಂಗೀತದ ಸುಗಂಧವಿದೆಯಾದರೆ ಮೈಸೂರಿನ ಮಣ್ಣಿನಲ್ಲಿ ಸಾಹಿತ್ಯ, ಕಲೆ ಮತ್ತು ನಾಟಕಗಳ ಗಮಗಮ ಕಸುವು ಇದೆ. ಕನ್ನಡ ಸಾರಸ್ವತ ಲೋಕಕ್ಕೆ ಮೈಸೂರಿನ ಕೊಡುಗೆ ಹೇಳತೀರದಷ್ಟಿದೆ. ಅದರೆ ವಿಶೇಷವಾಗಿ ಹೇಳುವುದಾದರೆ ಮೈಸೂರು ಸಾಹಿತಿಗಳನ್ನು ಕೊಟ್ಟಿದೆಯಷ್ಟೇ ಅಲ್ಲದೆ ರಾಜಾರಾಮಣ್ಣರವರಂಥ ವಿಜ್ಞಾನಿ, ಆರ್. ಕೆ. ಲಕ್ಷ್ಮಣರಂತಹ ವ್ಯಂಗ್ಯಚಿತ್ರಕಾರ, ವಿಶ್ವೇಶ್ವರಯ್ಯನವರಂಥ ಇಂಜಿನಿಯರನ್ನೂ ಕೊಟ್ಟಿದೆ. ಡಾ. ರಂಗನಾಥ ಭಾರದ್ವಾಜರು ಮೈಸೂರಿನವರಾಗಿರುವುದರಿಂದ ಅವರಲ್ಲಿ ವಿಜ್ಞಾನಿಯ ದೃಷ್ಟಿಕೋನ, ಸಾಹಿತಿಯ ಉಸಿರು, ನಾಟಕಕಾರನ ಹೃದಯವಿದೆ; ಇವೆಲ್ಲಕ್ಕೂ ಕಳಸವಿಟ್ಟಂತೆ ಮೂಲಭೂತ ವಿಚಾರ ಮಾಡುವ ಛಲವಿದೆ.

೧೯೩೨ರಲ್ಲಿ ಜನಿಸಿದ ಶ್ರೀಯುತರು ಕಲಿತದ್ದು, ಕನ್ನಡ, ಉರ್ದು, ಪರ್ಶಿಯನ್ ಮತ್ತು

ಇಂಗ್ಲೀಷ್ ಭಾಷೆಗಳನ್ನು. ಎಳೆ ವಯಸ್ಸಿನಲ್ಲಿ ತಾಯಿ-ತಂದೆ ಇಬ್ಬರೂ ಗತಿಸಿ ಹೋಗಿದ್ದರಿಂದ ಅವರಿಗೆ ಕಿರಿಯ ಸೋದರ ಸತ್ಯನಾರಾಯಣ ನೊಂದಿಗೆ ಕೆಲಕಾಲ ಧರ್ಮಶಾಲೆಯಲ್ಲಿ ಕಳೆಯ ಬೇಕಾಗಿ ಬಂತು. ಧರ್ಮಛತ್ರದ ಮಾಲಿಕನ ಪರಿಚಯ ಬೆಳೆಸಿಕೊಂಡ ಬಾಲಕರಿಬ್ಬರು ವಿದ್ಯಾಭ್ಯಾಸ ಮುಂದುವರಿಸಿದರು. ಖಾಸಗಿ ಟ್ಯೂಶನ್, ಆಕಾಶವಾಣಿಯಲ್ಲಿ ನಾಟಕಗಳನ್ನು ಮಾಡಿ ವಿದ್ಯಾರ್ಜನೆಯೊಂದಿಗೆ ದ್ರವ್ಯಾರ್ಜನೆ ಯನ್ನೂ ಮಾಡದೆ ಗತ್ಯಂತರವಿರಲಿಲ್ಲ.

ಆಗ ಮೈಸೂರಿನಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಾಲ. ಎಲ್ಲೆಲ್ಲಿಯೂ ರಾಷ್ಟ್ರೀಯತೆಯ ಹುರುಪು. ಬಾಲಕ ರಂಗನಾಥರಿಗೆ ಮುಂದಿನ ಊಟ ಎಲ್ಲಿ ಎಂಬ ಭೂತಾಕಾರದ ಪ್ರಶ್ನೆ ಇದ್ದಾಗಲೂ ಹೊಟ್ಟೆಯ ಕರೆಗಿಂತ ಸ್ವಾತಂತ್ರ್ಯ ಚಳುವಳಿಯ ಕರೆ ಹೆಚ್ಚು ಮಹತ್ವದ್ದೆನಿಸಿತು. ಮೈಸೂರಿನ ಕಾಂಗ್ರೆಸ್ ಪಕ್ಷ ಸೇರಿ ಅದರಲ್ಲಿ ದುಡಿದರು. 'ಹಮಾರಾ ದೇಶ' ಎಂಬ ಉರ್ದು ವಾರಪತ್ರಿಕೆ ದ್ರವ್ಯಾರ್ಜನೆ ಮತ್ತು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಏಕಕಾಲಕ್ಕೆ ಆಸ್ಪದ ಕೊಟ್ಟಿತು. ಇದೇ ಕಾಲದಲ್ಲಿ ಮಹಾರಾಜಾ ಕಾಲೇಜಿನಲ್ಲಿ ವಿಶ್ವವಿದ್ಯಾಲಯ ವಿದ್ಯಾಭ್ಯಾಸವಾಯಿತು. ಮಹಾವಿದ್ಯಾಲಯದ ಶಿಕ್ಷಣದೊಂದಿಗೆ ಸಾಹಿತ್ಯ ಸಂಗೀತ ಮತ್ತು ನಾಟಕಗಳತ್ತ ಕೂಡ ಶ್ರೀಯುತರು ಒಲವು ತೋರಿಸಿದರು.

ಮೈಸೂರಿನಲ್ಲಿ ಆ ಕಾಲದಲ್ಲಿ ಶ್ರೀಯುತರಿಗೆ ಶ್ರೀ ವಾಸುದೇವಾಚಾರ್ಯ ಮತ್ತು ವೆಂಕಟಗಿರಿ ಯಪ್ಪನವರಂತಹ ಸಂಗೀತ ಶಿಖಾಮಣಿಗಳ ಸಹವಾಸ ದೊರೆಯಿತು. ನಾಟಕ ಸಂಗೀತ ಮೊದಲಾದ ಲಲಿತ ಕಲೆಗಳಿಗೆ ಹಂಬಲಿಸುತ್ತಿದ್ದ ಶ್ರೀಯುತರಿಗೆ ಈ ವಿದ್ವತ್ಪೂರ್ಣ ಸಂಗೀತ ಶಿಖಾಮಣಿಗಳ ಸಹವಾಸದಿಂದ ಫಲವತ್ತಾದ ಮಣ್ಣಿನಲ್ಲಿ ಸದೃಢ ಬೀಜ ಬಿತ್ತಿದಂತಾಯಿತು.

ಮಹಾರಾಜಾ ಕಾಲೇಜಿನಿಂದ ಅರ್ಥಶಾಸ್ತ್ರ ದಲ್ಲಿ ಎಮ್. ಎ. ಪದವಿಯನ್ನು ಶ್ರೀಯುತರು

ಶಾಸ್ತ್ರ ಮತ್ತು ತಮ್ಮ ಸುತ್ತಮುತ್ತಲಿನ ಆರ್ಥಿಕ ಸ್ಥಿತಿ ಮತ್ತು ಸಮಸ್ಯೆಗಳು ಎಷ್ಟೊಂದು ವಿಪರೀತವಾಗಿವೆ ಎಂದು ಅವರಿಗೆ ಕಳವಳವಾಯಿತು. ಮಹಾವಿದ್ಯಾಲಯದ ವರ್ಗಗಳ ಗೋಡೆಗಳ ಒಳಗೆ ಕಲಿಸುವ ಅರ್ಥಶಾಸ್ತ್ರ ಹೊರಗಿನ ಪರಿಸ್ಥಿತಿಯ ಪ್ರತಿಬಿಂಬ ವಾಗಿರದೆ ವಿಕೃತ ಸ್ವರೂಪದ್ದಾಗಿದೆ ಎಂದು ಅವರಿಗೆ ಮನದಟ್ಟಾಯಿತು. ಅರ್ಥಶಾಸ್ತ್ರವೇ ಅಲ್ಲದೆ ನಮ್ಮ ಶಿಕ್ಷಣ ಪದ್ಧತಿಯು ಎಷ್ಟು ಅಸಂಬದ್ಧವಾಗಿದೆಯಲ್ಲವೆಂದು ತರುಣ ಭಾರ ದ್ವಾಜರ ಮನಸ್ಸು ಮಿಡಿದದ್ದಿತು. ಆದರೆ ಅರ್ಥಶಾಸ್ತ್ರದಲ್ಲಿ ಇನ್ನಷ್ಟು ಪರಿಣತಿ ಗಳಿಸದೆ ಅದರಲ್ಲಿಯ ಹುಳುಕುಗಳನ್ನು ಅಧಿಕಾರವಾಣಿ ಯಿಂದ ಹೇಳಲು ಬರುವುದಿಲ್ಲವೆಂದು ಅವರಿಗೆ ತೋಚಿತು. **To judge poets is the faculty of poets** ಎಂಬ ನ್ಯಾಯದಂತೆ ಅರ್ಥಶಾಸ್ತ್ರದಲ್ಲಿಯ ತ್ರುಟಿಗಳನ್ನು ಅರ್ಥಶಾಸ್ತ್ರ ದಲ್ಲಿ ಮುಳುಗಿ ಎದ್ದವನೇ ಹೇಳಬಲ್ಲನೆಂದು ಅವರಿಗೆ ಅನ್ನಿಸಿತು. ಕಾರಣ ಡಾಕ್ಟರೇಟ್ ಮಾಡಲು ಶ್ರೀಯುತರು ಮುಂಬಯಿ ಮಹಾ ನಗರ ಸೇರಿದರು. ಅವರು ಮುಂಬಯಿಗೆ ಬಂದಾಗ ಅವರ ಜೇಬಿನಲ್ಲಿದ್ದದ್ದು ಒಂದು ನೂರು ರೂಪಾಯಿಗಳು ಮಾತ್ರ.

ಮುಂಬಯಿಯಲ್ಲಿ ಪಿಯೆಚ್.ಡಿ. ಮಾಡುವುದ ರೊಂದಿಗೆ ಹೊಟ್ಟೆಯೂ ನಡೆಯಬೇಕಷ್ಟೆ. ಅದೂ ಮೈಸೂರಿನಲ್ಲಿ ಬಿಟ್ಟು ಬಂದ ತಮ್ಮನಹೊಟ್ಟೆ ಸೇರಿ. ಕಾರಣ **Eastern Economist** ಎಂಬ ಇಂಗ್ಲೀಷ್ ಪತ್ರಿಕೆಯ ಸಂಪಾದಕೀಯ ಸಿಬ್ಬಂದಿಯಲ್ಲಿ ನೌಕರಿ ಹಿಡಿಯಬೇಕಾಯಿತು. ೧೯೫೦ರಲ್ಲಿ ಪಿ.ಎಚ್.ಡಿ. ಪದವಿ ದೊರೆಯಿತು. ಆಗ ಅಮೇರಿಕದಿಂದ ಮುಂಬಯಿ ವಿಶ್ವವಿದ್ಯಾ ಲಯಕ್ಕೆ ಬಂದಿದ್ದ ಡಾ. ಹೆನ್ರಿ ಬ್ರುಟನ್‌ರು ಶ್ರೀಯುತರ ಡಾಕ್ಟೊರೇಲ್ ಪ್ರಬಂಧವನ್ನು ಮೆಚ್ಚಿ ಡಾ. ಭಾರದ್ವಾಜರನ್ನು ಇನ್ನೂ ಮುಂದಿನ ಶಿಕ್ಷಣಕ್ಕಾಗಿ ಅಮೇರಿಕದ ಹಾರ್ವರ್ಡ್ ವಿಶ್ವ ವಿದ್ಯಾಲಯಕ್ಕೆ ಶಿಫಾರಸು ಮಾಡಿದರು. ಮೊದಲಿ

ತಮ್ಮ ಪರೀಕ್ಷೆಗಳನ್ನು ಪಾಸು ಮಾಡುತ್ತ ಬಂದಿದ್ದ ಡಾ. ಭಾರದ್ವಾಜರಿಗೆ ಹಾರ್ವರ್ಡ್ ವಿಶ್ವವಿದ್ಯಾಲಯದ **Post-Doctoral Research Fellowship** ಅವರ ವಿದ್ಯಾವಂತಿಕೆಯನ್ನು ಗುರುತಿಸಿದ ಅಂತಾರಾಷ್ಟ್ರೀಯ ಅನುಮೋದನೆಯಾಗಿತ್ತು. ಹಾರ್ವರ್ಡ್‌ನಲ್ಲಿ ಇಂದು ನೋಬೆಲ್ ಪಾರಿತೋಷಕ ಪಡೆದ ಅನೇಕ ಅರ್ಥಶಾಸ್ತ್ರಜ್ಞರೊಂದಿಗೆ ಕೆಲಸ ಮಾಡುವ ಸುಸಂಧಿಯು ಡಾ. ಭಾರದ್ವಾಜರಿಗೆ ದೊರೆಯಿತು.

ಅಮೇರಿಕದಿಂದ ಹಿಂದಿರುಗುವ ಮುನ್ನ ದಿಲ್ಲಿಯ ಜೆ.ಎನ್.ಯು. ನಾಯಕರು ಡಾ. ಭಾರದ್ವಾಜರನ್ನು ಕೆಲಸಕ್ಕೆ ಕರೆಯಿತು. ಅದರೆ ಅಧ್ಯಾಪನ ವೃತ್ತಿಯನ್ನೇ ಆರಿಸಿಕೊಳ್ಳಬೇಕೆಂಬ ತಮ್ಮ ಮೊದಲಿನ ಬಂದ ನಿಶ್ಚಯವನ್ನು ಅವರು ಅಧಿಕಾರ ಹಣ ಹಾಗೂ ಪ್ರತಿಷ್ಠೆಗಳಿಗಾಗಿ ಬದಿಗೊತ್ತಲಿಲ್ಲ. ಕಾರಣ ಅವರು ಮುಂಬಯಿ ವಿಶ್ವವಿದ್ಯಾಲಯಕ್ಕೆ ಹಿಂದಿರುಗಿದರು. ಅಲ್ಲಿ ಅರ್ಥಮಿತಿ ಶಾಸ್ತ್ರ ವಿಭಾಗದ ಪ್ರಮುಖರಾಗಿ, ೧೯೬೮ರಿಂದ ಈಚೆ ಪ್ರಾಧ್ಯಾಪಕರಾಗಿ ದುಡಿಯುತ್ತಿದ್ದಾರೆ. ಪ್ರಸಿದ್ಧ ಅಣುವಿಜ್ಞಾನಿ ಓಪನ್‌ಹೈಮರನು ತನ್ನ ವಿದ್ಯಾರ್ಥಿಗಳಿಗೆ ಎಷ್ಟು ಮೆಚ್ಚುಗೆಯವನಾಗಿದ್ದನೆಂದರೆ ಅವನು ಒಂದು ವಿಶ್ವವಿದ್ಯಾಲಯದಿಂದ ಮತ್ತೊಂದು ವಿಶ್ವವಿದ್ಯಾಲಯಕ್ಕೆ ಹೋದರೆ ಅವನ ಬೆನ್ನು ಹತ್ತಿ ವಿದ್ಯಾರ್ಥಿಗಳೂ ಹೊಸ ವಿಶ್ವವಿದ್ಯಾಲಯಕ್ಕೆ ಹೋಗುತ್ತಿದ್ದರಂತೆ. ಡಾ. ಭಾರದ್ವಾಜರು ಓಪನ್‌ಹೈಮರನಷ್ಟು ವಿದ್ಯಾರ್ಥಿಗಳಲ್ಲಿ ಮೆಚ್ಚುಗೆಯುಳ್ಳವರಾಗಿದ್ದಾರೆ. ಅವರು ಆಗೀಗ ವಿದೇಶಗಳ ವಿಶ್ವವಿದ್ಯಾಲಯಗಳಲ್ಲಿ ಸಂಯುಕ್ತ ರಾಷ್ಟ್ರ ಸಂಘಗಳ ಸಂಸ್ಥೆಗಳಲ್ಲಿ ವ್ಹಿಸಿಟಿಂಗ್ ಪ್ರೊಫೆಸರ್‌ರೆಂದು ಹೋದರೆ ಮುಂಬಯಿ ವಿಶ್ವವಿದ್ಯಾಲಯದ ಅರ್ಥಶಾಸ್ತ್ರದ ವರ್ಗಗಳಲ್ಲಿ ಉಪಸ್ಥಿತಿ ಕಡಿಮೆಯಾಗುತ್ತದೆ.

೧೯೬೦-೭೦ರ ದಶಕ ಅರ್ಥಶಾಸ್ತ್ರದ ಇತಿಹಾಸದಲ್ಲಿ ಒಂದು ಅಲೌಕಿಕ ಕಾಲಖಂಡ. ಅರ್ಥಶಾಸ್ತ್ರದ ಸಿದ್ಧಾಂತಗಳನ್ನು ಅಲುಗಾಡಿಸುವ ವಿಚಾರಗಳು ... ಹೊಸದೊಂದು ... ದವು. ಡಾ. ಭಾರದ್ವಾಜರು ಈ ವೈಚಾರಿಕ ಕ್ರಾಂತಿಯಿಂದ ದೂರವಿರುವುದು ಹೇಗೆ ತಾನೆ ಸಾಧ್ಯ? ಈ ವೈಚಾರಿಕ ಕ್ರಾಂತಿಯಲ್ಲಿ ಅವರು ಸಕ್ರಿಯ ಭಾಗವಹಿಸಿದರು. **"On a contradiction in Sraffa's contribution"** ಎಂಬ ತಮ್ಮ ಲೇಖನದಲ್ಲಿ ಅವರು ಅರ್ಥಶಾಸ್ತ್ರದಲ್ಲಿನ ತ್ರುಟಿಗಳನ್ನೆಲ್ಲ ಎತ್ತಿ ತೋರಿಸಿದರು. ಇದೇ ಲೇಖನ ಮುಂದೆ ಅವರ ಮತ್ತು ಅವರ ವಿದ್ಯಾರ್ಥಿಗಳ ಸಂಶೋಧನೆಯ ಕೆಲಸಕ್ಕೆ ಅಡಿಪಾಯ ಹಾಕಿ ಕೊಟ್ಟಿತು. ಅರ್ಥಶಾಸ್ತ್ರ ನಮ್ಮ ಪರಿಸರದ ವಸ್ತುಸ್ಥಿತಿಯ ಪ್ರತಿಬಿಂಬವಾಗಬೇಕಾದರೆ ಹಾಗೂ ಆ ವಸ್ತುಸ್ಥಿತಿಯನ್ನು ನಮಗೆ ಪೋಷಕವಾಗುವಂತೆ ಬದಲಿಸಿಕೊಳ್ಳಬೇಕಾದರೆ ಅರ್ಥಶಾಸ್ತ್ರದಿಂದ ನಾವು ಕಲಿಯಬೇಕಾದುದೇನು? ಎಂಬುದು ಅವರ ಸಂಶೋಧನೆಯ, ಚಿಂತನೆಯ ಮತ್ತು ವ್ಯಾಖ್ಯಾನಗಳ ಪ್ರಮುಖ ವಿಷಯವಾಯಿತು.

ಅರ್ಥಶಾಸ್ತ್ರ ಡಾ. ಭಾರದ್ವಾಜರ ಮೆದುಳಿಗೆ ಆಹಾರವಾಗಿದೆಯಾದರೆ ಅವರ ಆತ್ಮ ಕಲೆಯದಾಗಿದೆ. ಆದರೆ ಮೆದುಳು, ಆತ್ಮ ಎರಡೂ ವಾಸಿಸುತ್ತಿದ್ದುದು ಒಂದೇ ಶರೀರದಲ್ಲಿ ತಾನೆ? ಕಾರಣ ಅರ್ಥಶಾಸ್ತ್ರ ಮತ್ತು ಕಲೆಗಳಲ್ಲಿ ಎರಡು ಪ್ರತ್ಯೇಕ ದೃಷ್ಟಿಕೋನಗಳು ಇರುವುದು ಅಸಾಧ್ಯ – ಅದೂ 'ಕ್ಷ' ಕಿರಣಾತ್ಮಕ ವಿಚಾರಶೀಲ. ಭಾರದ್ವಾಜರಿಗೆ. ಕಾರಣ ಅವರು ತಾವು ಕಲಿಸುವ ಅರ್ಥಶಾಸ್ತ್ರದಲ್ಲಿ ಕಲೆಯನ್ನೂ ತಾವು ಬಹು ಆಸ್ಥೆಯಿಂದ ಜೋಪಾನ ಮಾಡಿಕೊಂಡು ಬಂದ ಕಲೆಯಲ್ಲಿ ಶಾಸ್ತ್ರೀಯ ಪದ್ಧತಿಯನ್ನೂ ಅಳವಡಿಸಿಕೊಳ್ಳುವ ಕಾರ್ಯಕ್ಕೆ ಉದ್ಯುಕ್ತರಾದರು.

ಅವರು ನಾಟಕ, ಲೇಖನ, ಅಭಿನಯ, ನಾಟಕಗಳಲ್ಲಿ ಸಂಗೀತ ಗಾಯನಗಳ ಜೋಡಣೆ, ನಾಟಕ ಪ್ರಸ್ತುತೀಕರಣ. ಅಷ್ಟೇ ಏಕೆ ರಂಗಮಂಚ ಸಜ್ಜಿಕೆಗಳ ಬಗ್ಗೆ ಸರ್ವಾಂಗ ಪೂರಿತ ದೃಷ್ಟಿಕೋನವುಳ್ಳ ವಿಚಾರ ಪ್ರಣಾಲಿಯನ್ನು ಬೆಳೆಸಿದರು. ಅದನ್ನು ಅವರು ಸೌಂದರ್ಯದ ಸಂಯುಕ್ತವಿಷಯ (**Structeralist view of aesthetics**) ಎಂದು ಕರೆಯುತ್ತಾರೆ.

ಡಾ. ಭಾರದ್ವಾಜರ ವಿದ್ಯಾರ್ಥಿಗಳು ಸೇರಿ 'ವಿಜಯಾನಂದ ಆರ್ಟ್ಸ್' ಎಂಬ ಒಂದು ತಂಡವನ್ನು ರಚಿಸಿಕೊಂಡು ತಮ್ಮ ಗುರುವರ್ಯರ ನಾಟಕಗಳನ್ನು ಆಡುತ್ತಾರೆ. ಮುಂಬಯಿಯ ಸುಪ್ರಸಿದ್ಧ ನ್ಯಾಶನಲ್ ಸೆಂಟರ್ ಫಾರ್ ಪರ್ಫಾರ್ಮಿಂಗ್ ಆರ್ಟ್ಸ್ (ಟಾಟಾ ನಾಟ್ಯಗೃಹವೆಂದು ಕರೆಯಲ್ಪಡುವ) ಹಾಗು ಶಶಿ ಕಪೂರನು ಕಟ್ಟಿಸಿದ ಪೃಥ್ವಿ ಥೇಟರಿನಲ್ಲಿ ಈ ತಂಡದವರು ಅನೇಕ ನಾಟಕಗಳನ್ನು ಅನೇಕ ಸಲ ಆಡಿದ್ದಾರೆ. ಈ ಪ್ರತಿಷ್ಠಿತ ನಾಟ್ಯಗೃಹಗಳಲ್ಲದೆ ಮುಂಬಯಿಯ ವಿಶ್ವೇಶ್ವರಯ್ಯ ಸಭಾಗೃಹದಲ್ಲಿ, ಮೈಸೂರು ಸಂಘದಲ್ಲಿ ಕೂಡ ಅವರ ನಾಟಕಗಗಳ ಹಲವಾರು ಪ್ರಯೋಗಗಳಾಗಿವೆ. ಮುಂಬಯಿಯ ಹೊರಗಡೆ ಕೂಡ ಠಾಣೆ, ಗೋವಾ, ಸೂರತ್, ಗುಂಟಕಲ್, ಬೆಂಗಳೂರು ಹಾಗೂ ಮದ್ರಾಸಿನಲ್ಲೂ ಈ ತಂಡವು ಅನೇಕ ನಾಟಕಗಳನ್ನಾಡಿ ಆಯಾ ಸ್ಥಳಗಳ ನಾಟ್ಯ ವಿಮರ್ಶಕರ ಪ್ರಶಂಸೆಯನ್ನು ಪಡೆದಿದೆ.

ಅವರ ಎಲ್ಲ ನಾಟಕಗಳಲ್ಲಿ ಒಂದಿಲ್ಲೊಂದು ಸಾಮಾಜಿಕ ಪ್ರಶ್ನೆಯನ್ನು ವಿಶ್ಲೇಷಿಸುವ ಪ್ರಯತ್ನವಾಗುತ್ತದೆ. ಉದಾಹರಣೆಗೆ, ಅವರ ನಾಟಕ, 'ಗೊತ್ತಿದ್ದದ್ದೇ ಗೊತ್ತಾದಾಗ ಗಲ್ಲಲ್ಲೀಲ್ಲೂ ಗುಲ್ಲೋಗುಲ್ಲು" ನಾಟಕ ತೆಗೆದುಕೊಳ್ಳಿ. ಈ ನಾಟಕದಲ್ಲಿ ಡಾ. ಭಾರದ್ವಾಜರು ನಮ್ಮ ಇಂದಿನ ಶಿಕ್ಷಣ ಪದ್ಧತಿಯನ್ನು ಟೀಕಿಸಿದ್ದಾರೆ. ಜ್ಞಾನಿಗಳು, ಪ್ರಾಧ್ಯಾಪಕರು ತತ್ವವೇತ್ತರು, ಎಂದೆಲ್ಲ ಹೇಳಿಕೊಂಡು ಮೆರೆದಾಡುವ ಡಾಂಭಿಕ ಜನರು ಸಮಾಜಕ್ಕೆ ಕೊಡುವುದೇನು? ಅವರು ಹೇಳುವುದೆಲ್ಲ ನಮಗೆ ಮೊದಲೇ ಗೊತ್ತಿದೆ. ಅದನ್ನೇ ಅವರು ತಿರುಗಿ ತಿರುಗಿ ಬೇರೆ ಬೇರೆ ಶಬ್ದಗಳಲ್ಲಿ, ಸಾಮಾನ್ಯ ಜನರನ್ನು ಗೊಂದಲದಲ್ಲಿ ಹಾಕುವಂತೆ ಶಬ್ದಚ್ಛಲ ಪ್ರಯೋಗಿಸಿ ಹೇಳುತ್ತಾರೆ. ನಾವು ಇಂದು ಶಾಲೆ-ಕಾಲೇಜುಗಳಲ್ಲಿ ಪಡೆಯುತ್ತಿರುವದು ಶಿಕ್ಷಣದಲ್ಲಿ ಅದು ಬರೀ ಗಿಳಿಪಾಠ. ಇದರಿಂದ ಸಾಮಾಜಿಕ ಬದಲಾವಣೆ ಹೇಗೆ ಸಾಧ್ಯ? ಎಂದು ಪ್ರೇಕ್ಷಕರನ್ನು ಕೇಳುತ್ತಾರೆ ಡಾ. ಭಾರದ್ವಾಜರು. ಅವರ ಇನ್ನೊಂದು ನಾಟಕ 'ಅಂದೂ ಇಂದೂ ಒಂದೇ ಅಂದಿಂದ್ ಬೇರೇ ಅದೂ ಅಂದೂ ಇಂದೂ ಆಗೋದೊಂದೇ ಬಿಡು' ಒಂದೇ ಒಂದು ನಾಟಕದಲ್ಲಿ ಮನುಷ್ಯನ ಸ್ವಭಾವದ ಮೂಲ ಭೂತ ಪ್ರವೃತ್ತಿಯನ್ನು ನಿರೂಪಿಸಿರುವರು. ಮಹಾಭಾರತ ಕಾಲದ ವ್ಯಕ್ತಿಗಳೇ ಆಗಲಿ ಇಪ್ಪತ್ತನೆಯ ಶತಮಾನದ ಸಮಕಾಲೀನ ವ್ಯಕ್ತಿಗಳಾಗಲಿ ವೃತ್ತಿಯಲ್ಲಿ ಒಂದೇ ಎಂದು ಈ ನಾಟಕಹೇಳುತ್ತದೆ.

ತಾವು ಆಡಿದ್ದನ್ನು ಮಾಡುವ ಮತ್ತು ತಾವು ಬೋಧಿಸಿದ್ದನ್ನು ಅನ್ವಯಿಸುವ ಸರಳ ಪ್ರವೃತ್ತಿ ಡಾ. ಭಾರದ್ವಾಜರದು, ಡಂಭಾಚಾರ ಅವರಿಂದ ಗಾವುದ ದೂರ. ನಮ್ಮ ಶಿಕ್ಷಣ ಪದ್ಧತಿಯನ್ನು ಟೀಕಿಸುವ ಡಾ. ಭಾರದ್ವಾಜರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಿಲ್ಲ. ಇಂದಿನ ಶಾಲೆಗಳು ವ್ಯಕ್ತಿ ವಿಕಾಸದ ಹಾದಿಯಲ್ಲಿ ದೊಡ್ಡ ಬಂಡೆಗಲ್ಲು ಎಂದು ಹೇಳುವ ಅವರು ತಮ್ಮ ಮಕ್ಕಳಿಗೆ ತಮ್ಮ ಮನೆಯಲ್ಲಿಯೇ ಅಕ್ಷರಾಭ್ಯಾಸ ಮಾಡಿಸಿ ತಮ್ಮ ಪ್ರಾಯೋಗಿಕ ಯಜ್ಞದಲ್ಲಿ ತಮ್ಮ ಮಕ್ಕಳನ್ನು ಸೇರಿಸಿಕೊಂಡಿದ್ದಾರೆ. ಅವರ ಹಿರಿಯ ಮಗ ವಿಜಯಾನಂದ ತನ್ನ ಕಿರಿ ವಯಸ್ಸಿನಲ್ಲಿ ಈಗಾಗಲೇ ಪ್ರೇಕ್ಷಕರಿಂದ ಉತ್ಸ್ಫೂರ್ತ "ವಾಹವ್ವಾ" ಗಳನ್ನು ಪಡೆಯುವ ಕುಶಲ ಅಭಿನಯಪಟು.

ವಿಶ್ವವಿದ್ಯಾಲಯದ ಕೋಣೆಗಳಲ್ಲಿ ಅತ್ಯಂತ ಮೆಚ್ಚುಗೆಯ ಪ್ರಾಧ್ಯಾಪಕರಾದ ಡಾ ಭಾರದ್ವಾಜರ ರಂಗಮಂಚದ ಮೇಲೆ ಪ್ರಭಾವಿ ಅಭಿನಯಕಾರ, ಗಾಯಕರು ದಿಗ್ದರ್ಶಕರು. ಅವರ ರಂಗ ತಾಲೀಮು ಮಾಡುವ ಮುಂದೆ ಅವರ ಸುತ್ತ ಮುತ್ತ ಅವರೇ ರಚಿಸಿದ ಪಾತ್ರಗಳು ಗಾಳಿಯಂತೆ ಓಡಾಡುತ್ತಿರುತ್ತವೆ. ಯಾವಾಗ ತಮಗೆ ತಮ್ಮ ಬ್ರಹ್ಮನ ಮೈಯನ್ನು ಸೇರುವೆವೊ, ಯಾವಾಗ ತಮಗೆ ಅಭಿವ್ಯಕ್ತಿ ದೊರಕುವದೋ ಎಂದು ಕಾತುರವಾಗಿರುತ್ತವೆ. ನಾಟಕಗಳಲ್ಲಿ ಅಭಿನಯಿಸುವದಲ್ಲದೆ ಅವರು ನಾಟ್ಯ ಶಾಸ್ತ್ರದ ಮೇಲೆ ವ್ಯಾಖ್ಯಾನಗಳನ್ನು ಕೊಡುತ್ತಾರೆ. ಅವರ ವ್ಯಾಖ್ಯಾನಗಳು [illegible]

ಅಮೇರಿಕ, ಇಂಗ್ಲಂಡ್. ರಶಿಯಾ, ಥಾಯಿ-ಲ್ಯಾಂಡಗಳಲ್ಲೂ. ಆಗಿವೆ, ಆ ದೇಶಗಳಲ್ಲಿಯ ನಾಟ್ಯಶಾಸ್ತ್ರಜ್ಞರ ಅವರ ವೈಚಾರಿಕ ಕ್ರಾಂತಿಯನ್ನು ಹೊಗಳಿದ್ದಾರೆ.

ನಾಟಕ ಮತ್ತು ನಾಟ್ಯಶಾಸ್ತ್ರದೊಂದಿಗೆ ಡಾ. ಭಾರದ್ವಾಜರ ಇನ್ನೊಂದು ಆಸ್ಥೆ ಎಂದರೆ ಹರಿದಾಸ ಸಾಹಿತ್ಯ. ನಮ್ಮ ಹರಿದಾಸರು ಸಾವಿರಾರು ವರ್ಷಗಳ ಮೊದಲೇ ಇಂದಿನ ಎಲ್ಲ ಮಾನವೀಯ ಸಮಸ್ಯೆಗಳಿಗೆ ಪರಿಹಾರ ನೀಡಿರುವರು ಎಂದು ಡಾ. ಭಾರದ್ವಾಜರ ದೃಢ ಅಭಿಪ್ರಾಯವಾಗಿದೆ. ಅಷ್ಟೇ ಏಕೆ, ಹರಿದಾಸ ಸಾಹಿತ್ಯದಲ್ಲಿ ವಿಜ್ಞಾನವಿದೆ, ಶಾಸ್ತ್ರೀಯ ಪದ್ಧತಿ ಇದೆ, ಗುಂಡು ಗುಂಡಿನ ಆಧುನಿಕ ಸಮಾಜದ ವಿಶ್ಲೇಷಣೆ ಇದೆ ಎನ್ನುತ್ತಾರೆ ಅವರು. ಈ ದೃಷ್ಟಿಕೋನದಿಂದ ಅವರು ಹರಿದಾಸ ಸಾಹಿತ್ಯದ ನಿರೂಪಣೆಯನ್ನು ಪುಸ್ತಕ ರೂಪದಲ್ಲಿ ಬರೆದಿದ್ದು ಅವನ್ನು ಕರ್ನಾಟಕ ಸರಕಾರದವರು ವಿಶ್ವ ಕನ್ನಡ ಸಮ್ಮೇಳನ ಮಾಲಿಕೆಯಲ್ಲಿ ಪ್ರಕಟಿಸಿರುವರು.

ಡಾ. ಭಾರದ್ವಾಜರಿಗೆ ಅವರ ವೈವಿಧ್ಯಪೂರ್ಣ ಜೀವನಕ್ಕೆ ಅನುರೂಪ ಪತ್ನಿಯಾಗಿದ್ದಾರೆ ಡಾ. ಶ್ರೀಮತಿ ಗೀತಾ ಭಾರದ್ವಾಜ. ಅವರೂ ಅರ್ಥಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದವರು. ತಮ್ಮ ಪತಿಯ ಅಸಾಮಾನ್ಯ ವೈಚಾರಿಕ ಪ್ರವಾಹದಲ್ಲಿ ಅವರು ಪಾಲುಗೊಂಡಿದ್ದಾರೆ. ತಾವೂ ಸ್ವತಃ ನಾಟಕ ಬರೆಯು, ಆಡಿ, ದಿಗ್ದರ್ಶನ ಕೆಲಸವನ್ನು ಡಾ. ಗೀತಾ ಭಾರದ್ವಾಜ ಮಾಡುತ್ತಾರೆ. ಅವರು ಬರೆದ ಎರಡು ನಾಟಕಗಳು ಈಗಾಗಲೇ ವಿಜಯಾನಂದ ಆರ್ಟ್ಸ್ ತಂಡದಿಂದ ಪ್ರದರ್ಶಿಸಲ್ಪಟ್ಟಿವೆ. ಈ ತಂಡದ ಬಲಗೈಯಾಗಿ ಕೆಲಸಮಾಡುತ್ತಿರುವ ಶ್ರೀ ಸುಬ್ರಾಯ ಭಟ್ಟರು ವೃತ್ತಿಯಿಂದ ಬ್ಯಾಂಕರರಿದ್ದರೂ ಅತ್ಯುತ್ತಮ ನಟರು, ಉತ್ತಮ ಸಂಘಟಕರು,

ಒಂದು ವ್ಯಕ್ತಿಯಲ್ಲಿ ಎಷ್ಟೊಂದು ವೈವಿಧ್ಯಪೂರ್ಣ ವಿಚಾರ ಪ್ರವಾಹಗಳಿರಬಹುದು ಎಂಬುದಕ್ಕೆ ಡಾ. ಭಾರದ್ವಾಜರು ಒಂದು ಉತ್ಕೃಷ್ಟ ಉದಾಹರಣೆ. ಅವರು ವ್ಯಕ್ತಿ ಅಲ್ಲ- ಸಂಸ್ಥೆ ಎಂದು ಹೇಳಿದರೆ ಅದು ಸತ್ಯಕ್ಕೆ ಸಮೀಪ.



## ಸಹಾಯ ಬೇಕೆ?

ಎರಡು ವರ್ಷಗಳ ವರೆಗೆ ಬಾಡಿಗೆಯನ್ನು ಕೊಡದಿರುವುದರಿಂದ ಮನೆಯನ್ನು ಬಿಡಬೇಕೆಂದು ಮುಂಬಯಿ ಹೌಸಿಂಗ್ ಬೋರ್ಡ್ ನನಗೆ ನೋಟೀಸನ್ನು ಕಳಿಸಿತ್ತು. ಮನೆಯ ರಿಪೇರಿಯನ್ನು ಮಾಡಿಸಬೇಕೆಂದು ಎಷ್ಟು ಸಲ ಬರೆದುಕೊಂಡರೂ ಹೌಸಿಂಗ್ ಬೋರ್ಡ್ ಮಾಡಿಸದಿದ್ದರಿಂದ ಅನಿವಾರ್ಯವಾಗಿ ನಾನು ಹಾಗೆ ಮಾಡಬೇಕಾಯಿತೆಂದು ನಾನು ವಕೀಲರ ಸಹಾಯವಿಲ್ಲದೆ ಕೋರ್ಟನಲ್ಲಿ ವಾದಿಸಿದೆ. ಕೇಸು ಮೂರು ವರ್ಷಗಳ ವರೆಗೆ ನಡೆದು ಕೊನೆಗೆ ತೀರ್ಪು ನನ್ನಂತೆಯೇ ಆಯಿತು. ಇಂಥದೇ ಸಮಸ್ಯೆಯುಳ್ಳ ಯಾರಾದರೂ ಹೌಸಿಂಗ್ ಬೋರ್ಡಿನ ಬಾಡಿಗೆದಾರರು ಅಥವಾ ಬಾಡಿಗೆದಾರರ ಸಂಘದವರು ನನ್ನನ್ನು ಸಂಪರ್ಕಿಸಿದರೆ ಉಚಿತ ಸಲಹೆಯನ್ನು, ಅವರು ಇಚ್ಛಿಸಿದರೆ ತೀರ್ಮಾನದ ಪ್ರತಿಯನ್ನು ಕಳುಹಿಸಿಕೊಡಲು ಸಿದ್ಧನಿದ್ದೇನೆ.

—ಸಿ. ಆ್ಯಂಥೊನಿ ಲಲಿಯಿಸ್
(‹ಸಂಡೆ› ಪತ್ರಿಕೆಯಿಂದ ಸಾಭಾರ)

*Statement about ownership and other particulars about Monthly* **Kasturi**, *to be published in the first issue every year after the last day of February.*

**FORM IV**

*( See Rule 8 )*

| | | |
|---|---|---|
| 1. | Place of publication ... | HUBLI |
| 2. | Periodicity of its publication: | Monthly |
| 3. | Printer's name .. | M. N. Mahishi |
| | Whether citizen of India? – | Yes |
| | Address .. | Samyukta Karnataka<br>P.B. No. 30<br>Koppikar Road, Hubli-20 |
| 4. | Publisher's name ... | M. N. Mahishi |
| | Whether citizen of India? .. | Yes |
| | Address .. | Samyukta Karnataka<br>P.B. No. 30<br>Koppikar Road, Hubli-20 |
| 5. | Editor's name .. | S. A. Patil,<br>Managing Editor &<br>Receiver |
| | Whether citizen of India? .. | Yes |
| | Address ... | Samyukta Karnataka<br>P.B-No. 30<br>Koppikar Road, Hubli-20 |
| 6. | Names and addresses of individuals who own the newspaper and partners or share-holders holding more than one percent of the total capital. .. | Court Receiver,<br>Loka Shikshana Trust<br>(Movables)<br>Hubli |

I, M. N. Mahishi, hereby declare that the particulars given above are true to the best of my knowledge and belief.

Hubli
Dated 1-3-1985

M. N. MAHISHI
Signature of Publisher

# ಅಣಬೆಯ ಅಮಲು

**ಶೆ**ರೆ, ಸೇಂದಿ, ಗಾಂಜಾ, ಅಫೀಮುಗಳ ಸೇವನೆಯಿಂದ ಉಂಟಾಗುವ ಅಮಲಿನ ಆನಂದವನ್ನು ಪಡೆಯುವವರನ್ನು ನಾವು ಎಲ್ಲೆಡೆಯಲ್ಲಿಯೂ ಕಾಣಬಹುದು. ಆದರೆ ಅಣಬೆ('ನಾಯಿಕೊಡೆ')ಗಳನ್ನು ತಿಂದು ಮತ್ತೇರುವವರನ್ನು ನಾವು ಕೆಲವೇ ಕಡೆಗಳಲ್ಲಿ ಕಾಣಬಹುದು. ಕೆನಡಾದ ರಾಜಧಾನಿ ಓಟಾವಾ ಮತ್ತು ಅದರ ಸುತ್ತ-ಮುತ್ತಲ ಪ್ರದೇಶದಲ್ಲಿ ನವೆಂಬರ್-ಡಿಸೆಂಬರ್ ತಿಂಗಳುಗಳ ಅವಧಿಯಲ್ಲಿ ಒಂದು ತರದ ನಾಯಿಕೊಡೆಗಳು ಬೆಳೆಯುತ್ತವೆ. ಇಂಥ ಅಣಬೆಯನ್ನು ಅಲ್ಲಿಯ ನೂರಾರು ಜನರು ತಿಂದು ನಿಶೆಯನ್ನು ಪಡೆದು ಆನಂದವನ್ನು ಅನುಭವಿಸುತ್ತಾರೆ. ಇಂಥ ಅಮಲುಖೋರರಿಗೆ ಇದೊಂದು ಪ್ರಕೃತಿಯ ಮುಕ್ಕಟೆ ದೇಣಿಗೆಯಾಗಿದೆ. ಇಂಥ ಅಣಬೆ ಹುಡುಕಲು ಈ ಅಮಲಖೋರರು ಹೇಳದೆ-ಕೇಳದೆ ಅನ್ಯರ ತೋಟ, ಹಿತ್ತಲ, ಗದ್ದೆ ಇತ್ಯಾದಿಗಳಿಗೆ ದಾಳಿಯಿಡುತ್ತಾರೆ. ಈ ಭೂಮಾಲೀಕರಿಗೆ ಇಂಥ ಅಮಲುಖೋರರದೊಂದು ತಲೆಬೇನೆಯೇ ಸರಿ. ಇಂಥ ಅಮಲುಖೋರರ ಹಾವಳಿಯನ್ನು ತಪ್ಪಿಸುವದಕ್ಕೋಸ್ಕರ ಇಲ್ಲಿಯ ಎಷ್ಟೋ ಜನರು ಇಲ್ಲಿಯ ಸರಕಾರಕ್ಕೆ ಮೊರೆ ಹೋಗಿದ್ದಾರೆ. ಈ ದೇಶದ ಸರಕಾರವು, ಹೇಳದೆ-ಕೇಳದೆ ಅನ್ಯರ ಜಮೀನುಗಳಲ್ಲಿ ಪ್ರವೇಶ ಮಾಡುವವರಿಗೆ ೨೦೦೦ ಡಾಲರುಗಳ ದಂಡ, ಮತ್ತು ಆರು ತಿಂಗಳ ಶಿಕ್ಷೆಯನ್ನು ವಿಧಿಸುತ್ತದೆ.

ಈ ರೀತಿ ಅಮಲೇರಿಸುವ ಒಂದು ಪೌಂಡು (ಸುಮಾರು ೪೦೦ ಗ್ರಾಂ) ಅಣಬೆಯ ಬೆಲೆ ಸಂದರ್ಭಕ್ಕನುಗುಣವಾಗಿ ಮೂರರಿಂದ ನಾಲ್ಕು ಸಾವಿರ ಡಾಲರುಗಳಷ್ಟಾದರೆ ಮ್ಯಾಂಟ್ರಿಯಾಲ್‌ನಲ್ಲಿ ಒಂದು ಪೌಂಡು ಅಣಬೆ ಬೆಲೆ ಎಂಟು ಸಾವಿರ ಡಾಲರುಗಳು. ನಮ-ನಿಮಗೆ ಇದು ತೀರ ಸೋಜಿಗವೆನಿಸಬಹುದು. ಆದರೆ ಅಲ್ಲಿಯ ಈ ಅಣಬೆಯಿಂದ ನಿಶೆ ಪಡೆಯುವವರಿಗೆ ಇದು ಕೇವಲ ತೃಣಸಮಾನ.

**–ಎಂ. ವಿ. ಮೂಲಬಾವಡಿ**

# ಜಾತ್ಯಾತೀತ ಪ್ರಗತಿಪರ ಐಕ್ಯಭಾರತ ನಿರ್ಮಾಣಕ್ಕೆ

## ಇಂದು ಮತ್ತೊಮ್ಮೆ ಪಣ ತೊಡೋಣ ಈ ಚಿರಸ್ಮರಣೀಯ ದಿನದಂದು

೩೭ ವರ್ಷಗಳ ಹಿಂದೆ ಭಾರತದ ಜನತೆ ತನ್ನ ಆಶೆ, ಆಕಾಂಕ್ಷೆಗಳನ್ನು ವಿಜಯ ಪತಾಕೆಯೊಂದಿಗೆ ಅಭಿವ್ಯಕ್ತಿಗೊಳಿಸಿತು.

ನಮ್ಮ ದೇಶದ ಪ್ರತಿಯೊಂದು ರಾಜ್ಯವೂ ಜನತೆಯ ಆಸೆ, ಆಶೋತ್ತರಗಳನ್ನು ಪ್ರತಿಬಿಂಬಿಸುತ್ತದೆ. ಇದೇ ರಾಷ್ಟ್ರದ ವೈಭವವನ್ನು ಸಾರುತ್ತದೆ. ಪ್ರತಿ ರಾಜ್ಯವೂ ಈ ದಿಸೆಯಲ್ಲಿ ತನ್ನದೆ ಆದ ಕೊಡುಗೆಯನ್ನು ನೀಡಿದೆ. ಕರ್ನಾಟಕ ಈ ನಿಟ್ಟಿನಲ್ಲಿ ಸುದೀರ್ಘ ಇತಿಹಾಸ ಹೊಂದಿದೆ.

ಅನಾದಿ ಕಾಲದಿಂದಲೂ ಕರ್ನಾಟಕದ ಜನತೆ ಸಹಿಷ್ಣುಪರರು. ಇಲ್ಲಿ ಜೈನ ಮತ್ತು ಬೌದ್ಧ ಮತಗಳು ಪ್ರವೃದ್ಧಮಾನಗೊಂಡವು. ಕರ್ನಾಟಕದೊಂದಿಗೆ ಶಂಕರ, ಮಧ್ವ, ರಾಮಾನುಜ ಮತ್ತು ಬಸವಣ್ಣನವರ ನಂಟು ಅಪಾರ, ಅಮೋಘ. ಅನಂತರ ಮುಸಲ್ಮಾನರ ಮತ್ತು ಕ್ರೈಸ್ತ ಮತಗಳು ಹಿಂದೂ ಸಂತರು ಸಹಿಷ್ಣುತೆಯ ತತ್ವವನ್ನು ಶ್ರೀಮಂತಗೊಳಿಸಿದರು. ಇಂದಿಗೂ ಗುಡಿ ಗೋಪುರಗಳು, ಇಗರ್ಜಿಗಳು, ಮಸೀದಿಗಳು ಒಂದರೊಡನೊಂದು ಇರುವುದೇ ಇದಕ್ಕೆ ಸಾಕ್ಷಿ.

ಇದು ಕರ್ನಾಟಕ ರಾಜ್ಯ. ಪರರ ಬಗ್ಗೆ ಅಪಾರ ಆದರ, ದ್ವೇಷ ರಹಿತ, ಸಮಭಾವ, ಮಾನವತೆ ಇತಿಹಾಸ ಕಲಿಸಿಕೊಟ್ಟ ಪಾಠ. ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮೌರ್ಯರು ಮತ್ತು ವಿಜಯನಗರದ ರಾಯರುಗಳು ತಮ್ಮ ಶ್ರೀಮಂತ ಸಂಸ್ಕೃತಿಯನ್ನು ಇಲ್ಲಿ ಉಳಿಸಿ ಹೋಗಿದ್ದಾರೆ. ಅನಂತರ ಬಿಜಾಪುರದಲ್ಲಿ ಮುಸಲ್ಮಾನರು, ಮಂಗಳೂರಿನಲ್ಲಿ ಕ್ರೈಸ್ತರು, ಈ ಸಂಸ್ಕೃತಿಗೆ ತಮ್ಮದೇ ಆದ ವೈಶಿಷ್ಟ್ಯವನ್ನು ಲೇಪಿಸಿದ್ದಾರೆ.

ರಾಜ್ಯದಲ್ಲಿ ಕವಿಗಳು, ದಾರ್ಶನಿಕರು, ತತ್ವಜ್ಞಾನಿಗಳು ಜನಿಸಿದ್ದು ಶತಮಾನಗಳಿಂದ ಇವರುಗಳು ಜನತೆಯ ಮನಸ್ಸನ್ನು ಸುರೂಪಗೊಳಿಸಿದ್ದಾರೆ.

೧೯ನೇಯ ಶತಮಾನದ ಅಂತ್ಯದ ವೇಳೆಗೆ ರಾಷ್ಟ್ರೀಯ ಭಾವ ಉದ್ದೀಪನಗೊಂಡು ದೇಶಭಕ್ತಿ ಪ್ರಚೋದನೆಗೊಂಡಿತು. ಟಿಪ್ಪುಸುಲ್ತಾನರಿಂದ ಕಿತ್ತೂರು ರಾಣಿ ಚೆನ್ನಮ್ಮನ ವರೆಗೆ ನಾನಾಮತಗಳ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಗಳಿಕೆಗೆ ಶ್ರಮ ವಹಿಸಿದ್ದಾರೆ.

ಇಂದು ಕರ್ನಾಟಕ, ಇತರ ರಾಜ್ಯಗಳೊಂದಿಗೆ ಒಂದಾಗಿ ಗತವೈಭವಕ್ಕನುಗುಣವಾದ ನವಭಾರತ ನಿರ್ಮಾಣದಲ್ಲಿ ಕ್ರಿಯಾಶೀಲವಾಗಿದೆ.

ಕೈಗಾರಿಕಾ ಕ್ರಾಂತಿಯಲ್ಲೂ ಕರ್ನಾಟಕ ಮುಂಚೂಣಿಯಲ್ಲಿದೆ. ವಿಶ್ವೇಶ್ವರಯ್ಯನವರಂತಹ ದಿಗ್ಗಜರು ಹಾಕಿದ ದಾರಿಯಲ್ಲಿ ನಡೆದಿದೆ. ಇಂದು ಎಲ್ಲರಿಗೂ ಶಿಕ್ಷಣ ಉಚಿತವಾಗಿ ಲಭ್ಯವಾಗಿದೆ. ಶೇಕಡ ೮೦ಕ್ಕೂ ಹೆಚ್ಚು ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರು ಮತ್ತು ವಿದ್ಯುಚ್ಛಕ್ತಿ ಒದಗಿಸಲಾಗಿದೆ. ಶಿಶು ಮತ್ತು ಮಹಿಳಾ ಕಲ್ಯಾಣ ಮತ್ತು ಗ್ರಾಮಾಂತರ ಪ್ರದೇಶದ ಜನರ ಆರೋಗ್ಯಕ್ಕೆ ಗಮನ. ಜನತೆಯ ಆಶಯಗಳನ್ನು ಕ್ರಮೇಣ ಈಡೇರಿಸಲಾಗುತ್ತಿದೆ. ನಾರಿಗೆ ಸಂಪರ್ಕ ವ್ಯವಸ್ಥೆ ತೀವ್ರಗತಿಯಲ್ಲಿ ಬೆಳೆಯುತ್ತಿದೆ. ದೀನರ ಉದ್ಧಾರ ದಲಿತರ ಕಲ್ಯಾಣಕ್ಕೆ ಅಗಾಧ ಶ್ರಮ ವಹಿಸಲಾಗುತ್ತಿದೆ.

ಎಲ್ಲಾ ಮತಗಳ, ಜಾತಿಗಳ, ವರ್ಗಗಳ, ಭಾಷೆಗಳ ಜನರು ಇಲ್ಲಿ ಅನ್ಯೋನ್ಯವಾಗಿ ಬಾಳುತ್ತಿದ್ದು ಅಭ್ಯುದಯದತ್ತ ಮುನ್ನಡೆದಿದ್ದಾರೆ.

ಸಾಧಿಸಬೇಕಾದುದು ಇನ್ನೂ ಬಹಳವಿದೆ.

ಇಂದು ಕರ್ನಾಟಕದ ಜನತೆ ಅದರ ಗುರಿಯತ್ತ ಮುನ್ನಡೆದಿದ್ದಾರೆ.

ಡಿಐಪಿ/೩೦೩೦/೮೪

**ಕರ್ನಾಟಕ ವಾರ್ತೆ**

ಯಶಸ್ಸು ಮತ್ತು ಹೋರಾಟವನ್ನು ಕುರಿತು ಚಿಂತಿಸಿದನಂತೆ. ತಾನು ಸಾಯುವ ಕಾಲದಲ್ಲಿ ಹಾಸ್ಯದ ಹೊನಲ ಹರಿಸಿ ಜನತೆಯನ್ನು ರಂಜಿಸಿ ಅವರನ್ನು ನಗೆಗಡಲಲ್ಲಿ ತೇಲಿಸಬೇಕೆಂದು ಅವನು ಬಯಸಿದ್ದನೆಂದು ಮಾನ್‌ನ ಮಗಳು ಬರೆದಿದ್ದಾಳೆ.

"'ಬೇಸರ ಹಿಡಿಸುವ ಜಿಜ್ಞಾಸು ಲೇಖಕ' ಎಂದು ಕೆಲವರು ನನ್ನನ್ನು ಹೆಸರಿಸಿರುವುದನ್ನು ಈ ಕೃತಿಯು ಅಳಿಸಿ ಹಾಕುತ್ತದೆ" ಎಂದು ತನ್ನ ಪುಸ್ತಕ ಪ್ರಕಾಶಕರಿಗೆ ವಿನೋದವಾಗಿ ಬರೆದಿದ್ದ. ಅವನ ಈ ಅನಿಸಿಕೆ ನೆರವೇರಲಿ, ನೆರವೇರದಿರಲಿ ಫೆಲಿಕ್ಸ್ ಕ್ರುಲ್‌ನ ನಿವೇದನೆಗಳು ಒಬ್ಬ ಕಿಲಾಡಿಯ ಸಾಹಸ ಕೃತ್ಯಗಳನ್ನು ಕುರಿತು ಇಂದಿನ ಅತ್ಯಂತ ವಿನೋದಮಯ ಆಕರ್ಷಣೀಯ ಕೃತಿ ಎಂಬುದಕ್ಕೆ ಸಂದೇಹವಿಲ್ಲ.

ಬಡ ಕುಟುಂಬದಲ್ಲಿ ಹುಟ್ಟಿದ ಫೆಲಿಕ್ಸ್ ಕ್ರುಲ್‌ನು ಒಬ್ಬ ಪ್ರತಿಭಾವಂತ ವಂಚಕ, ಠಕ್ಕ, ಮೋಸಗಾರ, ಬಾಲ್ಯದಿಂದಲೂ ನೀತಿ ನಿಯಮಗಳು ಅವನಿಂದ ಮೈಲು ಮೈಲು ದೂರ. ಆಚಾರ ಸಂಪ್ರದಾಯಗಳು ಅವನ ಹತ್ತಿರವೂ ಸುಳಿದಿರಲಿಲ್ಲ. ಅಸಾಮಾನ್ಯವಾದ ನಟನಾ ಕಲೆ ಮತ್ತು ಚಾತುರ್ಯಗಳು ಅವನಿಗೆ ಜನ್ಮಸಿದ್ಧವಾಗಿ ಬಂದಿದ್ದವು. ತನ್ನ ಕುಯುಕ್ತಿ ಕುಟಿಲೋಪಾಯಗಳ ನಿರ್ವಹಣೆಗೆ ಈ ಸ್ವಭಾವವನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದ. ಫೆಲಿಕ್ಸ್ ಕ್ರುಲ್ ಹಲವು ಕಾಲ ಓದುಗರ ಮನಸ್ಸಿನಲ್ಲಿ ಉಳಿಯುವ ಪಾತ್ರ.

ಫೆಲಿಕ್ಸ್‌ನ ತಂದೆಯ ಒಬ್ಬ ಸ್ನೇಹಿತ ಒಂದು ನಾಟಕ ಕಂಪನಿಯಲ್ಲಿ ನಟ. ಒಂದು ಸಂಜೆ ತಂದೆಯು ಫೆಲಿಕ್ಸನನ್ನು ನಾಟಕ ನೋಡಲು ಕರೆದೊಯ್ಯುತ್ತಾನೆ. ಸ್ವಭಾವತಃ ಅನುಕರಣಶೀಲನಾದ ಫೆಲಿಕ್ಸನಿಗೆ ನಾಟಕ ನೋಡಿದ ಅನುಭವವು ಅವಿಸ್ಮರಣೀಯ. ಅವನ ಅಂತರಂಗದ ಒಂದು ಕಣ್ಣು ತೆರೆದಂತಾಗುತ್ತದೆ. ಬಾಲಕ ಫೆಲಿಕ್ಸನನ್ನು ತಂದೆಯು ಬಣ್ಣದ ಮನೆಗೆ ಕರೆದೊಯ್ಯುತ್ತಾನೆ. ಅಲ್ಲಿ ತನ್ನ ತಂದೆಯ ಸ್ನೇಹಿತ ಮತ್ತು ಇತರ ನಟರು ತಮ್ಮ ವೇಷಭೂಷಣ ಬಣ್ಣಗಳನ್ನು ತೆಗೆದು ಹಾಕಿದಾಗ ಫೆಲಿಕ್ಸನ ಭ್ರಮನಿರಸನವಾಗುತ್ತದೆ. ಈ ಜಗತ್ತಿನಲ್ಲಿ ನಟನೆಯಿಂದ ಏನೆಲ್ಲ ಎಷ್ಟೆಲ್ಲ ಸಾಧಿಸಬಹುದಲ್ಲ ಎಂದು ಅನಿಸುತ್ತದೆ. ಆ ಕ್ಷಣದಿಂದ ಫೆಲಿಕ್ಸನ ಮನೋಗತಿಯಲ್ಲಿ ಅದ್ಭುತ ಬದಲಾವಣೆ ಆಗುತ್ತದೆ. ಅವನ ಸ್ವಭಾವದಲ್ಲಿ ಜನ್ಮಜಾತವಾಗಿ ಬಂದಿದ್ದ ನಟನಾ ಶಕ್ತಿ ವಿಕಸಿತವಾಗಿ ಹೊರ ಹೊಮ್ಮುತ್ತದೆ.

ಶಾಲೆಗೆ ಹೋಗದೆ ತಪ್ಪಿಸಿಕೊಳ್ಳಬೇಕೆಂದು ಅನಿಸಿದಾಗ ಫೆಲಿಕ್ಸನು ರಜಾ ಚೀಟಿಗೆ ತಂದೆಯ ರುಜುವಿನಂತೇ ಕಳ್ಳ ರುಜುಹಾಕಿ ಕೊಡುತ್ತಾನೆ. ತಾನು ಕೇಳಿದ ಓದಿದ ಯಾವುದೋ ರೋಗದ ಲಕ್ಷಣಗಳಂತೇ ನಟಿಸಿ ಮನೆಯ ಡಾಕ್ಟರಿಗೆ ಮಂಕು ಹಿಡಿಸುತ್ತಾನೆ. ಯುದ್ಧಕಾಲದಲ್ಲಿ ಸೈನ್ಯಕ್ಕೆ ಸೇರಬೇಕೆಂಬ ಸಮಯ ಬಂದಾಗ ತೀವ್ರವಾದ ಮೂರ್ಛೆರೋಗ ಬಂದವನಂತೆ ನಟಿಸಿಬಿದ್ದು ಒದ್ದಾಡಿ ಬಾಯಲ್ಲಿ ಜೊಲ್ಲು ನೊರೆಗಳನ್ನುಕ್ಕಿಸಿ ಸೈನ್ಯಕ್ಕೆ ಸೇರುವುದನ್ನು ತಪ್ಪಿಸಿಕೊಳ್ಳುತ್ತಾನೆ.

ಮಗನ ಗತಿಗಮನವನ್ನು ಕಂಡು ದಿಕ್ಕುತೋಚದ ತಂದೆಯು ತನ್ನ ದುಃಖವನ್ನು ಆತ್ಮೀಯ ಸ್ನೇಹಿತನಲ್ಲಿ ಹೇಳಿಕೊಳ್ಳುತ್ತಾನೆ. ಆ ಸ್ನೇಹಿತನು ಫೆಲಿಕ್ಸನನ್ನು ಪ್ಯಾರಿಸ ಒಂದು ಹೋಟಲಲ್ಲಿ ಕೆಲಸಕ್ಕೆ ಸೇರಿಸುತ್ತಾನೆ. ಪ್ಯಾರಿಸಿಗೆ ಹೋಗುವಾಗ ಗಡಿಯಲ್ಲಿ ಸುಂಕದವರ ತಪಾಸಣೆ ನಡೆಯುವ ಗಡಿಬಿಡಿಯಲ್ಲಿ ಪಕ್ಕದಲ್ಲಿದ್ದ ಒಂದು ಹೆಂಗಸಿನ ಆಭರಣದ ಸಣ್ಣ ಪೆಟ್ಟಿಗೆಯನ್ನು ಕೈಚಳಕದಿಂದ ಲಪಟಾಯಿಸಿ ತನ್ನ ಪೆಟ್ಟಿಗೆಗೆ ಸೇರಿಸಿಕೊಳ್ಳುತ್ತಾನೆ.

ಹೋಟೆಲಲ್ಲಿ ಅವನಿಗೆ ಸಿಕ್ಕಿದುದು ಲೋಟ ತೆಗೆದು ಮೇಜು ಸ್ವಚ್ಛಮಾಡುವ ಕೆಲಸ. ಅವನು ಅದರಿಂದ ಅತೃಪ್ತ. ಹೋಟೆಲಿನ [illegible] ಕೊಂಡವರ ಅಭ್ಯಾಸವನ್ನು [illegible] ರಲ್ಲಿ ನಿಪುಣನಾದ ಫೆಲಿಕ್ಸನು ಬಹಳ ದಿನ ಆ ಕೆಲಸದಲ್ಲಿ ನಿಲ್ಲಲಿಲ್ಲ. ಶೀಘ್ರದಲ್ಲಿಯೇ ವೆಯಿಟರ್ ಸ್ಥಾನಕ್ಕೆ ಏರಿ ಹೋಗುತ್ತಾನೆ. [illegible] ತನ್ನ ನಾಜೂಕಿನ [illegible]

ಚಾತುರ್ಯದಿಂದ ಹೋಟೆಲಲ್ಲಿ ಉಳಿದಿದ್ದ ಒಬ್ಬ ಯುವತಿಯ ಕೃಪೆಗೆ ಪಾತ್ರನಾಗುತ್ತಾನೆ. ಅವಳ ಹೆಸರು ಹೋಪ್ಲ. ಒಬ್ಬ ಧನಿಕ ವ್ಯಾಪಾರಿಯ ಹೆಂಡತಿ. ಯುವಕನಾದ ಫೆಲಿಕ್ಸನ ನಯ ನುಡಿ ಬಣ್ಣನೆಗಳಿಗೆ ಮಾರು ಹೋದಳು. ಒಂದು ವಾರ ಕಳೆಯುವುದರಲ್ಲಿ ಅವಳು ಫೆಲಿಕ್ಸನಿಗೆ ತನ್ನ ತನು ಮನಗಳನ್ನು ಒಪ್ಪಿಸುತ್ತಾಳೆ. ಹಿಂಸಾರಹಿತ ಸ್ವಭಾವದ ಅವಳಿಗೆ ಗಂಡಸಿನ ಕೈಲಿ ಅವಮಾನಿತಳಾಗಿ ನೋಯಿಸಿಕೊಳ್ಳುವುದು ಹಿತಕರವಾದ ಅನುಭವ. ಫೆಲಿಕ್ಸನಿಗೆ ಅದು ಸದವಕಾಶ. ಅವಳ ಮನಸ್ಸು ತೃಪ್ತಿ ಹೊಂದುವ ವರೆಗೆ ಅವಳನ್ನು ಅವಮಾನಿಸಿ ಹಿಂಸಿಸಿ ಅವಳಿಂದ ಲಾಭ ಪಡೆಯುತ್ತಾನೆ. ಸುಂಕದ ಕಟ್ಟೆಯ ಬಳಿ ಅವಳ ಆಭರಣದ ಪೆಟ್ಟಿಗೆಯನ್ನು ಕದ್ದುದು ತಾನೇ ಎಂದು ಹೇಳುತ್ತಾನೆ. ಅವಳಿಗೆ ತನ್ನ ಅಜಾಗರೂಕತೆಯ ಕುಂದನ್ನು ಎತ್ತಿ ತೋರಿಸಿದ್ದು ತುಂಬಾ ಸಂತೋಷವನ್ನು ಉಂಟು ಮಾಡುತ್ತದೆ. ಹಾಗೆ ತನ್ನ ಎಲ್ಲ ಆಭರಣಗಳನ್ನೂ ಕಳವು ಮಾಡಿ ಮಾರಿಕೋ ಎಂದು ಸಲಹೆ ನೀಡುತ್ತಾಳೆ. ಫೆಲಿಕ್ಸನಿಗೆ ಅದಕ್ಕಿಂತ ಹೆಚ್ಚೇನು ಬೇಕು. ಅವನು ಕಾದಿದ್ದ ಅದಕ್ಕಾಗಿ!

ಹೋಟಲಿಗೆ ಒಬ್ಬ ಗಣ್ಯ ಅತಿಥಿ ಬಂದಿಳಿದ. ಅವನು ಒಬ್ಬ ಯುವಕ. ಸಮಾಜದ ಗಣ್ಯ ವ್ಯಕ್ತಿ ಮಾರ್ಕ್ವಿಸ್ ಪ್ರಶಸ್ತಿ ಬೇರೆ. ಜೊತೆಗೆ ಅವನ ಪ್ರಣಯಿನಿ ಒಬ್ಬ ನರ್ತಕಿ. ಇಬ್ಬರೂ ಫೆಲಿಕ್ಸನ ಹಾಸ್ಯ ವಿನೋದ ಸ್ವಭಾವವನ್ನು ಮೆಚ್ಚಿ ಸ್ಥಾನಮಾನಗಳನ್ನು ಲಕ್ಷಿಸದೆ ಅವನೊಡನೆ ನಿಕಟವಾಗಿ ವ್ಯವಹರಿಸುತ್ತಾರೆ. ಮಾರ್ಕ್ವಿಸನ ತಂದೆಗೆ ಮಗನು ಒಬ್ಬ ಸಾಮಾನ್ಯ ನಟಿಯೊಡನೆ ಸಂಬಂಧ ಇಟ್ಟುಕೊಂಡುದು ಸಹಿಸಲಿಲ್ಲ. ಮಗ ಪ್ರಪಂಚಪರ್ಯಟನ ಹೋಗಲು ನಿರ್ಧರಿಸುತ್ತಾನೆ. ನರ್ತಕಿಯು ತಾನಿದ್ದ ಸ್ಥಳವನ್ನು ಬಿಟ್ಟು ಹೋಗಲು ಇಷ್ಟಪಡಲಿಲ್ಲ. ಮಾರ್ಕ್ವಿಸನು ಇಬ್ಬಂದಿಗೆ ಸಿಕ್ಕಿ ತನ್ನ ಕಷ್ಟವನ್ನು ಫೆಲಿಕ್ಸನೊಡನೆ ಹೇಳಿಕೊಳ್ಳುತ್ತಾನೆ. ಸಮಯಸಾಧಕ ಫೆಲಿಕ್ಸ್ ಥಟ್ಟನೆ ಒಂದು ಸಲಹೆ ಕೊಡುತ್ತಾನೆ.

ಮಾರ್ಕ್ವಿಸ್ ಅದಕ್ಕಾಗಿ ಚಿಂತಿಸುವುದು ಬೇಡ ಅವನು ತನ್ನ ಪ್ರಣಯಿನಿಯೊಂದಿಗೆ ಪ್ಯಾರಿಸಿನಲ್ಲಿಯೇ ಇರಲಿ. ಮಾರ್ಕ್ವಿಸನಿಗೆ ಬದಲಾಗಿ ಅವನ ಸ್ಥಾನದಲ್ಲಿ ತಾನು ಹೋಗಬಲ್ಲೆ. ಮಾರ್ಕ್ವಿಸನಂತೆ ವೇಷ ಬದಲಾಯಿಸುವುದು ಕಷ್ಟವಲ್ಲ ಪ್ರಪಂಚ ಪರ್ಯಟನೆಗೆ ಅವಶ್ಯಕವಾದ ಕಾಗದ ಪತ್ರ ಮತ್ತು ಹಣವನ್ನು ಮಾರ್ಕ್ವಿಸ್ ತನಗೆ ಕೊಟ್ಟರಾಯಿತು. ಫೆಲಿಕ್ಸನ ಸಲಹೆ ಮಾರ್ಕ್ವಿಸನಿಗೆ ಒಪ್ಪಿಗೆ ಆಗುತ್ತದೆ. ಮಾರ್ಕ್ವಿಸನ ಬದಲು ಫೆಲಿಕ್ಸನು ಪ್ರಪಂಚ ಪರ್ಯಟನೆಗೆ ಹೊರಡುತ್ತಾನೆ.

ಪೋರ್ಚುಗಲ್ಲಿಗೆ ಮೊದಲ ಪಯಣ. ಲಿಸ್ಬನಿಗೆ ಹೋಗುವಾಗ ರೈಲಿನಲ್ಲಿ ಲಿಸ್ಬನನಗರದ ನ್ಯಾಚುರಲ್ ಹಿಸ್ಟರಿ ಮ್ಯೂಸಿಯಂನ



ಪ್ರೊಫೆಸರನ ಭೇಟಿಯಾಗುತ್ತದೆ. ಮಾರ್ಕ್ವಿಸನಂತೆ ನಟಿಸುತ್ತಿದ್ದ ಫೆಲಿಕ್ಸನ ಹೆಸರು ಪ್ರಶಸ್ತಿ ಸ್ಥಾನಮಾನಗಳನ್ನು ಕೇಳಿ ಪ್ರೊಫೆಸರ್ ದಂಗಾಗಿ ಫೆಲಿಕ್ಸನಿಗೆ ಮರುಳಾಗುತ್ತಾನೆ. ಮಾತಿನ ಸಂದರ್ಭದಲ್ಲಿ ಪ್ರೊಫೆಸರನು ತಾನು ಬರೆದ ವಿಕಾಸವಾದ ವಿಚಾರವಾಗಿ ವಿಶದೀಕರಿಸುತ್ತಾನೆ. ಆಗ ಫೆಲಿಕ್ಸನು "ಪ್ರೊಫೆಸರ್ ನೀವು ಹೇಳಿದ ವಿಚಾರ ಬಹಳ ರೋಮಾಂಚಕವಾದುದು. ನಾನು ಕೇಳಿದುದು ಇದೇ ಮೊದಲ ರೋಚನೀಯ ವಿಚಾರವಲ್ಲ. ಆದರೂ ನೀವು ಹೇಳಿದುದು ಅತ್ಯಂತ ರೋಮಾಂಚನೀಯ ವಿಚಾರ," ಎಂದು ಹೇಳುತ್ತಾನೆ. ಫೆಲಿಕ್ಸನ ಭಟ್ಟಂಗಿತನದ ಹೊಗಳು ಮಾತುಗಳಿಗೆ ಮರುಳಾದ ಪ್ರೊಫೆಸರ್ ಅವನನ್ನು ತನ್ನ ಮನೆಗೆ ಆಮಂತ್ರಿಸುತ್ತಾನೆ. ಬಿಗುಮಾನ ತೋರಿ ಒಪ್ಪಿಕೊಂಡ ಫೆಲಿಕ್ಸ್ ಲಿಸ್ಬನಲ್ಲಿ ಅವರ ಮನೆಗೆ ಅತಿಥಿ. ಪ್ರೊಫೆಸರ್‌ನ ಹೆಂಡತಿ ಮತ್ತು ವಯಸ್ಸಿಗೆ ಬಂದ ಮಗಳು ಅಪರೂಪದ ಗಣ್ಯ ಅತಿಥಿಯನ್ನು ಸಂತೋಷದಿಂದ ಸ್ವಾಗತಿಸುತ್ತಾರೆ. ಮಾತು ನಡತೆಗಳಲ್ಲಿ ನಯಗಾರಿಕೆಯನ್ನು ಬಲ್ಲ ಫೆಲಿಕ್ಸ್ ತಾಯಿ ಮಗಳನ್ನು ತನ್ನ ಮಾತಿನ ಮೋಡಿಯಿಂದ ಮರುಳು ಮಾಡುತ್ತಾನೆ. ಒಂದು ದಿನದ ಆತಿಥ್ಯ ಎಂಟು ದಿನಕ್ಕೆ ಮುಂದುವರಿಯುತ್ತದೆ.

ಒಂದು ಸಂಜೆ ಫೆಲಿಕ್ಸನು ಹೂದೋಟದಲ್ಲಿ ಪ್ರೊಫೆಸರನ ಮಗಳನ್ನು ಅಪ್ಪಿಕೊಂಡು ಮುದ್ದಾಡುವುದನ್ನು ತಾಯಿಯು ನೋಡುತ್ತಾಳೆ. ಫೆಲಿಕ್ಸನು ಮನೆಗೆ ಬಂದ ಮೇಲೆ ಸಮಯ ನರಿತು ಅವನ ಎದುರು ನಿಂತು ವಯ್ಯಾರದಿಂದ "ಮಾಗಿದ ಹಣ್ಣನ್ನು ಬಿಟ್ಟು ದೋರೆಗಾಯನ್ನು ಬಯಸುವ ನೀನು ಎಂಥ ಮನುಷ್ಯ? ನಾಚಿಕೆ ಆಗೋಲ್ಲವೆ?" ಎಂದು ಕೇಳುತ್ತ ಅವನ ಸನಿಹಕ್ಕೆ ಹೋಗುತ್ತಾಳೆ. ಒದಗಿ ಬಂದ ಸಮಯಾವಕಾಶಗಳಿಗೆ ಹೊಂದಿಕೊಳ್ಳುವುದರಲ್ಲಿ ಪ್ರವೀಣನಾದ ಫೆಲಿಕ್ಸನಿಗೆ ಆ ಸಂದರ್ಭದ ಉಪಯೋಗ ಪಡೆಯಲು ಸಿಗ್ಗೂ ಇರಲಿಲ್ಲ, ಸಂಕೋಚವೂ ಇರಲಿಲ್ಲ. ಅವನ ಪ್ರಣಯಾಚರಣೆಯಿಂದ ಉಂಟಾದ ಮಾದಕ ಆನಂದಾತಿರೇಕದಿಂದ ಅವಳು. "ಆಹಾ ಓಹೋ ಹಾ ಹಾ" ಎಂದು ಹಿಗ್ಗಿ ಕ್ಷಣಕಾಲ ಮೈಮರೆತು ಎಚ್ಚೆತ್ತು "ಸಂತೋಷದಿಂದ ಮೂಲಭೂತವಾದ ಅತ್ಯಗಾಧವಾದ ಶಕ್ತಿಯೊಂದು ನನ್ನನ್ನು ಇಂಥ ಹರ್ಷೋನ್ಮಾದದ ಉತ್ತುಂಗ ಪರವಶತೆಗೆ ತಳ್ಳಿದೆ ಬಿರುಗಾಳಿಯಂತೆ ಬೀಸಿ ಎತ್ತರಕ್ಕೆ ಏರಿಸಿದೆ. ನಿನ್ನ ಬಾಹುಬಂಧನದ ಬಿಗಿಯ ಮುದ್ದಿನಲ್ಲಿ ಐಬೀರಿಯಾದ ಕನ್ನೇರಿನ ಟಕ್ಕೂ ಮಿಗಿಲಾದ ರೋಮಾಂಚನದಿಂದ ಮಹಾರಾಣಿಗೆ ಸದೃಶವಾದ ನನ್ನ ಎದೆಯುಬ್ಬುಗಳು ನಿರಿಳಿಯುತ್ತಿವೆ." ಎನ್ನುತ್ತಾಳೆ.

ಕತೆ ಹೀಗೆ ಮುಗಿಯುತ್ತದೆ. ಕಾದಂಬರಿಯ ಪಾತ್ರಗಳ ನಿರ್ಮಾಣ, ಘಟನೆಗಳ ನಿರೂಪಣೆ, ಶೈಲಿ, ಚುರುಕಾದ ಹಾಸ್ಯ, ಮೊನಚಾದ ವ್ಯಂಗ್ಯ ಎಲ್ಲವೂ ಓದುಗನ ಗಮನವನ್ನು ಸೆರೆಹಿಡಿದು ನಿಲ್ಲಿಸುತ್ತವೆ. ಓದಿ ಪುಸ್ತಕವನ್ನು ಕೆಳಗಿಡುವಾಗ ಓದುಗ ಸಂತೃಪ್ತ ಹಸನ್ಮುಖಿ.

ಸ್ಟೆಂಡ್ಹಾಲ್ ಮತ್ತು ಶಿರ್ವಾಂತೆಯ ಉಜ್ವಲ ಸಂಪ್ರದಾಯವನ್ನು ಅನುಸರಿಸಿದ ಉತ್ತಮ ಕೃತಿ 'ಫೆಲಿಕ್ಸ್ ಕ್ರುಲ್‌ನ ನಿವೇದನೆಗಳು'. ಅದು ಇಂದಿನ ಪಾಶ್ಚಾತ್ಯ ನೈತಿಕ ಜೀವನ ಎತ್ತ ಸಾಗುತ್ತಿದೆ ಎಂಬುದಕ್ಕೆ ಎತ್ತಿ ಹಿಡಿದ ಕನ್ನಡಿ ಮತ್ತು ಪರಿಣಾಮಕಾರಿ ವ್ಯಾಖ್ಯಾನ.

ಫೆಲಿಕ್ಸ ಕ್ರುಲ್‌ನ ನಿವೇದನೆಗಳು ಕೃತಿಯನ್ನು ರಚಿಸಿದ ಥಾಮಸ್ ಮ್ಯಾನ್ ಸಾಹಿತ್ಯಕ್ಕಾಗಿ ಕೊಡುವ ನೋಬಲ್ ಪ್ರಶಸ್ತಿವಿಜೇತ. ಅವನ ಕೃತಿಗಳಲ್ಲಿ ನವಿರು ಹಾಸ್ಯದಿಂದ ಕೂಡಿದ ಆಧ್ಯಾತ್ಮಿಕ ಪ್ರಜ್ಞೆ, ಮನಸ್ಸನ್ನು ನೋಯಿಸದಂಥ ವ್ಯಂಗ್ಯ ಸೈರಣೆ ಮತ್ತು ಒಂದು ಬಗೆಯ ನಿರ್ಲಿಪ್ತ ಭಾವಗಳನ್ನು ಗುರುತಿಸಬಹುದು. ಥಾಮಸ್ ಮಾನ್ ಒಬ್ಬ ಸೃಜನಶೀಲ ಮನುಷ್ಯ ದಾರ್ಶನಿಕ.



# ರಾಜಬೀದಿಗಳು

ಬಿ. ಆರ್. ವಾಡಪ್ಪಿ

---

**ಕನ್ನಡದಲ್ಲಿ ಲಲಿತ ಪ್ರಬಂಧ ಇತ್ತೀಚೆ ಅಪರೂಪವಾಗುತ್ತಿರುವ ಸಾಹಿತ್ಯ ಭಾಗ. ಒಂದು ಕಾಲಕ್ಕೆ ಈ ಬಗೆಯ ಬರವಣಿಗೆಯಲ್ಲಿ ಸಾಕಷ್ಟು ಕೃಷಿ ಮಾಡಿ ಹೆಸರಾಗಿರುವ ಲೇಖಕರ ಲಾಲಿತ್ಯದ ಮಾದರಿ ಇದು.**

---

ಎಲ್ಲ ರಾಜಬೀದಿಗಳು ನಮ್ಮ ಬೀದಿಗಳೇ ಆಗಿರುವುದರಿಂದ ನಮಗೇಕೆ ಭಯ ಹೇಳಿ? ಅವುಗಳ ಮೇಲೆ ಸ್ವಚ್ಛಂದವಾಗಿ ನಾವು ಓಡಬಹುದು, ಕೂಡಬಹುದು, ಹಾರಾಡಬಹುದು. ಎಲ್ಲ 'ಬಹುದು'ಗಳಿಗೂ ಅವಕಾಶವಿದೆ. ನಡೆದಾಡುವುದಕ್ಕಂತೂ ಯಾರ ಹಂಗೂ ಇಲ್ಲವೇ ಇಲ್ಲ. ಹೀಗೆ ತಿಳಿದುಕೊಂಡು ವರ್ತಿಸಿದರೆ ಏನಾಗಬಹುದು ಬಲ್ಲಿರಾ? ಹಾಸ್ಪಿಟಲ್ ತುಂಬಬಹುದು, ಸ್ಮಶಾನಯಾತ್ರೆ ನಿತ್ಯನೋಟವಾಗಬಹುದು. ಛೀ ಛೀ ಇದು ಏನು ಅಸಹ್ಯ ಮಾತು ಎಂದು ನೀವು ಮೂಗು ಏರಿಸಿದರೆ ಒಂದು ರಾಜಬೀದಿಗುಂಟ ಹೊರಡಿರಿ; ಬಹು ಎಚ್ಚರಿಕೆಯಿಂದ ನಡೆಯಿರಿ. ಇಲ್ಲವಾದರೆ ಮೇಲೆ ಹೇಳಿದ ಅಸಹ್ಯ ಹೇಳಿಕೆ ನಿಮಗೇ ಅನ್ವಯಿಸಬಹುದು. ನನಗೆ ಗೊತ್ತು, ನೀವು ಒಳ್ಳೆಯವರು, ತಿಳಿದವರು. ರಾಜಬೀದಿ ನಿಯಮ ಪರಿಪಾಲಕ ಧುರಂಧರರು ಎಂದು. ನಾನೇನೋ ನಿಮ್ಮ ಮೇಲಿನ ಅಭಿಮಾನದಿಂದ ಒಂದು ಹೇಳಿಕೆ ಕೊಟ್ಟರೂ ಎಲ್ಲರ ಮನಸ್ಸೂ ಎಲ್ಲ ವೇಳೆಯಲ್ಲಿಯೂ ಸರಿಯಾಗಿ ಇರುತ್ತದೆಯೋ ಹೇಳಿ. ಗ್ಯಾರಂಟಿ ಏನು? ನೀವು ಒಮ್ಮೊಮ್ಮೆ ಕವಿಯಾಗಿ ಕಲ್ಪನಾವಿಹಾರದಲ್ಲಿ ಗಾಳಿಗುಂಟ ತೇಲುತ್ತ ರಾಜಬೀದಿಯಲ್ಲಿ ಹೊರಟಿದ್ದರೆ, 'ಏನಪ್ಪಾ ನಿನಗೆ ಜೀವ ಬೇಡಾಗಿದೆಯೆ?' ಎಂದು ಟ್ರಕ್ ಡ್ರೈವರ್ ಗುಡುಗಬಹುದು. ಆಗ ನಾವು ಬದಿಗೆ ಸರಿದು ಭೂಲೋಕದ ಮೇಲೆ ಬರಬಹುದು. ಅದಕ್ಕೇ ನಾನು ಹೇಳುವುದು ಎಚ್ಚರಿಕೆ ಅವಶ್ಯ ಎಂದು. ನಮಗೆ ಎಚ್ಚರಿಕೆ ಕೊಡಲು ನೀವಾರು? ಎಂದು ಅಧಿಕ ಪ್ರಸಂಗಿಯಾಗಿ ನುಡಿದರೆ ನಿಮ್ಮ ಸ್ವಾತಂತ್ರ್ಯದ ಸಂಭ್ರಮ ತಡೆಯಲು ಪೋಲೀಸಿನವ ಪ್ರತ್ಯಕ್ಷನಾಗುತ್ತಾನೆ.

ನಾವು ಸ್ವತಂತ್ರರು. ಆದರೆ ಅದು ಹೆರವರ ಸ್ವಾತಂತ್ರ್ಯವನ್ನು ಅಪಹರಣ ಮಾಡುವ ಸ್ವಾತಂ

ತ್ರವಾದರೆ ಸ್ವೇಚ್ಛೆಯಾದೀತು. ಸ್ವೇಚ್ಛಾವೃತ್ತಿಗೆ ಶಾಸನ ತಪ್ಪಿಲ್ಲ ಎಂದು ನಾನು ಗಟ್ಟಿಯಾಗಿ ಹೇಳಿದರೆ ತಾವು ತಮ್ಮ ಸ್ವಾತಂತ್ರ್ಯ ಹರಣವಾಯಿತೆಂದು ಭಾವಿಸಿ ಕೋರ್ಟಿಗೆ- ಅಲ್ಲಲ್ಲ, ಕನ್ನಡದಲ್ಲಿ ಹೇಳುವುದಾದಲ್ಲಿ ನ್ಯಾಯಾಲಯಕ್ಕೆ ಹೋಗಬಹುದು, ನೋಡಿ, ಇದು ಏನ್ನಾದರೂ ಪ್ರಜಾರಾಜ್ಯ. ಮತ್ತೆ ಮುಥಾರಿಗಳ ರಾಜ್ಯವಲ್ಲ. ಗೆಳೆಯರೆ, ನಾವು ಬಾಳುವಾ ನೀವೂ ಬಾಳಿರಿ ಎಂಬುವ ಭಾವ ನಮ್ಮದಾಗಲಿ ಎಂದು ತಿಳಿಯುವದು ಉಚಿತ ಇಲ್ಲವೇ ಖಚಿತ. ರಾಜಬೀದಿಗಳ ಮೇಲೆ ಶೇಖ ಮುಹಮ್ಮದನ ಸವಿಗನಸು ಕಾಣುವುದು ಸಲ್ಲ. ನಾಲ್ಕಾಣೆ ಕೂಲಿ ಗೊತ್ತುಮಾಡಿಕೊಂಡು ತುಪ್ಪದ ಕೊಡ ಹೊತ್ತುಕೊಂಡು ಹೊರಟ ಶೇಖ ಮುಹಮ್ಮದ ಆ ಹಣದಿಂದ ಒಂದು ಹೇಂಟೆ ಕೊಂಡು ಅದರ ಮಿಳ್ಳೆ ಬೆಳೆಯಿಸಿ ಸಿರಿವಂತನಾಗುವ ಹಗಲುಗನಸು ಕಾಣುತ್ತ ಸಿರಿವಂತರ ಮಗಳ ಕೈ ಹಿಡಿಯುವ ಬಯಕೆಯಲ್ಲಿದ್ದಾಗ ಎಡವಿ ತುಪ್ಪದ ಕೊಡ ಒಡೆದು ಕೊಂಡು ಪೆಟ್ಟು ತಿಂದ ಇತ್ಯಾದಿ ಕಥೆ ಓದಿದ್ದು ನೆನೆಪಿಕೊಳ್ಳುವುದು ಯೋಗ್ಯವಾದೀತು. ಹತ್ತು ಲಕ್ಷ ಲಾಟರಿ ಹೊಡೆಯುವ ಆಸೆಯು ಯುವಕರಷ್ಟೋ. ನೋಡಿ, ಯಾರಿಗೆ ಕಷ್ಟವಿಲ್ಲದ ಧನ ಬೇಡ. ರಾಜಬೀದಿಯ ಮೇಲೆ ಮಾತ್ರ ಕನಸು ಕಾಣದಿದ್ದರೆ ಸಾಕು. ನಿಮ್ಮ ಗುಡಿಸಲುಗಳಲ್ಲಿ ತಿರುಕನ ಕನಸು ಕಂಡು ಹರ್ಷಪಡಬಹುದು.

ರಾಜಬೀದಿಗಳ ಮೇಲೆ ಸವಾರಿ ಮಾಡಲು ಯಾರನ್ನು ಏಕೆ ಕೇಳಬೇಕು? ಎಂಬು ಮನೋವೃತ್ತಿಯ ಸ್ಕೂಟರ್ ಸವಾರ ತನ್ನ ವೇಗ ಹೆಚ್ಚಿಸಿದರೆ ಅದೆಂಥ ಅನರ್ಥವಾಗದಹುದು! ಎರಡು ವಾಹನಗಳಿಗೆ ಢಿಕ್ಕಿಯಾಗಿ ಸ್ವರ್ಗಾರೋಹಣ ಮಾಡಬೇಕಾಗಬಹುದು. ಆದರೆ ತಿಳಿದು ನಡೆದುಕೊಂಡರೆ ಅನಾಹುತ ಎಲ್ಲಿ ಬಂದೀತು? ತರುಣರ ಮನಸ್ಸು ಕುದುರೆಯ ವೇಗಕ್ಕಿಂತ ಮಿಗಿಲಂತೆ. ಇಲ್ಲಿ 'ರಾಜಶೇಖರವಿಳಾಸ'ದಲ್ಲಿಯ ಒಂದು ಸನ್ನಿವೇಶ ನೆನಪಿಗೆ ಬರುತ್ತಿದೆ: ತರುಣರಾದ ಯುವರಾಜ ಹಾಗೂ ಮಂತ್ರಿಸುತರು ರಾಜಬೀದಿಯಲ್ಲಿ ಕುದುರೆ ವೈಗಾಳಿಯು

ನ್ನು ನಡೆಸಿದರಂತೆ. ಕುದುರೆಯ ಕಾಲಿಗೆ ಶಿವಭಕ್ತ ತಿರುಳಮಿನಾಚಿಯ ಮಗು ಆಹುತಿ ಆಯಿತಂತೆ ಅವಳು ನ್ಯಾಯನಿರ್ಣಯಕ್ಕೆ ಅರಸನನ್ನೆ ಸಂಧಿಸಿದಳು. ರಾಜನೋ ಶಿವಭಕ್ತ. ತನ್ನ ಆತ್ಮಾರ್ಪಣೆಗೇ ಸಿದ್ಧನಾದ. ಹೋಗಲಿ ಬಿಡಿ, ಶಿವ ಪ್ರತ್ಯಕ್ಷನಾಗಿ ಎಲ್ಲರನ್ನೂ ಬದುಕಿಸಿರಬಹುದು. ಕಥೆ ಮುಖ್ಯವಲ್ಲ: ತತ್ವ ಮಾತ್ರ ಮರೆಯುವಂತಿಲ್ಲ ರಾಜಬೀದಿಗಳ ಮೇಲೆ ಚೆಲ್ಲಾಟ ನಡೆಯಬಾರದು ನೋಡಿ. ನಿಯಮಗಳು ನಮ್ಮನ್ನೇನು ನಿಯಂತ್ರಿಸಬಲ್ಲವೆ? ಅರಿವು ಇರಬೇಕಾದುದು ಮುಖ್ಯ ಕಾರಣ ವಾಹನ ಚಾಲಕರೆಲ್ಲ Stop and proceed ಎಂಬುವ ನಿರ್ಜೀವ ನಿಯಂತ್ರಕನ ಕಡೆಗೆ ಗಮನ ಕೊಡುವುದು ಉಚಿತ. ಆತನ ಎಚ್ಚರಿಕೆ ಅನಾಹುತ ತಪ್ಪಿಸಬಲ್ಲದು. ಸಾವಕಾಶ ಸಾವಧಾನ ಎಂಬ ಪದಗಳು ಪಾದಚಾರಿಗಳಗಿಂತೂ ತೀರಾ ಅಭ್ಯಾಸವಾಗಿರಬೇಕು. ಏಕೆಂದರೆ ನಾವು ಎಷ್ಟೆಂದರೂ foot path ಪುರುಷರಲ್ಲವೆ? ನಾವು ಬದುಕಿ ಬಾಳಬೇಕು ಎಂಬ ಬುದ್ಧಿ ನಮಗಿರುವದಾದರೆ ಮನೆ ಹಿಡಿದು ಕುಳಿತುಕೊಂಡರೆ ಒಳಿತಲ್ಲವೆ? ಎಂಬುವ ಹುಚ್ಚು ವಿಚಾರ ಬಂದರೆ ನಿಮಗೆ ರಾಜಬೀದಿಗಳಲ್ಲಿ ಅಲೆದಾಡುವ ಹಕ್ಕು ಇದೆ ಎಂದೇ ಅರ್ಥ ಏಕೆ? ಎಂದು ಪ್ರಶ್ನೆ ಹಾಕಿದರೆ ಉತ್ತರ ತೀರ ಸುಲಭ ನೀವು ಎಚ್ಚರಿಕೆಯಿಂದ ಇರುವವರಾದುದರಿಂದ ಅನರ್ಥವಾಗದು ಎಂದೇ ಅರ್ಥ.

ಇರಲಿ, ಇದೆಲ್ಲಾ ಗುಡ್ಡ ಸುತ್ತಿ ಮೈಲಾರಕ್ಕೆ ಬಂದಂತೆ ಎಂದು ನೀವು ಅನ್ನಬಹುದು. ಅದು ಸಹಜವೇ ಸರಿ. ನಾವಂತೂ ಯಾವಾಗಲೂ ಪಾದಚಾರಿಗಳೇ ಆಗಿರುವದರಿಂದ ನಾವು ಎದುರಿಸಬೇಕಾದ ಕಷ್ಟಗಳನ್ನು ಮೊದಲು ಊಹಿಸಿಕೊಳ್ಳಬೇಕು. ನೋಡಿರಿ foot pathಗಳೆಲ್ಲ ಈಗ ಅಂಗಡಿಗಳ ಮಳಿಗೆಗಳಾಗಿ ಪರಿವರ್ತಿಸಿರುತ್ತವೆ. ಅವುಗಳನ್ನು ದಾಟುತ್ತ ಅಲ್ಲಲ್ಲ expedition ಮಾಡುತ್ತ, ಹೊರಟಾಗ ನಮಗೆ ತೀರ ಆಕರ್ಷಕ ವಸ್ತುಗಳು ಕಣ್ಣಿಗೆ ಬೀಳಬಹುದು. ಅರ್ಧಾಂಗಿ ಸಹಚರಣೆಯಾಗಿದ್ದರಂತೂ ನಿಮ್ಮ ಕಷ್ಟ ಹೇಳತೀರದು. ಅದನ್ನು ನೋಡಿ

ಇವನ್ನು ನೋಡಿ ಎಂಬುವ ಅವಳ ಮಾತು ಕೇಳುತ್ತಿರುವಾಗಲೇ ಬಾಳೆಹಣ್ಣಿನ ಸಿಪ್ಪೆಗೆ ಆಹುತಿ ಆಗಿ ಹಾಸ್ಪಿಟಲ್ ಹಿಡಿಯಬಹುದು. ಬಾಳೆಹಣ್ಣು ತಿಂದು ಸಿಪ್ಪೆ ಒಗೆದ ಅನಾಮಿಕನನ್ನು ಹೇಗೆ ಶಿಕ್ಷಿಸುವುದು? ನಾನು ಅದಕ್ಕೇ ಹೇಳುವುದು ನಾವು ಬದುಕಬೇಕು, ಪರರನ್ನು ಬದುಕಿಸಬೇಕು. ಇಂತೆಲ್ಲ ಒಟ್ಟಾರೆ ಹೇಳುವುದಾದರೆ ಸಾಮಾಜಿಕ ಪ್ರಜ್ಞೆ ಎಲ್ಲರಲ್ಲಿಯೂ ಮೂಡಿ ಬರಬೇಕು ಇವನ್ನು ಉದ್ದುದ್ದ ಭಾಷಣಗಳಲ್ಲಿ ಹೇಳಿದರೆ ಕೇಳಿದರೆ ಸಾಲದು. ಪಾದಚಾರಿಗಳೇ ಇತ್ತ ಗಮನ ಕೊಡಿರಿ– ಇದೋ ನಿಮ್ಮ ಭವಿಷ್ಯ ಹೇಳಲು ಜ್ಯೋತಿಷಿಗಳು ಕುಳಿತಿದ್ದಾರೆ. ಅವರ ಸುತ್ತಲೂ ಕುಳಿತು ತಮ್ಮ ಜೀವನದ ಆಗು ಹೋಗುಗಳನ್ನು ಕೇಳುವ ಜನರ ಮುಖ ನಿರೀಕ್ಷಣೆ ಮಾಡಿದರೆ ಬಾಳು ಅದೆಷ್ಟು ವಿಚಿತ್ರ ಎಂಬುವ ಭಾವ ವಿಚಾರ ವಾದಿಗಳಿಗೆ ಬಾರದಿರದು. ನೊಂದ ಜೀವಕ್ಕೆ ಒಂದು ಒಳ್ಳೇ ಆಶೆಯ ಮಾತು ಅಮೃತಬಿಂದುವಾಗಬಲ್ಲದು. ಹೀಗಿದೆ ಜೀವನ. ಪ್ರಪಂಚ–ಪ್ರವಾಹವನ್ನು ನಿರೀಕ್ಷಿಸಬೇಕಾದರೆ ರಾಜಬೀದಿ ಗುಂಟ ಸಾಗಬೇಕು. ನಿಮಗೆ ನೋಡುವ ಕಣ್ಣು ಇರಬೇಕು. ಹಾ, ಎಚ್ಚರಿಕೆ! ಜೋಕೆಯಿಂದ ಸಾಗಿರಿ.

ಅದೋ ಅಲ್ಲಿ ಕೇಳಿ, 'ಧಿಕ್ಕಾರ ಧಿಕ್ಕಾರ'– ಯಾರಿಗೆ? ಅದನ್ನು ಕೇಳುತ್ತ ನಿಲ್ಲುವ ಅವಕಾಶ ನಿಮಗಿದ್ದರೆ; ಇಲ್ಲವಾದರೆ ಮುಂದೆ ಸಾಗಿರಿ. ಧಿಕ್ಕಾರದ ಗುಂಪು ರಾಜಬೀದಿ ನಿಯಮ ಪಾಲಿಸಿ ಸಾಗಿದ್ದರೆ ಒಳಿತು. ಇಲ್ಲವಾದರೆ ಬೀದಿಯು ತುಂಬ ಅಸ್ತವ್ಯಸ್ತ. ಲಾಠೀ ಪ್ರಹಾರ. ನಿಮ್ಮ ತಲೆ ಉಳಿದರೆ ಸಾಕು. ಬೀದಿಯಲ್ಲಿ ಒಂದಿಲ್ಲೊಂದು ಗದ್ದಲ ಇದ್ದೇ ಇರುತ್ತದೆ. ನಾವು ಮನೆ ಹಿಡಿದು ಕುಳಿತರೆ ಪ್ರಪಂಚ ನಿಲ್ಲುತ್ತದೆಯೆ? ನಾವು ನಿತ್ಯದ ಕೆಲಸಗಳಿಗಾಗಿ ಬೀದಿಗಳಲ್ಲಿ ಅಲೆದಾಡಲೇಬೇಕಲ್ಲ ಶಾಲೆಗೆ ಹೋಗುವ ಮಕ್ಕಳು ಬೀದಿಯಲ್ಲಿ ನಿಯಮಕ್ಕನುಗುಣವಾಗಿ ನಡೆಯುವಂತೆ ಕಲಿಸುವುದು ನಮ್ಮ ಕರ್ತವ್ಯ. ಸ್ವಾಭಾವಿಕವಾಗಿ ಅವರು ಚಂಚಲರು. ರಸ್ತೆಯ ನಿಯಮಗಳನ್ನು ಪರಿಪಾಲಿಸಲಿಕ್ಕೂ ಇಲ್ಲ. ಅಂತೆಯೇ ಅದೋ ನಿಂತಿದೆ ಬೋರ್ಡು– ಇಲ್ಲಿ ಶಾಲೆಯಿದೆ ಎಂದು ಸಾರುತ್ತ. ಇದನ್ನು ಗಮನಿಸದೆ ವಾಹನಗಳನ್ನು ವೇಗವಾಗಿ ನಡೆಯಿಸುವವರನ್ನು ಕಂಡು ನಾವು ಎಷ್ಟೋ ಸಲ ಕನಿಕರಪಡಬಹುದು. ಇಂದಿನ ಗದ್ದಲದ ಪ್ರಪಂಚದಲ್ಲಿ ಹೊರಗೆ ಹೋದವರು ಮನೆಗೆ ಮರಳುವರೊ ಇಲ್ಲವೊ ಎಂಬುವ ಭೀತಿಯಿಂದ ಕುಳಿತಿರುವ ಅಜ್ಜ ಅಜ್ಜಿಯರನ್ನು ನೀವು ನೋಡಿ ನಕ್ಕರೂ ಅವರ ಅಂಜಿಕೆಗೆ ಅರ್ಥವಿದೆ ಎಂಬುವನ್ನು ನಾವು ಪತ್ರಿಕೆಗಳನ್ನು ನೋಡಿದಾಗ ಗೊತ್ತಾಗದಿರದು. ಲಾರಿ ಹರಿದು ಐವರ ಮರಣ, ಸ್ಕೂಟರಿಗೂ ಟ್ರಕ್ಕಿಗೂ ಢಿಕ್ಕಿ ಇತ್ಯಾದಿ ಮಂಗಲವಾಯ ವಾಕ್ಯಗಳಿಂದ ಪತ್ರಿಕೆಗಳು ಕಂಗೊಳಿಸಿದಾಗ ಜೀವ ಅಯ್ಯೋ ಎನ್ನಿಸುತ್ತದಲ್ಲವೆ?

ಬೀದಿಯ ನಿಯಮಗಳನ್ನು ಸರಿಯಾಗಿ ಪರಿಪಾಲನೆ ಮಾಡಿದ್ದರೆ ಇಷ್ಟೊಂದು ಅನರ್ಥ




"ಇದು ನ್ಯಾಯ ಬೆಲೆ ಅಂಗಡಿ ಸ್ವಾಮೀ."

ಆಗುತ್ತಿರಲಿಲ್ಲ ಎಂಬುವ ವಿವೇಕ ಕೆಲವರಿಗೆ ಬರಬಹುದು. ಇನ್ನು ಕೆಲವರಿಗೆ ಇದು ನಿತ್ಯ ನಡೆಯುವ ಅನಾಹುತಗಳು ಎಂದು ತಾತ್ಸಾರ ತೋರಿ 'ದೈವದಾಟ' ಎಂಬಂತೆ. ಎಲ್ಲರೂ ತಮ್ಮ ಭಾಗದ ಕರ್ತವ್ಯ ಪರಿಪಾಲನೆ ಮಾಡಿ ದರೆ ಎಲ್ಲರಿಗೂ ಒಳಿತು ಎಂಬುವ ಸ್ಥಿರ ನಂಬಿಕೆ ಮೂಡಿಬಾಗಲೆ ರಾಜಬೀದಿಗಳಲ್ಲಿ ಅನರ್ಥಗಳು ಆಗಲಿಲ್ಲಿಕ್ಕಿಲ್ಲ. ಇಲ್ಲವಾದರೆ ಸ್ವಚ್ಛಂದ ಸ್ವಾತಂತ್ರ್ಯ ವೆಂದರೆ ಪರರ ಸ್ವಾತಂತ್ರ್ಯಹರಣವೆಂದೇ ಹೇಳಬೇಕಾದೀತನೋ, ಒಟ್ಟಾರೆ ಹೇಳುವು ದಾದರೆ ಬಾಳುವ ಗುಟ್ಟು ಅರಿತಿರಬೇಕು. ಇದು ಕೇವಲ ರಾಜಬೀದಿಗಳ ಕಥೆ ಅಲ್ಲ, ಜೀವನದ ಕಥೆಯೇ ಆಗಿದೆ.

ಇದೀಗ ದೊಡ್ಡ ದೊಡ್ಡ ನಗರಗಳಲ್ಲಿ ರಾಜ ಬೀದಿಗಳನ್ನು ಬಹು ಅಗಲವಾಗಿ ನಿರ್ಮಿಸುವದು ನಡೆದಿದೆ; ನಡೆಯಲಿ. ಕಿರಿದಾದ ಬೀದಿಗಳಲ್ಲಿಯೂ ಹಿರಿದಾದ ವ್ಯವಹಾರ ನಡೆಯುವದೂ ಉಂಟು. ಅವ್ಯವಹಾರ ನಡೆಯುದಿದ್ದರೆ ಸಾಕು. ಅಂತೂ ಬೀದಿ ಗಳಲ್ಲಿ ಗದ್ದಲ ತಪ್ಪಿದ್ದಲ್ಲ.

ಶೃಂಗವೇಳೆಯಲ್ಲಿ(peak hours)ನೂರಾರು ಕಾರುಗಳು ಸ್ಕೂಟರುಗಳು ಬಸ್ಸುಗಳು ಧಾವಿ ಸುತ್ತಿದ್ದಾಗ, ಪಾದಚಾರಿಯು, ದಿಕ್ಕು ತಪ್ಪಿ ನಿಲ್ಲ ಬೇಕಾದೀತು. ಕಿರಿದಾದ ಬೀದಿಗಳಲ್ಲಿ ಏನೇಥ ಅನರ್ಥ ಸಂಭವಿಸಬಹುದು. ವಿಸ್ತಾರವಾದ ರಾಜ ಬೀದಿಗಳಲ್ಲಿ ಹೋಗುವ ವಾಹನಗಳು ಹೋಗು ತ್ತಿರುತ್ತವೆ; ಬರುವ ವಾಹನಗಳು ಬರುತ್ತಿರು ತ್ತವೆ. ಒಂದು ಅಂತಸ್ತಿನ ಮೇಲೆ ನಿಂತು ಮಗ್ಗ ದಲ್ಲಿ ಆಡುವ ಲಾಳಿಯಂತೆ ಹೋಗುವ ಬರುವ ವಾಹನಗಳನ್ನು ನಿರೀಕ್ಷಿಸುವುದೂ ಒಂದು ಮೋಜೇ ಸರಿ. ಅನೇಕ ದೃಶ್ಯಗಳನ್ನು ನಾವು ಆಗ ಕಾಣಬಹುದು. ಸ್ಕೂಟರಿನ ಮೇಲೆ ಸಂಸಾರ ಸಹಿತ ಸಾಗಿರುವ ಸಾರಥಿ ಒಮ್ಮೆ ಎದುರಾದ ವಾಹನಕ್ಕೆ ಢಿಕ್ಕಿ ಹೊಡೆಯುವನೋ ಎನ್ನುವಷ್ಟ ರಲ್ಲಿ ಬ್ರೇಕ್ ಬೀಳುತ್ತದೆ. ಮತ್ತೆ ಸರಸದ ಸಾಗಾಟ ಪ್ರಾರಂಭ. ಮಡದಿಯೊಡನೆ ಸರಸದ ಮಾತುಗಳನ್ನಾಡುತ್ತ ಬೀದಿಗುಂಟ ನಡೆದದ್ದಾದರೆ ರಾಜಬೀದಿ ನಿಮಗೆ ಮೀಸಲಿಲ್ಲ ಎಂದು ಪೋಲೀಸಿ ನವನು ಗದರಿಸಬಹುದು. ಕತ್ತಲಾದಂತೆ ಕೆಂಪು ಹಸಿರು ದೀಪಗಳ ಯಕ್ಷಲೋಕ ಪ್ರಾರಂಭ ವಾಗುತ್ತದೆ. ಒಂದು ಪರ್ವಕಾಲದಲ್ಲಿ ಇದನ್ನೆಲ್ಲಾ ನೋಡುತ್ತಾ ನಿಲ್ಲಬೇಕೆಂದರೆ ಹೇಳಿಯ ಅಭಾವ ಒಂದು ಯವಾಗಲೂ ಕಣಕುತ್ತಿರುತ್ತದೆ. ತುತ್ತಿನ ಚೀಲ ತುಂಬಲು ಏನೇಥ ಹೋರಾಟ ನಡೆಯುತ್ತಿದೆ ಎಂಬುದನ್ನು ನೀವು ರಾಜಬೀದಿಗಳ ಮೇಲೆಯೇ ನಿಂತು ನಿರೀಕ್ಷಿಸಬೇಕು. ಆಫೀಸಿಗೆ ಹೋಗುವ ಗುಮಾಸ್ತರು, ಶಾಲೆಗೆ ಹೋಗುವ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ತಮ್ಮ ತಮ್ಮ ಸ್ಥಳ ತಲುಪಲು ಬಸ್ಸು ಕಾಯುತ್ತಿರುತ್ತಾರೆ. ಕೆಲವರು ಧಾವಿಸುತ್ತಿರುತ್ತಾರೆ, ತುಂಬಿ ಬಂದ ಬಸ್ಸು stopನಲ್ಲಿ ನಿಲ್ಲದೆ ಮುಂದೆ ಹೋಗಿ ನಿಂತಾಗ ಅಂದೆಂತಹ ಮೋಜು! ಕೆಲವರು ಬಿದ್ದರು, ಕೆಲವರು ಗೆದ್ದರು! ಬೀದಿಯ ಮೇಲೆ ಮೋಜಿನ ಜಾತ್ರೆ ನಡೆದುಹೋಗುತ್ತದೆ. ಮುಖ ಒರೆಸಿ ಕೊಳ್ಳುತ್ತಿರುವ ಯುವತಿಯರ ಮುಖಾರವಿಂದ ಪ್ರಾನವಾಗುತ್ತದೆ. ಮತ್ತೆ ಹನುಮಾನ ಬಾಲ ದಂತಹ ಕ್ಯೂ ಸಿದ್ಧವಾಗುತ್ತದೆ.

ಒಮ್ಮೊಮ್ಮೆ ಬೀದಿಗಳೆಲ್ಲಾ ತೀರ ಶಾಂತವೇ ಆಗಿರುತ್ತದೆ. ರಸಿಕರಾದ ನಾವು ಬೆಳದಿಂಗಳಿನ ಇರುಳಿನಲ್ಲಿ ಬೀದಿಗುಂಟ ಹೊರಟಾಗ foot pathಗಳ ಮೇಲೆ ಸಂಸಾರ ಸಮೇತ ಮಲಗಿ ರುವ ಭಿಕ್ಷುಕರನ್ನು ಕಂಡು ಮರುಗಬೇಕಾದೀತು. ಅವರಿಗೆ ರಾತ್ರಿಯೇ ಸಂತೋಷದ ಕಾಲವೇನೋ ಇರುಳನ್ನು ಹಗಲನ್ನಾಗಿಸಿಕೊಂಡು ಬಾಳುವ ಜನಕ್ಕೆ ರಾಜಬೀದಿಗಳ ಪಕ್ಕಗಳೇ ಸೌಧಗಳಲ್ಲವೆ? ಕನಿಕರ ಬಂದು ಕಣ್ಣೀರಿಟ್ಟರೆ ಅದೇ ನಿಮ್ಮ ಹೃದಯವಂತಿಕೆಯ ಲಕ್ಷಣ, ಅಂತೂ ರಾಜಬೀದಿ ಗಳಲ್ಲಿ ಅಲೆದಾಡುವ ನಮಗಲ್ಲ ನಿತ್ಯ ಸಮಸ್ಯೆ ಗಳು ಬಿಟ್ಟಿಲ್ಲ, ಬಿಡುಂತಿಲ್ಲ. ಬೆಳೆಯುತ್ತಿರುವ ಪ್ರಪಂಚದೊಡನೆ ಬಾಳುವುದೂ ಒಂದು ಸಮ ಸ್ಯೆಯೇ ಆಗಿದೆ, ಆದರೂ ಬಾಳಗೇಕಲ್ಲ. ✱

ಪ್ರೊ. ಜಿ. ಕೆ. ಶೆಣೈ

# ಕಣ್ಣಿಗೆ ಹಬ್ಬವೀವ ಖಜುರಾಹೋ

ನಾನು ಅಮೇರಿಕದಲ್ಲಿದ್ದಾಗ ವಾಶಿಂಗ್‌ಟನ್ (ಡಿ.ಸಿ.) ನಗರದಲ್ಲಿರುವ ಭಾರತ ರಾಯಭಾರಿ ಕಚೇರಿಗೆ ಭೇಟಿ ನೀಡಿದ್ದೆ. ಭಾರತ ಪ್ರವಾಸ ಉದ್ಯಮ ಇಲಾಖೆಯು ವರಿಂದ ಪ್ರಚಾರಪಡಿಸಿದ ಒಂದು ಪ್ರಚಾರ ಪತ್ರಿಕೆ ನನಗೆ ಅಲ್ಲಿ ದೊರಕಿತು. ನಯವಾದ ಕಾಗದದ ಮೇಲೆ ತ್ರಿವರ್ಣ ಮುದ್ರಣದಿಂದ ತಯಾರಿಸಿದ ಈ ಪ್ರಚಾರ ಪತ್ರಿಕೆಯು ನಿಜಕ್ಕೂ ಆಕರ್ಷಣೀಯವಾಗಿತ್ತು. ಅದರ ತಲೆ ಬರೆಹ ಭಾರತ-ಖಜರಾಹೊ: ಉಪ ತಲೆಬರಹ- ಪ್ರಬಲ ಚಂದೇಲರು-ಪ್ರಶಂಸನೀಯ ಹೆಣ್ಣು-ಪ್ರೇಮ ಮತ್ತು ಯುದ್ಧಗಳ ಮಹಾಕಾವ್ಯ.

ಈ ಪ್ರಚಾರ ಪತ್ರಿಕೆಯ ಮೇಲೆ ಮನಮೋಹಕ ಸುರಸುಂದರಿಯರ ಛಾಯಾಚಿತ್ರ ಹಾಗೂ ಕಂಡಾರಿಯಾ ಮಹಾದೇವ ದೇವಾಲಯದ ಹತ್ತು ಚದರ ಇಂಚು ಗಾತ್ರದ ಸುಂದರ ಚಿತ್ರಗಳನ್ನು ಮುದ್ರಿಸಲಾಗಿತ್ತು.

ಈ ಪ್ರಚಾರ ಪತ್ರಿಕೆಯೇ ನನ್ನ ಖಜುರಾಹೊ ಪ್ರಯಾಣಕ್ಕೆ ಕಾರಣವಾಯಿತು. ಭಾರತದ ಈ ಸುಂದರ ದೇವಾಲಯವನ್ನೇ ನೋಡದ ನಾನು, ಭೂಭ್ರಮಣ ಮಾಡಿದುದರಿಂದ ಏನು ಸಾರ್ಥಕವಾಯಿತು? ಭಾರತಕ್ಕೆ ಹಿಂದಿರುಗಿದ ಬಳಿಕ ಒಮ್ಮೆ ಖಜುರಾಹೋವನ್ನು ನೋಡಬೇಕೆಂಬ ಆಕಾಂಕ್ಷೆಯು ಆಗಲೇ ನನ್ನ ಮನಸ್ಸಿನಲ್ಲಿ ಹುದುಗಿತ್ತು. ಪ್ರತಿಯೊಂದು ಅನುಭವಕ್ಕೆ ಕಾಲ, ಸಂದರ್ಭ ಮತ್ತು ಸಹವಾಸ ಕೂಡಿ ಬರಬೇಕು. ಅಂತಹ ಸಂದರ್ಭ ಒಂದು ದೊರೆಯಿತು.

ಭೋಪಾಲದಲ್ಲಿ ವಾಸಮಾಡುತ್ತಿರುವ ನನ್ನ ಅಳಿಯನನ್ನು ಸಂದರ್ಶಿಸಲು ಭೋಪಾಲವನ್ನು ನೋಡುವ ಸಂದರ್ಭ ಬಂದೊದಗಿತು. ಸ್ವಲ್ಪ ಬಿಡು ಸಮಯವಿದ್ದುದರಿಂದ ಖಜುರಾಹೋ ಪ್ರಯಾಣದ ಕುರಿತು ಅಂತಿಮ ನಿರ್ಧಾರವನ್ನು ಮಾಡಿದೆ.

## ಭೋಪಾಲದಿಂದ ಖಜುರಾಹೋವಿಗೆ

ಭೋಪಾಲದ ಜನಭರಿತ ಬಸ್ ನಿಲ್ದಾಣಕ್ಕೆ ಬಂದು ರಾತ್ರಿ ಒಂಭತ್ತು ಗಂಟೆಗೆ ಖಜುರಾಹೋವಿಗೆ ಹೊರಡುವ ಬಸ್ಸಿನಲ್ಲಿ



ತಾಯಿ - ಮಗು

ನಾಲ್ಕು ಟಿಕೇಟುಗಳನ್ನು ಪಡೆದುಕೊಂಡೆವು. ಹತ್ತು ಹನ್ನೆರಡು ಗಂಟೆಗಳ ಪ್ರಯಾಣ ವಾದುದರಿಂದ ಸುಖಾಸೀನ ಹಾಗೂ ವಿಲಾಸೀ ವಾಹನದಲ್ಲಿ ಪ್ರಯಾಣ ಮಾಡಬೇಕೆಂದು ನಿರ್ಧರಿಸಿದರೂ, ಇಂತಹ ವ್ಯವಸ್ಥೆ ಕೇವಲ ಬೇಸಗೆಯಲ್ಲಿ ದೊರೆಯುವುದೆಂದು ತಿಳಿದು ಬಂತು.

ರಾತ್ರಿ ಒಂಭತ್ತು ಘಂಟೆಗೆ ಸಮಯಕ್ಕೆ ಸರಿಯಾಗಿ ಬಸ್ಸು ಹೊರಟಿತು. ಚಳಿಯ ಬಾಧೆಯಿಂದ ರಕ್ಷಿಸಿಕೊಳ್ಳಲು ದಪ್ಪವಾದ ಉಣ್ಣೆಯ ಶಾಲನ್ನು ಮೈ ಮೇಲೆ ಹಾಕಿ ಕೊಂಡಿದ್ದೆವು. ಬಸ್ಸಿನಲ್ಲಿ ಸಮವಸ್ತ್ರ ಧರಿಸಿದ್ದ ಸಶಸ್ತ್ರ ಪೋಲೀಸರು ಬಂದು ಇಬ್ಬರು ಕುಳಿತರು. ದರೋಡೆಖೋರರ ಅಪಾಯ ವಿದ್ದುದರಿಂದ ಪ್ರತಿಯೊಂದು ರಾಜ್ಯ ಸರ ಕಾರಿ ಬಸ್ಸಿನಲ್ಲಿ ಸಶಸ್ತ್ರ ಪೋಲೀಸರನ್ನು ಕೊಂಡೊಯ್ಯುವ ನಿಯಮವಿದೆಯೆಂದು ತಿಳಿದುಬಂತು. ಕೆಲವೊಮ್ಮೆ ದರೋಡೆ ಖೋರರು ಬಸ್ಸಿನಲ್ಲಿ ಕುಳಿತು ಪ್ರಯಾಣ ಮಾಡಿ ನಿರ್ದಿಷ್ಟ ಸ್ಥಳದಲ್ಲಿ ಇತರ ದರೋಡೆ ಖೋರರ ಸಹಾಯ ಪಡೆದು ಅಥವಾ ತಾವಾಗಿಯೇ ಪ್ರಯಾಣಿಕರ ಸೊತ್ತುಗಳನ್ನು ದೋಚುವರೆಂದು ವಾರ್ತಾಪತ್ರಿಕೆಗಳಲ್ಲಿ ಓದಿ ದ್ದೆನು.

ಸಮೀಪದಲ್ಲಿ ಕುಳಿತ ಪ್ರಯಾಣಿಕ ನೊಡನೆ ಸಮಯ ಕಳೆಯಲು ಮಾತನ್ನು ಆರಂಭಿಸಿದೆನು. ಹಿಂದಿ ಭಾಷೆಯನ್ನೇ ಉಪ ಯೋಗಿಸಿದೆ. "ಈ ದಾರಿಯಲ್ಲಿ ದರೋಡೆ ಖೋರರ ತೊಂದರೆಯಿದೆಯೆಂದು ಕೇಳಿದ್ದೇನೆ, ನಿಜವೇ?" ಎಂದೆ. ಸಹ ಪ್ರಯಾಣಿಕನು ನನ್ನನ್ನು ದೀರ್ಘಕಾಲ ನೋಡುತ್ತ, "ಪೋಲೀಸರು ಇದ್ದಾರಲ್ಲ! ಇನ್ನೇನು ಭಯ?" ಎಂದ. "ಹಾಗಲ್ಲ ಇತ್ತೀಚೆಗೆ ಏನಾದರೂ ದರೋಡೆ ಆದ ಸುದ್ದಿ ಇದೆಯ?" ಎಂದೂ ಕೇಳಿದೆ. "ದರೋಡೆ ಖೋರರೂ ಮನುಷ್ಯರಲ್ಲವೆ? (ಡಾಕೂ ಲೋಗ ಭೀ ಆದಮೀ ಹೈನಾ?)"

ಎಂದಾಗ ಇವನೇ ದರೋಡೆಖೋರನೋ ಎಂದು ಅನಿಸಿತು.

ಕಗ್ಗತ್ತಲಿನಲ್ಲಿ ಬಸ್ಸು ಚಲಿಸುವಾಗ ದಾರಿ ಉದ್ದಕ್ಕೂ ಏನೂ ಕಾಣಸಿಗಲಿಲ್ಲ. ದರೋಡೆ ಖೋರರು ಬಸ್ಸಿನ ಮೇಲೆ ಹಲ್ಲೆ ನಡೆಸಿದರೆ ಅದೊಂದು ಅನುಭವವೆಂದು ಪರಿಗಣಿಸುವೆ ನೆಂದು ಮನಸ್ಸಿನಲ್ಲಿ ನಿರ್ಧಾರ ಮಾಡುತ್ತಾ ನಿದ್ರೆಯಲ್ಲಿ ತೂಕಡಿಸುತ್ತಾ ಕಾಲಕಳೆದೆ. ಸಾಗರ ಎಂಬ ಪಟ್ಟಣವನ್ನು ತಲಪುವಾಗ ಮಧ್ಯ ರಾತ್ರಿ. ನಂತರ ಕಾಣಸಿಕ್ಕಿದ ದೊಡ್ಡ ಪಟ್ಟಣವೆಂದರೆ ಛತ್ತರ್‌ಪುರ. ಆಗ ಬೆಳಗಿನ ನಾಲ್ಕು ಗಂಟೆಯ ಸಮಯ. ನಂತರದ ಎರಡು ಘಂಟೆಯ ಪ್ರಯಾಣದ ಅಂತ್ಯದಲ್ಲಿ ಖಜುರಾಹೋವಿಗೆ ಬಂದು ಮುಟ್ಟಿದೆವು. ಸಶಸ್ತ್ರ ಪೋಲೀಸರು ಛತ್ತರ್‌ಪುರದಲ್ಲಿ ಇಳಿದು ಹೋಗಿದ್ದರು.

## ಮಧ್ಯಪ್ರದೇಶ ರಾಜ್ಯದ ಪ್ರವಾಸ ಉದ್ಯಮ ಇಲಾಖೆಯ ಅತಿಥಿ

ಛತ್ತರಪುರದಿಂದ ಬೆಳಿಗ್ಗೆ ನಾಲ್ಕು ಗಂಟೆಗೆ ಹೊರಟ ಬಸ್ಸು ಸುಮಾರು ಆರು ಗಂಟೆಗೆ ಖಜುರಾಹೋವನ್ನು ತಲುಪಿತು. ಚಳಿಗಾಲದ ಸಮಯವಾದುದರಿಂದ ಬಸ್ಸಿನಲ್ಲಿ ಪ್ರವಾಸಿಗಳ ಸಂಖ್ಯೆ ಅತಿ ಕಡಿಮೆಯಿತ್ತು. ನಾವು ಬಸ್ಸಿನಿಂದ ಇಳಿಯುವಾಗಲೇ ಹೋಟೆಲು ದಲಾಳಿಗಳು ನಮಗೆ ತಮ್ಮ ಹೋಟೆಲುಗಳ ಕುರಿತು ಹೇಳುತ್ತಾ ಬಾಡಿಗೆ ದರಗಳನ್ನು ತಿಳಿಯಪಡಿಸಿದರು. ನ್ಯೂಭಾರತ, ಗುಪ್ತಾ, ಅಪ್ಸರಾ, ಜೈನ, ಮದ್ರಾಸ ಹೊಟೇಲುಗಳ ಹೆಸರುಗಳು ಕೇಳಿ ಬಂದವು. ದಿನಕ್ಕೆ ಕೇವಲ ಹದಿನೈದರಿಂದ ೨೦ರ ತನಕ ಬಾಡಿಗೆ ಎಂದಾಗ ಮಧ್ಯಮ ವರ್ಗದ ಹೋಟೆಲುಗಳೆಂದು ಊಹಿಸಲು ಕಷ್ಟವಾಗಲಿಲ್ಲ. ಹತ್ತಿರದ ಒಂದು ಹೋಟೆಲನ್ನು ಪ್ರವೇಶಿಸಿ ಕೋಣೆಯನ್ನು ಪರೀಕ್ಷಿಸಿದಾಗ ನಮಗೆ ಸಮಾಧಾನವಾಗಲಿಲ್ಲ.

ಮಧ್ಯಪ್ರದೇಶ ರಾಜ್ಯದ ಉದ್ಯಮ ಇಲಾಖೆಯವರು ರಚಿಸಿದ ಹೋಟೆಲ್ ಟೂರಿಸ್ಟ್‌ನಲ್ಲಿ ಠಾಣೆ ಹಾಕುವುದೆಂದು ನಿರ್ಧರಿಸಿ ಸೈಕಲ್ ರಿಕ್ಷಾದಲ್ಲಿ ಕುಳಿತು ಅಲ್ಲಿಗೆ ಹೋದೆವು. ನೋಡಲು ಅಂದವಾದ ಹುಲ್ಲು ಮೈದಾನಿನ ನಡುವೆ ಆಧುನಿಕ ಮಾದರಿಯಲ್ಲಿ ರಚಿ[illegible] ಈ ಕಟ್ಟಡವನ್ನು ಪ್ರವೇಶಿಸುವಾಗಲೇ [illegible]ಸ್ಸಿಗೆ ಆನಂದವಾಯಿತು. ಇಂಗ್ಲಿ[illegible] ಮಾತನಾಡುವ (ಹಿಂದಿ ಸ್ವರಭಾರದಿಂದ ಕೂಡಿದ) ವ್ಯಕ್ತಿಯು ನಮ್ಮನ್ನು ಬೇರೆ ಬೇರೆ ಎರಡು ಕೋಣೆಗಳಿಗೆ ಕೊಂಡು ಹೋದನು. ಸುಸಜ್ಜಿತ ಹಾಗೂ ವಿಶಾಲ ಕೋಣೆಗಳನ್ನು ನೋಡಿ ಮೆಚ್ಚುಗೆ ಆಯಿತು. ಆದರೆ ಬಾ[illegible] ವಿಪರೀತ ಹೆಚ್ಚಾದರೆ ನಮಗೆ ಎಟುಕಲಿಕ್ಕಿಲ್ಲ ಎಂದು ಎಣಿಸುವುದರಲ್ಲಿ ದಿನಕ್ಕೆ ಓರ್ವರಿಗೆ ಕೇವಲ ೨೫ ರೂ. ಎಂದನು. ನಮಗೆ ಸಮಾಧಾನವಾಯಿತು. ಅಲ್ಲಿ ರಾತ್ರಿ ಉಳಿದುಕೊಂಡು ಮರುದಿನ ಬೆಳಿಗ್ಗೆ ಖಜುರಾಹೋವಿನ ಹತ್ತಿರ ಹೋದೆವು.

## ಚಂದೇಲರು ಚಂದ್ರವಂಶದವರೇ ? ಒಂದು ದಂತಕಥೆ

ಬನಾರಸಿನ ಪೂಜಾರಿಯ ಮಗಳಾಗಿ ಜನಿಸಿದ ತ್ರಿಲೋಕಸುಂದರಿಯಾದ ಹೇಮಾವತಿಯು ಶುಭ್ರವಾದ ಬೆಳದಿಂಗಳಿನಿಂದ [illegible]ರಿಸಿದ ರತಿ ಸರೋವರದಲ್ಲಿ ಸ್ನಾನ ಮಾಡುತ್ತಿದ್ದಳು. ಅವಳ ಸೌಂದರ್ಯಕ್ಕೆ ಮಾರುಹೋಗಿ ಚಂದ್ರದೇವನೇ ಆಕಾಶದಿಂದ ಕೆಳಗಿಳಿದು ಅವಳು ಸ್ನಾನ ಮಾಡಿ ಹೊರಬರುತ್ತಿದ್ದಂತೆ ಅವಳನ್ನು ಗಾಢವಾಗಿ ಆಲಂಗಿಸಿದನು. ಅವಳೊಡನೆ ರಾತ್ರಿ ಎಲ್ಲಾ ಕಳೆದು ಮರುದಿನ ಅವಳನ್ನು ಬಿಟ್ಟು ಹೋಗುವಾಗ, ಹೇಮಾವತಿಯು ಕುಪಿತಳಾಗಿ ಚಂದ್ರದೇವನನ್ನು ಶಪಿಸುತ್ತಿರುವಾಗ ಅವನು ಅವಳನ್ನು ಹೀಗೆಂದು ಸಮಾಧಾನಪಡಿಸಿದನು: "ಸುಂದರಿಯೇ ನನ್ನನ್ನು ಶಪಿಸಬೇಡ. ನಮ್ಮ ಈ ರಾತ್ರಿಯ ಮಿಲನದಿಂದ ನಿನ್ನಲ್ಲಿ ಜನಿಸುವ ಪುತ್ರನು ಶ್ರೇಷ್ಠ ಹಾಗೂ ಪರಾಕ್ರಮಿ

ಅರಸನಾಗಿ ಬಾಳಿ ಹೊಸ ವಂಶವನ್ನೇ ಸ್ಥಾಪಿಸುವನು. ನೀನು ಖರ್ಜೂರಪುರಕ್ಕೆ ಹೋಗು," ಎಂದು ಸಮಾಧಾನಪಡಿಸಿ ಚಂದ್ರದೇವನು ಅದೃಶ್ಯನಾದನು.

ಹೇಮಾವತಿಯ ಪುತ್ರನಾದ ಚಂದ್ರ ವರ್ಮನು ಚಂಡೇಲಾ ವಂಶವನ್ನು ಸ್ಥಾಪಿಸಿದನು. ಯಜ್ಞಯಾಗಗಳನ್ನು ಮಾಡಿ ತನ್ನ ತಾಯಿಯ ಕಳಂಕವನ್ನು ಅಳಿಸಿದನು. ಚಂದೇಲಾ ವಂಶದವರು ಖರ್ಜೂರಪುರದಲ್ಲಿ ಸುಮಾರು ಎಂಭತ್ತೈದು ಭವ್ಯ ದೇವಾಲಯಗಳನ್ನು ಕಟ್ಟಿಸಿದರು. ಇವುಗಳಲ್ಲಿ ಈಗ ಕೇವಲ ಇಪ್ಪತ್ತೆರಡು ದೇವಾಲಯಗಳು ಮಾತ್ರ ಭಗ್ನಾವಶೇಷದ ವಿವಿಧ ಹಂತಗಳ ಉಳಿದಿವೆ.

ಪೃಥ್ವಿರಾಜೋವಿನ ಮಹೋಬಾಖಂಡ ಎಂಬ ಗ್ರಂಥದಲ್ಲಿ ಈ ಕಥೆಯನ್ನು ವಿವರಿಸಲಾಗಿದೆ.

## ಪರಾಕ್ರಮಶಾಲಿಗಳಾದ ಚಂದೇಲರು

ಏಳನೆಯ ಶತಮಾನದ ನಡು ಭಾಗದಲ್ಲಿ ಹರ್ಷವರ್ಧನನ ಸಾಮ್ರಾಜ್ಯವು ಹೋಳು ಹೋಳುಗಳಾಗಿ ನಶಿಸಿ ಹೋದ ಬಳಿಕ ಪ್ರತೀಹಾರ ವಂಶದವರು ಮಧ್ಯ ಭಾರತದಲ್ಲಿ ಉದಯಿಸಿದರು. ಇವರ ಸರದಾರರಾಗಿ ರಾಜ್ಯವನ್ನು ಆಳುತ್ತಿದ್ದ ಚಂದೇಲಾ ವಂಶದ ಅರಸರುಗಳು ಕಾಲಕ್ರಮೇಣ ಬಲಶಾಲಿಯಾಗುತ್ತ ತಮ್ಮದೇ ಆದ ರಾಜ್ಯವನ್ನು ಕಟ್ಟಿದರು. ಬುಂದೇಲಖಂಡ ವೆಂದು ಗುರುತಿಸಲ್ಪಟ್ಟ ಈ ಪ್ರದೇಶದಲ್ಲಿ ಜೇಜಾಭುಕ್ತಿ ಎಂಬ ರಾಜ್ಯದಲ್ಲಿ ಚಂದೇಲಾ ವಂಶದ ಅರಸರು ತಮ್ಮ ಪ್ರಭುತ್ವವನ್ನು ಒಂಬತ್ತನೆಯ ಶತಮಾನದಿಂದ ಹದಿಮೂರನೆಯ ಶತಮಾನದ ತನಕ ಮುಂದುವರಿಸಿದರು.

ಚಂಡೇಲಾ ಅರಸುರುಗಳು ರಾಜಪೂತ ವಂಶದವರಿಗೆ ಸೇರಿದವರೆಂದು ತಿಳಿಯಲಾಗಿದೆ. ಸೂರ್ಯಚಂದ್ರ ಮೊದಲಾದ ವಂಶಗಳಿಂದ ಚಂದೇಲಾ ರಾಜಪೂತರು ಹುಟ್ಟಿದರೆಂದು ತಿಳಿಯುತ್ತಾರೆ. ಹರ್ಷ, ಯಶೋವರ್ಮ ಮತ್ತು ಧಂಗ ಇವರುಗಳೇ ಅವರ ಪ್ರಮುಖ ಅರಸರುಗಳು.

ಚಂಡೇಲಾ ಅರಸುರುಗಳು ಕಲೆ, ಸಾಹಿತ್ಯ, ನೃತ್ಯ ಮೊದಲಾದ ಲಲಿತಕಲೆಗಳ ಉಪಾಸಕರಾಗಿದ್ದರು. ಇವರ ಕೃಪಾಕಟಾಕ್ಷದಿಂದ ಇಲ್ಲಿ ಶಿಲ್ಪ ಕಲೆಯು ಸೌಂದರ್ಯದ ಪರಮಾವಧಿಯನ್ನು ತಲಪಿತೆಂದರೆ ತಪ್ಪಾಗಲಾರದು. ಮಹೋಬಾ (ಮಹೋತ್ಸವ ನಗರ), ಕಾಲಿಂಜಾರ (ಕಾಲಂಜರ), ಅಜಯಪುರ (ಜಯಪುರ ದುರ್ಗ) ಮೊದಲಾದ ಚಾರಿತ್ರಿಕ ನಗರಗಳಲ್ಲಿ ಈ ರಾಜರುಗಳು ಕೋಟೆ, ಸರೋವರ, ದೇವಾಲಯ ಹಾಗೂ ಇತರ ವೈಭವಯುಕ್ತ ಕಟ್ಟಡಗಳನ್ನು ಅಧಿಕ ಪ್ರಮಾಣದಲ್ಲಿ ಕಟ್ಟಿದರು.

## ಹೆಸರಿನಲ್ಲೇನಿದೆ? ಖಜುರಾಹೋ ಏಕೆ?

ಖರ್ಜೂರ ಹಣ್ಣುಗಳನ್ನು ಹೊರುವ ವೃಕ್ಷಗಳ ವನಗಳಿರುವ ಪ್ರದೇಶವನ್ನು ಖರ್ಜೂರ ವಾಟಿಲ ಅಥವಾ ಖರ್ಜೂರ ವಾಟಿಕಾ ಎಂದು ಕರೆಯಲಾಗುತ್ತಿತ್ತು. ದಂತಕಥೆಯ ಪ್ರಕಾರ ಈ ನಗರದ ಹೊರಭಾಗದಲ್ಲಿರುವ ದ್ವಾರದ ಇಕ್ಕೆಡೆಗಳಲ್ಲಿ ಸುವರ್ಣದ ಖರ್ಜೂರ ವೃಕ್ಷಗಳಿದ್ದುದರಿಂದ ಈ ನಗರಕ್ಕೆ ಖಜುರಾಹೋವೆಂದು ಹೆಸರು ಬಂದಿರಬೇಕೆಂದು ಊಹಿಸುತ್ತಾರೆ.

ಖಜುರಾಹೋವಿನ ಸುತ್ತು ಮುತ್ತಲಿನ ಪ್ರದೇಶವನ್ನು ಪೂರ್ವ ಕಾಲದಲ್ಲಿ ವತ್ಸ ಎಂದೂ ಮಧ್ಯಕಾಲೀನ ಸಮಯದಲ್ಲಿ ಜೇಜಾಕಭುಕ್ತಿ ಎಂದೂ ಹದಿನಾಲ್ಕನೇ ಶತಮಾನದಿಂದ ಬುಂದೇಲ ಖಂಡವೆಂದೂ ಕರೆಯಲಾಗಿದೆ. ಈ ಕ್ಷೇತ್ರವು ಸಾಂಸ್ಕೃತಿಕ ಹಾಗೂ ಚಾರಿತ್ರಿಕ ದೃಷ್ಟಿಯಿಂದ ಭಾರತದ ಇತಿಹಾಸದಲ್ಲಿ ಪ್ರಮುಖ ಭಾಗವನ್ನು ವಹಿಸಿದೆ ಎಂದರೆ ತಪ್ಪಾಗಲಾರದು.

ಸುಂಗವಂಶದವರೂ ಗುಪ್ತರೂ ಪ್ರತೀಹಾರರೂ ತಮ್ಮ ತಮ್ಮ ವೈಭವ ಕಾಲದಲ್ಲಿ ಈ ಕ್ಷೇತ್ರದಲ್ಲಿ ಶಿಲ್ಪಕಲೆ ಮತ್ತು ವಾಸ್ತುಶಿಲ್ಪ ಕಲೆಗಳಿಗೆ ಪ್ರೋತ್ಸಾಹ ಕೊಟ್ಟು, ಕಲಾ ಸಂಪತ್ತಿ



ಪ್ರಿಯತಮನಿಗೆ ಓಲೆ ಬರೆಯುತ್ತಿರುವಳೆ?

...ಕೂಡಿದ ಮಹಾನ್ ದೇವಾಲಯಗಳನ್ನು ...ಸಿದರು. ಇಂತಹ ಶಿಲ್ಪಕಲೆಯ ಹಿನ್ನೆಲೆಯಲ್ಲಿ ...ದಾರು ಹತ್ತನೆಯ ಶತಮಾನದಲ್ಲಿ ಚಂದೇಲಾ ...ತನದವರು ಉಗಮವಾಗಿ ಖಜುರಾಹೋವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮಧ್ಯ ...ರತದ ಶಕ್ತಿಶಾಲಿ ರಾಜರುಗಳಾಗಿ ಬಾಳಿದರು.

## ಸೈಕಲ್ ರಿಕ್ಷಾದಲ್ಲಿ ಭ್ರಮಣ

ನಾವು ಖಜುರಾಹೋವಿನ ದೇವಾಲಯಗಳ ಮಾಹಿತಿ ಪಡೆದಾಗಲೇ ನಮಗೆ ತಿಳಿದ ಅಂಶವೆಂದರೆ ಕಾಲ್ನಡೆಯಲ್ಲಿ ಈ ದೇವಾಲಯ ಗಳನ್ನು ನೋಡಲು ಸಾಧ್ಯವಿಲ್ಲ. ದೇವಾಲಯ ಗಳನ್ನು ನೋಡಲು ಸಮಯ ಸುಮಾರು ಆರು ತಾಸುಗಳಿಂದ ಎಂಟು ತಾಸುಗಳ ತನಕ ತಗಲುವು ದೆಂದು ತಿಳಿದುಬಂತು. ಪಶ್ಚಿಮ ಗುಂಪಿನ ದೇವಾಲಯಗಳು, ಪೂರ್ವ ಗುಂಪಿನ ದೇವಾ ಲಯಗಳು, ದಕ್ಷಿಣ ದಿಕ್ಕಿನ ದೇವಾಲಯಗಳು ಎಂದು ಅವುಗಳನ್ನು ವಿಂಗಡಿಸಿದ್ದಾರೆ. ಅದಲ್ಲದೇ ಸಮೀಪದಲ್ಲಿ, ಪುರಾತನ ವಸ್ತು ಶೋಧನೆಗೆ ಸಂಬಂಧಿಸಿದ ಪ್ರದರ್ಶನಾಲಯವೂ ಇರುವುದು. ದೇವಾಲಯಗಳನ್ನು ನೋಡಲು ನಾಲ್ಕು ಗಂಟೆ ಟ್ಯಾಕ್ಸಿಯಲ್ಲಿ ಓಡಾಡಿದರೆ ಬಾಡಿಗೆ ರೂ. ೪೫, ಎಂಟು ಗಂಟೆ ಓಡಿಸಿದರೆ ರೂ. ೭೫ ಎಂದೂ ತಿಳಿದುಬಂತು. ಸೈಕಲ್ ರಿಕ್ಷಾದವನು ಕೇವಲ ರೂ. ೩೦ಕ್ಕೆ ಆರು ತಾಸು ಸುತ್ತಾಡಿ ಸುತ್ತೇ– ನೆಂದು ಹೇಳಿದಾಗ ಎರಡು ಸೈಕಲ್ ರಿಕ್ಷಾಗಳಲ್ಲಿ ಕುಳಿತು ನಾವು ನಾಲ್ಕು ಮಂದಿ ಹೊರಟೆವು. ದಾರಿ ಉದ್ದಕ್ಕೂ ಕಾಣುವ ಜನಜೀವನವನ್ನು, ಪ್ರಕೃತಿ ಸೌಂದರ್ಯವನ್ನು ವೀಕ್ಷಿಸಬೇಕೆಂದೇ ನಾವು ಈ ವಾಹನದಲ್ಲಿ ಕುಳಿತೆವು. ಬಿಸಿಲಿನ ...ಪ ಹೆಚ್ಚಾಗುವುದರ ಮೊದಲೇ ದೂರದ ದೇವಾಲಯಗಳನ್ನು ನೋಡಬೇಕೆಂದು ನಿರ್ಧರಿ– ಸಿದೆವು.

ದಕ್ಷಿಣ ದಿಕ್ಕಿನಲ್ಲಿ ದುಲದೇವ ದೇವಾಲಯ ಮತ್ತು ಚತುರ್ಭುಜ ದೇವಾಲಯಗಳಿವೆ. ವಿಷ್ಣು ದೇವರ ಮಹಾನ್ ಮೂರ್ತಿಯೊಂದು ಚತು ...ಜ ದೇವಾಲಯದಲ್ಲಿದೆ. ಪೂರ್ವದ ದೇವಾ ಲಯಗಳ ಗುಂಪಿನಲ್ಲಿ ಬ್ರಹ್ಮ, ವಾಮನ ಮತ್ತು ಜಾವರಿಮಂದಿರಗಳಿವೆ. ಘಂಟಾಲ್, ಆದಿನಾಥ ಮತ್ತು ಪಾರ್ಶ್ವನಾಥ ಜೈನ ದೇವಾಲಯಗಳೂ ಇಲ್ಲಿವೆ. ಪ್ರತಿಯೊಂದೂ ಶಿಲ್ಪಕಲಾ ದೃಷ್ಟಿಯಲ್ಲಿ ಅತ್ಯುನ್ನತ ಮಟ್ಟದಲ್ಲಿವೆ. ಇವುಗಳನ್ನು ನೋಡಿ ಬರುವಾಗ ನಮ್ಮನ್ನು ಹಸಿವೆ ಬಾಯಾರಿಕೆಗಳು ಪೀಡಿಸಲಾರಂಭಿಸಿದವು. ಊಟದ ಹೋಟೆಲನ್ನು ಹುಡುಕಿದೆವು.

## ಖಜುರಾಹೋವಿನಲ್ಲಿ ಒಂದು ದಿನ

ಚಳಿಗಾಲದ ಸಮಯ. ನವೆಂಬರ್ ತಿಂಗಳು. ಅಲ್ಲದೆ ರಾತ್ರಿ ಕಾಲದಲ್ಲಿ ಪ್ರಯಾಣ ಮಾಡಿ ದುದರ ಪರಿಣಾಮವಾಗಿ ಆಯಾಸ, ಮೈ ಕೈ ನೋವು ವಿಪರೀತವಾಗಿತ್ತು. ಅಂತೂ 'ಮದ್ರಾಸ್ ಕಾಫೀ ಹೌಸ್' ಎಂಬ ನಾಮಫಲಕವನ್ನು ನೋಡಿದಾಗ ನಮಗೆಲ್ಲಾ ಆನಂದವಾಯಿತು. ಸಾಂಬಾರ್, ರಸಮ್ ಮತ್ತು ಮಜ್ಜಿಗೆ ಸಿಕ್ಕಿ ದಷ್ಟು ಸಂತೋಷವಾಯಿತು. ಒಳಗೆ ಹೋಗಿ ಆರಾಮವಾಗಿ ಕೆಲ ಹೊತ್ತು ಕುಳಿತಾಗ ತಮಿಳು ಮಾತನಾಡುವ ವ್ಯಕ್ತಿ ಬಂದು "ಸಾಪಾಟ ಇಲ್ಲ, ಮಸಾಲೆ ದೋಸೆ ಇರ್ಕದು" ಎಂದು ಹೇಳಿದನು. ಆಗ ನಮಗೆ ನಿರಾಶೆ ಯಾಯಿತು. ಮಸಾಲೆ ದೋಸೆ, ಕಾಫಿ, ಉಪ್ಪಿಟ್ಟು ಇವುಗಳನ್ನು ತರಿಸಿ ಮಧ್ಯಾಹ್ನದ ಊಟದ ಕಾರ್ಯವನ್ನು ಮುಗಿಸಿದೆವು. ಸಮೀಪದ ಶಿವಸಾಗರ ಸರೋವರದ ಅಂದವನ್ನು ನೋಡುತ್ತಾ, ನಂತರ ಸೈಕಲ್ ರಿಕ್ಷಾದಲ್ಲಿ ಕುಳಿತು ಪಶ್ಚಿಮ ಗುಂಪಿನ ದೇವಾಲಯಗಳತ್ತ ಹೋದೆವು. ಇವುಗಳು ಕೇಂದ್ರ ಸರಕಾರದ ಪ್ರವಾಸ ಉದ್ಯಮ ಇಲಾಖೆಯ ಆಡಳಿತಕ್ಕೆ ಇವೆ. ದೇವಾಲಯಗಳ ಸುತ್ತ ಮುತ್ತಲೂ ಹುಲ್ಲು ಮೈದಾನವನ್ನು ಅಂದವಾಗಿ ರಚಿಸಿದ್ದಾರೆ. ನೀರು ಚಿಮುಕಿಸುವ ಸಾಧನವನ್ನು ಉಪಯೋಗಿಸಿ ಹುಲ್ಲು ಮೈದಾನವನ್ನು ಸದಾಕಾಲವೂ ಹಸುರಾಗಿ ಉಳಿಯುವಂತೆ ಪ್ರಯತ್ನಿಸಿದ್ದಾರೆ.

ಪಶ್ಚಿಮ ಗುಂಪಿನ ದೇವಾಲಯಗಳನ್ನು ಅವ ಸರವಿಲ್ಲದೆ, ನಿರಾಯಾಸ ಭಾವನೆಯಿಂದ ನೋಡ ಬೇಕು. ಈ ದೇವಾಲಯಗಳನ್ನು ನಾವು ನೋಡ

ಲಾಗಿ ನೋಡಬೇಕಿತ್ತು. ಆಯಾಸವಾದ ಬಳಿಕ ಬೇರೆ ದೇವಾಲಯಗಳಿಗೆ ಹೋಗುವುದು ಸಮಂಜಸ. ಏಕೆಂದರೆ ಪಶ್ಚಿಮ ಗುಂಪಿನ ದೇವಾಲಯಗಳೇ ಖಜುರಾಹೋವಿನ ನಿಜವಾದ ಆಕರ್ಷಣೆ. ಕಂದಾರಿಯ ಮಹಾದೇವ ದೇವಾಲಯ ಇಲ್ಲಿದೆ.

## ಕಂದಾರಿಯ ಮಹಾದೇವ ದೇವಾಲಯ

ನನ್ನ ಅಭಿಪ್ರಾಯದ ಪ್ರಕಾರ ಖಜುರಾಹೋವಿಗೆ ಹೋಗಿ ಇದೊಂದು ದೇವಾಲಯವನ್ನು ನೋಡಿ ಹಿಂದಿರುಗಿದರೂ ನಿಮ್ಮ ಪ್ರವಾಸ ಸಾರ್ಥಕವಾಯಿತೆಂದು ತಿಳಿಯಬಹುದು. ಇದು



**ಕಂದಾರಿಯ ಮಹಾದೇವ ದೇವಾಲಯ**

ವೈವಿಧ್ಯದಿಂದ ಕೂಡಿದ ಚಂದೇಲಾ ಕಲೆಯ ಪರಿಪೂರ್ಣತೆಯ ಸಂಕೇತ. ಮಧ್ಯ ಭಾರತದ ಶಿಲ್ಪಕಲೆಯ ಬೆಳವಣಿಗೆಯಲ್ಲಿ ಪಕ್ವವಾದ ಹಂತದಲ್ಲಿ ನಿರ್ಮಿತವಾದ ಅತಿ ಸುಂದರವಾದ ಕಟ್ಟಡ; ದೇವಾಲಯ.

ಪ್ರಕೃತಿಯ ಪ್ರತಿಕೂಲ ಹವಾಮಾನ ಬದಲಾವಣೆಗಳಿಂದುಂಟಾಗುವ ನಿರಂತರ ದಾಳಿಯ ಹೊರತು, ಈ ದೇವಾಲಯವು ಬೇರಾವುದೇ ರೀತಿಯಲ್ಲಿ ಹಾನಿಗೊಳಗಾಗದೆ ಉಳಿದುದು ನಮ್ಮ ದೇಶದ ಭಾಗ್ಯವೆನ್ನಬೇಕು,

ಕಂದಾರಿಯಾ ಎಂದರೆ ಗುಹೆ ಎಂಬ ಅರ್ಥವಿದೆ. ಗುಹೆಯಲ್ಲಿ ವಾಸಮಾಡುವ ಶಿವನ ದೇವಾಲಯವಿದು. ಶಿವನು ಕೈಲಾಸ ಪರ್ವತ ಅಥವಾ ಮೇರುಪರ್ವತದಲ್ಲಿ ವಾಸಿಸುವನು. ಶಿಲ್ಪಿ ಕಟ್ಟಿದ ದೇವಾಲಯವನ್ನು ಕೈಲಾಸ ಪರ್ವತದಂತೆ ರಚಿಸಿರುತ್ತಾನೆ. ಗರ್ಭಗುಡಿಯಲ್ಲಿರುವ ಶಿವಲಿಂಗವು ನಾಲ್ಕೂವರೆ ಅಡಿ ವ್ಯಾಸವುಳ್ಳದ್ದಾಗಿದ್ದು, ಇಕ್ಕೆಡೆಗಳಲ್ಲಿ ಶಿವ, ಬ್ರಹ್ಮ ಮತ್ತು ವಿಷ್ಣುವಿನ ಮೂರ್ತಿಗಳನ್ನೊಳಗೊಂಡಿದೆ. ನೂರು ಅಡಿ ಉದ್ದ ಮತ್ತು ಅರವತ್ತು ಅಡಿ ಅಗಲವಿರುವ ಈ ದೇವಾಲಯವು ಸುಮಾರು ನೂರು ಅಡಿ ಎತ್ತರಕ್ಕೆ ಹೋಗಿದೆ. ಹದಿಮೂರು ಅಡಿ ಎತ್ತರದ ಒಂದು ವೇದಿಕೆಯ ಮೇಲೆ ಈ ದೇವಾಲಯವನ್ನು ಕಟ್ಟಿಸಿರುತ್ತಾರೆ.

ಆರೋಹಣ ಕ್ರಮದಲ್ಲಿ ಗಾತ್ರವು ವಿಸ್ತಾರ ಹೊಂದುವಂತಹ ಎಂಭತ್ತುನಾಲ್ಕು ಗೋಪುರಾಕೃತಿಯ ಶಿಖರಗಳನ್ನು ಮೇಲು ಛಾವಣಿಯ ಮೇಲೆ ಆಧರಿಸಿರುತ್ತಾರೆ. ಗರ್ಭಗೃಹದ ಮೇಲಣ ಉನ್ನತ ಶಿಖರವು ಗಂಭೀರವೂ, ಅಲಂಕಾರಭರಿತವೂ ಆಗಿದ್ದು ಇಡೀ ದೇವಾಲಯಕ್ಕೆ ಅಪೂರ್ವ ಸೌಂದರ್ಯವನ್ನು ಕೊಡುತ್ತದೆ.

## ಪ್ರವಾಸಿಗಳ ಆಕರ್ಷಣೆ – ಅಭೂತಪೂರ್ವ ಶಿಲ್ಪಕಲೆ

ಖಜುರಾಹೋವಿನ ಇತರ ದೇವಾಲಯಗಳಂತೆ ಕಂದಾರಿಯಾ ಮಹಾದೇವನ ದೇವಾಲಯದಲ್ಲಿ ಅರ್ಧ ಮಂಡಪ, ಮಂಡಪ, ಮಹಾ ಮಂಡಪ, ಅಂತರಾಳ, ಗರ್ಭಗೃಹ ಮೊದಲಾದ ಅಂಶಗಳನ್ನು ಕಾಣಬಹುದು. ಇದರ ಪ್ರತಿಯೊಂದು ಅಂಶವನ್ನು ಯೋಜನಾಬದ್ಧವಾಗಿಯೂ, ಶಿಲ್ಪಕಲಾಶಾಸ್ತ್ರಕ್ಕೆ ಅನುಗುಣವಾಗಿಯೂ ರಚಿಸಲಾಗಿದೆ. ಈ ದೇವಾಲಯದಲ್ಲಿ ಮಾತ್ರ ನಾವು ಎರಡು ಮಕರ ತೋರಣಗಳನ್ನು ಕಾಣಬಹುದಾಗಿದೆ.

ಬಿಡಿ ಪಟ್ಟದ ಎರಡು ಸಾಲುಗಳಲ್ಲಿ ಮೆರವಣಿಗೆಯಲ್ಲಿ ಹೋಗುವಂತೆ ಕಾಣಿಸುವ ಆನೆ, ಕುದುರೆ, ಕಾದಾಳುಗಳು, ಬೇಟೆಗಾರರು, ಕುಸ್ತಿಪಟುಗಳು ಡೊಂಬರದವನು ಗಾಯಕರು, ನರ್ತಕರು, ಭಕ್ತಾದಿಗಳು ಅಲ್ಲದೆ ಶೃಂಗಾರ ದಂಪತಿಗಳು (ಮಿಥುನ), ಒಂಟಿ ಹೆಣ್ಣು ಇತ್ಯಾದಿ ಶಿಲ್ಪಕಲಾಕೃತಿಗಳನ್ನು ಕಾಣಬಹುದು. ಪ್ರವಾಸಿಗಳಿಗೆ ಈ ಕೃತಿಗಳು ವಿಶೇಷವಾಗಿ ಆಕರ್ಷಣೀಯವಾಗಿವೆ. ಅಲ್ಲದೇ ದೇವಾಲಯದ ಗೋಡೆಗೆ ಲಂಬವಾಗಿ ನಿಂತ ಮೂರು ಕಂಭಗಳೋಪಾದಿಯ ಭಾಗಗಳಲ್ಲಿ ಮನಮೋಹಕ ಶಿಲ್ಪಕೃತಿಗಳನ್ನು ಅತ್ಯಧಿಕ ಸಂಖ್ಯೆಯಲ್ಲಿ ಕಾಣಬಹುದು. ಸುರರು, ಅಸುರರು, ಶೃಂಗಾರ ದಂಪತಿಗಳು (ಮಿಥುನ), ಸುರಸುಂದರಿಯರು (ಅಪ್ಸರೆಯರು) ಇವೇ ಮೊದಲಾದ ಶಿಲ್ಪಕೃತಿಗಳು ಯಾವುದೇ ಪ್ರವಾಸಿಯನ್ನು ಆಕರ್ಷಿಸದೆ ಇರಲಾರವು. ಗೋಡೆ, ಕಂಭ, ಪ್ರತಿ ಇಂಚಿಗೆಂಬಂತೆ ಮಹೋನ್ನತ ಶಿಲ್ಪಕೃತಿಗಳು ಎದ್ದು ಕಾಣುತ್ತವೆ. ಮೂಲೆ ಮೂಲೆಗಳಲ್ಲಿ ಕಾಣುವ ಅಪ್ಸರೆಯರು, ಶಲಭಂಜಿಕೆಯರು, ಗಿಡಮರಗಳೊಡನೆ ಆಡುವ ಹೆಣ್ಣುಗಳು, ಭೂತಗಣಾದಿಗಳು, ಶಾರ್ದೂಲ (ವ್ಯಾಲ) ಇತ್ಯಾದಿ ಶಿಲ್ಪಕಲಾಕೃತಿಗಳು ಯಾರ ಮನಸ್ಸನ್ನೂ ಆಕರ್ಷಿಸುವವು.

## ಖಜುರಾಹೋವಿನ ಸುರಸುಂದರಿಯರು ಅಪ್ಸರೆಯರು

ಕಂದಾರಿಯ ಮಹಾದೇವ ದೇವಾಲಯದಲ್ಲಿ ಖಜುರಾಹೋವಿನ ಎಲ್ಲಾ ದೇವಾಲಯಗಳ ಒಳಗೋಡೆ, ಕಂಭ, ಒಳ ಮುಚ್ಚಿಗೆ, ಹೊರ ಗೋಡೆ

ಗಳಲ್ಲಿ ಸುರಸುಂದರಿಯರ ಅಥವಾ ಅಪ್ಸರೆಯರ ಶಿಲ್ಪಕೃತಿಗಳು ಅತ್ಯಧಿಕ ಪ್ರಮಾಣದಲ್ಲಿ ಕಂಡು ಬರುತ್ತವೆ. ಇವರು ನವ ತಾರುಣ್ಯದ ಹೊಸ್ತಿಲನ್ನು ದಾಟಿದ ಚೆಲುವೆಯರು. ಬೆಲೆ ಬಾಳುವ ರತ್ನಾಭರಣಗಳನ್ನು ತೊಟ್ಟು, ಆಕರ್ಷಕ ಉಡುಪುಗಳನ್ನು ಧರಿಸಿದ ಮೋಹನಾಂಗಿಯರು. ಅವರ ನೃತ್ಯ ಭಂಗಿಗಳ ವೈಶಿಷ್ಟ್ಯ. ದೇವತೆಗಳ ಸೇವಿಕೆಯರಾಗಿ ಅವರು ಅನೇಕ ಚಟುವಟಿಕೆಗಳಲ್ಲಿ ನಿರತರಾಗಿರುವರು. ಕೈ ಮುಗಿದು ನಿಂತವರು ಕೆಲವರು. ತಮ್ಮ ಇಷ್ಟ ದೇವತೆಗಳಿಗೆ ಕಮಲದ ಹೂ, ದರ್ಪಣ, ನೀರಿನ ಹೂಜಿ, ಉಡುಪು, ಆಭರಣಗಳನ್ನು ಅರ್ಪಿಸಲು ಮುನ್ನಡೆಯುವವರು ಇತರರು.

ಸಾಮಾನ್ಯ ಹೆಣ್ಣಿನಂತೆ ದೈನಂದಿನ ಚಟುವಟಿಕೆಗಳಲ್ಲಿ ನಿರತರಾದ ಸುರಸುಂದರಿಯರ ಶಿಲ್ಪಕೃತಿಗಳನ್ನು ಇಲ್ಲಿ ಕಾಣಬಹುದು. ಆಕಳಿಸುವುದು, ತಲೆಗೂದಲಿನಿಂದ ನೀರನ್ನು ಹಿಂಡುವುದು, ಬೆನ್ನನ್ನು ತುರಿಸುವುದು, ಸ್ತನಗಳನ್ನು ಮುಟ್ಟುವುದು, ಕಾಲಿಗೆ ತಗಲಿದ ಮುಳ್ಳನ್ನು ತೆಗೆಯುವುದು, ಪುಟ್ಟ ಮಗುವನ್ನು ಪ್ರೀತಿಸುವುದು, ಸಾಕು ಪ್ರಾಣಿಗಳೊಡನೆ ಆಡುವುದು, ಪತ್ರ ಬರೆಯುವುದು, ಕಣ್ಣಿಗೆ ಕಾಡಿಗೆ ಹಚ್ಚುವುದು, ಕಾಲಿಗೆ ಮದರಂಗಿ ಹಚ್ಚುವುದು ಇಂತಹ ಸಾಮಾನ್ಯ ಚಟುವಟಿಕೆಗಳಲ್ಲಿ ನಿರತರಾದ ಹೆಣ್ಣಿನ ಶಿಲ್ಪಕೃತಿಗಳನ್ನು ಇಲ್ಲಿ ಕಾಣಬಹುದು. ಸುರಸುಂದರಿಯರ ಈ ಚಟುವಟಿಕೆಗಳ ಹಿಂದೆ ಯಾವುದಾದರೂ ಸಂಕೇತವಿದೆಯೆ? ಇದೊಂದು ಉತ್ತರಿಸಲಾಗದ ಪ್ರಶ್ನೆ.

## ದೇವಾಲಯದಲ್ಲಿ ಶೃಂಗಾರ ಶಿಲ್ಪಕೃತಿ ಏಕೆ?

ಖಜುರಾಹೋವಿನ ದೇವಾಲಯಗಳಲ್ಲಿ ಕೆತ್ತಿದ ಶೃಂಗಾರ ಶಿಲ್ಪಕೃತಿಗಳ ಔಚಿತ್ಯವನ್ನು ಅನೇಕರು ಪ್ರಶ್ನಿಸಿದ್ದಾರೆ. ಅವುಗಳ ಕುರಿತು ಕುತೂಹಲ ವಿರುವುದು ಸಹಜ.

ವಾತ್ಸಾಯನ ಮುನಿಯು ಕಾಮಶಾಸ್ತ್ರದಲ್ಲಿ ಸೂಚಿಸಿದ ಶೃಂಗಾರ ಆಸನಗಳನ್ನು ಶಿಲ್ಪಕೃತಿಯಲ್ಲಿ ಸೂಚಿಸಲಾಗಿದೆ- ಎಂದು ಕೆಲವರ ಅಭಿಪ್ರಾಯ. ಉಳಿದವರ ಅಭಿಪ್ರಾಯದ ಮೇರೆಗೆ ಸಮಕಾಲೀನ ಸಮಾಜವು ನೈತಿಕವಾಗಿ ಅಧೋಗತಿಗೆ ಇಳಿದಿತ್ತು. ಈ ನೈತಿಕ ಅಧಃಪತನದ ಪ್ರತಿಬಿಂಬವೆಂಬಂತೆ ಅಶ್ಲೀಲ ವಿಷಯಗಳನ್ನೊಳಗೊಂಡ ಶಿಲ್ಪ ಕೃತಿಗಳು ರಚಿಸಲ್ಪಟ್ಟವು. ಇನ್ನೊಂದು ಅಭಿಪ್ರಾಯ ಈ ತೆರನಾಗಿದೆ: ದೇವಾಲಯದ ಒಳಗಣ ನೈರ್ಮಲ್ಯ ಮತ್ತು ಶಾಂತಿ ಹಾಗೂ ಹೊರಗೆ ಪ್ರದರ್ಶಿಸಲ್ಪಟ್ಟ ವಿಷಯಲಾಂಪಟ್ಯ ಪರಸ್ಪರ ವ್ಯತ್ಯಾಸವುಳ್ಳದ್ದಾಗಿದೆ. ಇದರಿಂದ ಭಕ್ತರ ಮನಸ್ಸು ಪರಿಶುದ್ಧವಾಗಲು ಅನುಕೂಲವಾಗುವುದು. ಇನ್ನು ಕೆಲವರು ಈ ಶೃಂಗಾರ ಶಿಲ್ಪ ಕೃತಿಗಳನ್ನು ತಾಂತ್ರಿಕ ಒಳ ಪಂಗಡದೊಡನೆ ಸಂಬಂಧಿಸುತ್ತಾರೆ. ಮೋಕ್ಷ ಸಾಧನೆಗೆ ಯೋಗ




"ನನಗೆ ಸ್ವಲ್ಪ ಹೆಚ್ಚಿಗೆ ಕೊಡಿ... ಎಂದ್ರೆ ಇಲ್ಲಾಂತೀರಲ್ಲಾ—" ನ್ಯಾಯವೇ!"

ದು.ತ ಭೋಗವೂ ಸಾಧನೆಯಾಗಿದೆ ಎಂಬುದು ಮಧ್ಯ ಭಾರತದಲ್ಲಿ ಪ್ರಚಾರದಲ್ಲಿದ್ದ ಈ ತಾಂತ್ರಿಕ ಒಳ ಪಂಗಡದ ತತ್ತ್ವವಾಗಿತ್ತು. ಈ ತತ್ವದ ಆಧಾರದಲ್ಲಿ ಶೃಂಗಾರ ಶಿಲ್ಪಕೃತಿಗಳ ಪ್ರದರ್ಶನ ಸಮಕಾಲೀನ ಆಚಾರವಿಚಾರಗಳ ಪ್ರತಿಬಿಂಬ ವಾಗಿದೆ ಎಂದು ತಿಳಿಯಬಹುದು. ಇಂದ್ರಿಯ ಸುಖಗಳನ್ನು ಹತೋಟಿಯಲ್ಲಿಟ್ಟರೆ ಮೋಕ್ಷವನ್ನು ಸಾಧಿಸಬಹುದೆಂದು ತಾಂತ್ರಿಕ ಒಳ ಪಂಗಡದ ಅಭಿಪ್ರಾಯವಾಗಿತ್ತು.

## ವಿದೇಶಿ ಪ್ರವಾಸಿಗಳು ಕಂಡ ಖಜುರಾಹೋ

ಚೀನದ ಹ್ಯೂಯನ್ ತ್ಸಾಂಗನು ಏಳನೆಯ ಶತಮಾನದಲ್ಲಿ ಭಾರತವನ್ನು ಸಂದರ್ಶಿಸಿದಾಗ ತಾನು ಕಂಡ ಚಿಚಿತೂ(ಜಜೀಹುತಿ) ಎಂಬ ರಾಜ್ಯದ ಕುರಿತು ಬರೆದಿರುವನು.

ಅಬೂರಿಹಾನ್ ಆಲ್ ಬರೂನಿ ಎಂಬ ಚರಿತ್ರಕಾರನು ಘಜನೀ ಮಹಮ್ಮದನೊಂದಿಗೆ ಭಾರತಕ್ಕೆ ಹನ್ನೊಂದನೆಯ ಶತಮಾನದಲ್ಲಿ ಬಂದಿದ್ದನೆಂದು ಚರಿತ್ರೆಯು ತಿಳಿಸುತ್ತದೆ. ಆಲ್ ಬರೂನಿಯ ಪ್ರಕಾರ ಜೇಜ ಹುತಿ ರಾಜ್ಯದ ರಾಜಧಾನಿಯೇ ಖಜುರಾಹೋ.

ಇಬನ್ ಬತೂತಾ ಎಂಬ ಮಹಮ್ಮದೀಯ ಪ್ರವಾಸಿಯು ಕ್ರಿಸ್ತಶಕ ೧೩೩೫ ರಲ್ಲಿ ಖಜುರಾಹೋವನ್ನು ಸಂದರ್ಶಿಸಿದನೆಂದು ತಿಳಿಸಲಾಗುತ್ತದೆ. ಅವನು ಖಜರಾಹೋವಿನ ಸರೋವರದ ಕುರಿತಾಗಿಯೂ ಅವರ ಸುತ್ತಮುತ್ತಲಿರುವ ಅನೇಕಾನೇಕ ದೇವಸ್ಥಾನಗಳ ಕುರಿತು ಸವಿಸ್ತಾರವಾಗಿ ಬರೆದಿರುವನು. ಅವನ ಬರವಣಿಗೆಯ ಪ್ರಕಾರ ಚಂಡೇಲಾ ಅರಸರ ರಾಜಕೀಯ ಅವಸಾನವಾದರೂ-ಕ್ರಿ.ಪೂ. ೧೩೩೫ರ ತನಕ ಖಜುರಾಹೋ ದೇವಾಲಯಗಳು ವೈಭವಯುಕ್ತವಾಗಿ ಮೆರಯುತ್ತಿದ್ದವು.

## ಮರೆಯಲಾರದ ಖಜುರಾಹೋ

ಕಂದಾರಿಯಾ ಮಹಾದೇವ ದೇವಾಲಯವನ್ನು ಬೆಳದಿಂಗಳಿನಲ್ಲಿ ನೋಡಲು ಸುಮಾರು ಎಂಟು ಗಂಟೆಗೆ ಪುನಃ ಹೋದೆವು. ಒಂದು ವಿಚಿತ್ರವಾದ ಅನುಭವ ನಮಗೆ ಕಾದಿತ್ತು. ಕತ್ತಲೆ ಬಣ್ಣದ ಪ್ರಕಾಶಮಾನವಾದ ವಿದ್ಯುದ್ದೀಪಗಳ ಬೆಳಕನ್ನು ನಾಲ್ಕು ಮೂಲೆಗಳಿಂದ ಕಂದಾರಿಯ ಮಹಾದೇವ ದೇವಾಲಯದ ಮೇಲೆ ಕೇಂದ್ರೀಕರಿಸಲಾಗಿತ್ತು. ದೇವಾಲಯದ ಬೇರೆ ಬೇರೆ ಭಾಗಗಳು ಈ ಉಜ್ವಲ ಬೆಳಕಿಗೆ ಎದ್ದು ಕಾಣುತ್ತಿದ್ದವು. ಸಮೀಪದ ಪ್ರವಾಸ ಉದ್ಯಮ ಇಲಾಖೆಯ ಸಿಬ್ಬಂದಿಯವರೊಡನೆ ವಿಚಾರವಿನಿಮಯ ಮಾಡಿದಾಗ ಅವರು ನಮಗೆ ಖಜುರಾಹೋಯಿನಲ್ಲಿ ಬೇಸಿಗೆಯಲ್ಲಿ ಜರಗುವ ನೃತ್ಯ ಮಹೋತ್ಸವಕ್ಕೆ ಆಮಂತ್ರಿಸಿತ್ತರು. ಈ ನೃತ್ಯ ಮಹೋತ್ಸವದ ಅಂಗವಾಗಿ ದೇಶದ ಹೆಸರಾಂತ ನೃತ್ಯಗಾತಿಯರನ್ನು, ಖಜುರಾಹೋ ದೇವಾಲಯದ ವೇದಿಕೆಯ ಮೇಲೆ ನೃತ್ಯ ಪ್ರದರ್ಶನಕ್ಕೆ ಬರಹೇಳುವರು. ಒಂದು ವಾರದ ತನಕ ಜರಗುವ ನೃತ್ಯ ಮಹೋತ್ಸವಕ್ಕೆ ದೇಶ ವಿದೇಶಗಳಿಂದ ಪ್ರೇಕ್ಷಕರು ಧಾವಿಸುತ್ತಾರೆ. ವಿದೇಶೀಯರಿಗೆ ಅನುಕೂಲವಾಗುವಂತೆ ಪಾಶ್ಚಿಮಾತ್ಯರನ್ನು ಖಜುರಾಹೋವಿನಲ್ಲಿ ತಡೆ ಹಿಡಿದಿರುತ್ತಾರೆ.

ಖಜರಾಹೋ ನೋಡಿಯಾಯಿತು. ಮರುದಿನ ಬಳಿಗ್ಗೆ ಬಸ್ಸಿನಲ್ಲಿ ಕುಳಿತು ಛತ್ತರಪುರ ಸಾಗರ್ ಮಾರ್ಗವಾಗಿ ಭೋಪಾಲವನ್ನು ಸೇರಿದೆವು. ಖಜುರಾಹೋವಿನ ದೇವಾಲಯಗಳು ಮಾತ್ರ ಸ್ಮೃತಿಪಟಲದಲ್ಲಿ ಅಚ್ಚಳಿಯದೇ ಈಗಲೂ ಉಳಿದಿದೆ. ಖಜುರಾಹೋವನ್ನು ಮರೆಯಲು ಸಾಧ್ಯವಿಲ್ಲ.



ಡಾ. ಸುನಂದಾ ಕುಲಕರ್ಣಿ

# ಡಾ. ಎಂ. ಕೆ. ಕೃಷ್ಣ ಮೆನನ್ ಪ್ರಸಿದ್ಧಿ ಬಯಸದ ಪ್ರತಿಭಾ ಪುರುಷ

ಜಗತ್ತು ಇಂದಿನಂತೆಯೇ ಹಿಂದೂ ಎಂದಿನಿಂದಲೂ ಇತ್ತೇ ಎಂಬ ಪ್ರಶ್ನೆ ಆಗಾಗ ನನ್ನನ್ನು ಕೆಣಕುವುದುಂಟು. ಯಾಕೆಂದರೆ, ಇಂದಂತೂ ನಮ್ಮ ಸುತ್ತ ನೋಡಿಕೊಂಡರೆ ನಮ್ಮ ಕಣ್ಣಿಗೆ ಹೆಚ್ಚಾಗಿ ಗೋಚರಿಸುವವರು ಸ್ವಪ್ರಸಿದ್ಧಿಪ್ರಿಯರು. ಸುಲಭಕೀರ್ತಿ-ಕಾಮಿಗಳು ಇಲ್ಲವೆ ಧನಾರ್ಜನಕ್ಕಾಗಿ ಏನನ್ನು ಮಾಡಲೂ ಹಿಂಜರಿಯದಂತಹ ಮಹಾ ಪುರುಷ(ಸ್ತ್ರೀಯರನ್ನೊಳಗೊಂಡು)ರು. ತಮ್ಮ ಯೋಗ್ಯತೆ, ಸಾಧನೆ ತೃಣಮಾತ್ರವಿರುವಾಗಲೂ ಈ ಜನಕ್ಕೆ ಸುತ್ತಲೂ ಹೊಗಳುಭಟ್ಟರು ಬೇಕು. ಪತ್ರಿಕೆಗಳಲ್ಲಿ ಇವರ ಬಗ್ಗೆ ಮೇಲಿಂದ ಮೇಲೆ ಏನಾದರೂ ಬರುತ್ತಲೇ ಇರಬೇಕು. ಈ ಸಾಮಾನ್ಯ ನಿಯಮಕ್ಕೂ ಒಮ್ಮೊಮ್ಮೆ ಅಪರೂಪಕ್ಕೆಂಬಂತೆ ಅಪವಾದಗಳು ಕಂಡುಬರುವುದುಂಟು. ಅಂಥ ಒಬ್ಬ ಎಲ್ಲರಂತಲ್ಲದ ವ್ಯಕ್ತಿಯ ಬಗ್ಗೆ ನನಗೆ ಗೊತ್ತಿರುವಷ್ಟನ್ನಾದರೂ ಇಲ್ಲಿ ಬರೆಯಬಯಸುತ್ತಿದ್ದೇನೆ. ಇಂಥ ಪ್ರಸಿದ್ಧಿಯಲ್ಲಿ ಅವರಿಗೆ ಆಸ್ಥೆಯಿಲ್ಲವೆಂದು ನನಗೆ ಗೊತ್ತಿರುವಾಗಲೂ ಬರೆಯುತ್ತಿದ್ದೇನೆ – ಅವರ ಪರಿಚಯ ನಮ್ಮ ಜನಕ್ಕೆ ಆಗಬೇಕೆಂಬ ಉದ್ದೇಶದಿಂದ.

ಡಾ. ಎಂ. ಕೆ. ಕೃಷ್ಣ ಮೆನನ್ ಎಂಬ ಹೆಸರು ವೈದ್ಯಕೀಯ ವಿದ್ಯಾರ್ಥಿಗಳಿಗೆ ಸುಪರಿಚಿತ. ಅವರಿಗೆಲ್ಲ ಇವರ ಹೆಸರು ಗೊತ್ತಿರುವುದಕ್ಕೆ ಕಾರಣವೆಂದರೆ ಡಾ. ಲಕ್ಷ್ಮಣಸ್ವಾಮಿ ಮುದಲಿಯಾರರೊಡಗೂಡಿ ಇವರು ಬರೆದ ಪ್ರಸೂತಿಶಾಸ್ತ್ರದ ಪುಸ್ತಕ. ಆಗಲೆ ಎಂಟು ಆವೃತ್ತಿಗಳನ್ನು ಕಂಡಿರುವ ಈ ಪುಸ್ತಕ ಪ್ರಸೂತಿಶಾಸ್ತ್ರದ ವಿದ್ಯಾರ್ಥಿಗಳಿಗಂತೂ ಅನಿವಾರ್ಯ ಸಂಗಾತಿ.

ಮೂಲತಃ ಕೇರಳದವರಾದ ಡಾ. ಮೆನನ್ ಇಂದು ಮದ್ರಾಸ್ ನಿವಾಸಿ. ಎತ್ತರ

ನಿಲವು, ಸಾದಗಪ್ಪು ಮೈಬಣ್ಣ, ಆಳವಾದ ಕಣ್ಣುಗಳು, ಗಂಭೀರ ಮುಖಭಾವ–ಇವೆಲ್ಲಕ್ಕೂ ಕಳಸವಿಡುವಂತೆ ಇವರು ಮಿತಭಾಷಿ. ಆದರೆ ಪ್ರಸೂತಿಶಾಸ್ತ್ರದ ಮೇಲೆ ಬೇಕಾದರೆ ಗಂಟೆಗಟ್ಟಲೆ ನಿರರ್ಗಳವಾಗಿ ಮಾತಾಡಬಲ್ಲರು. ಬಿ.ಎ., ಎಂ. ಬಿ. ಬಿ. ಎಸ್., ಎಂ. ಡಿ., ಎಫ್. ಆರ್. ಸಿ. ಓ. ಜಿ.ಯಂತಹ ಉನ್ನತ ಪದವಿಗಳ ಸರಮಾಲೆಯೇ ಇವರ ಕೊರಳಿಗಿದ್ದರೂ ಇವರು ತುಂಬ ಸಾದಾ ವ್ಯಕ್ತಿ.

ವಿದ್ಯಾರ್ಜನೆಯ ಕಾಲದಲ್ಲಿ ತುಂಬ ಪ್ರತಿಭಾನ್ವಿತರೆನಿಸಿದ್ದರು. ಪ್ರಥಮಸ್ಥಾನಕ್ಕಾಗಿ ಇವರಿಗೂ ಇನ್ನೊಬ್ಬ ಮೇಧಾವಿ ವಿದ್ಯಾರ್ಥಿನಿ ಮಾಧವಿಗೂ ಸದಾ ಸ್ಪರ್ಧೆಯಿರುತ್ತಿತ್ತಂತೆ. ಕೊನೆಗೂ ಪದವೀ ಪರೀಕ್ಷೆಯಲ್ಲಿ ಸ್ವರ್ಣ ಪದಕ ಇವರಿಗೆ ದಕ್ಕಿತು ಮಾತ್ರವಲ್ಲ, ಆ ಪದಕ ವನ್ನಿರಿಸಿದವರ ಮಗಳನ್ನೂ ಗೆದ್ದುಕೊಂಡರಿವರು. ಆಕೆಯೆ ಇವರ ಹೆಂಡತಿ ಮತ್ತು ಇವರೊಂದಿಗೆ ಸ್ಪರ್ಧಿಸುತ್ತಿದ್ದ ಮಾಧವಿ.

ಡಾ. ಮಾಧವಿಯವರೂ ಗಂಡನಂತೆಯೇ ಪ್ರಾಧ್ಯಾಪಕಿಯೇ ಆದರೂ ಕಾಲೇಜಿನಲ್ಲಿ ಹೆಚ್ಚಿನವರಿಗೆ ಇವರಿಬ್ಬರೂ ಗಂಡ–ಹೆಂಡಿರೆಂದು ಗೊತ್ತೇ ಇರುತ್ತಿರಲಿಲ್ಲ, ಈಕೆ ತಮ್ಮ ಹೆಂಡತಿಯೆಂದು ಯಾರಿಗೂ ಪರಿಚಯಿಸುವ ಗೋಜಿಗೆ ಹೋದವರಲ್ಲ ಡಾ. ಮೆನನ್. ಡಾ. ಮಾಧವಿ ಕೂಡ ಅಷ್ಟೇ. ಗಂಡನ ಹೆಸರು ಹೇಳಿಕೊಂಡು ಮುನ್ನುಗ್ಗಲು ಪ್ರಯತ್ನಿಸದೇ ತಮ್ಮ ವ್ಯಕ್ತಿತ್ವ ಹಾಗೂ ತಮ್ಮದೇ ಪರಿಶ್ರಮದ ಮೂಲಕವೇ ಮದ್ರಾಸಿನ ಜನಕ್ಕೆ ಸುಪರಿಚಿತರಾಗಿದ್ದಾರೆ. ಇವರಿಗೆ ಇಬ್ಬರು ಗಂಡು ಹಾಗೂ ಒಬ್ಬ ಹೆಣ್ಣು ಮಗಳು; ಒಬ್ಬ ಮಗ ವೆಲ್ಲೂರಿನಲ್ಲಿ ನ್ಯೂರೋ ಫಿಜಿಶಿಯನ್ ಆಗಿ ಕೆಲಸಮಾಡುತ್ತಿದ್ದಾರೆ.

ಡಾ. ಮೆನನ್ನರಿಗೆ ಇತ್ತೀಚೆಗಷ್ಟೆ ಸಂಜಯ ಗಾಂಧಿ ಬಹುಮಾನ ದೊರೆಯಿತು. ಮದ್ರಾಸಿನಲ್ಲಿ ನಡೆದ ೨೭ನೆಯ ಪ್ರಸೂತಿಶಾಸ್ತ್ರದ ಸಮ್ಮೇಳನದಲ್ಲಿ ಈ ಬಗ್ಗೆ ವಿಶೇಷ ಉಲ್ಲೇಖವಾಗಿ ಅನೇಕರು ಪ್ರಶಂಸೆಯ ಮಾತುಗಳನ್ನಾಡಿದರು. ಅದಕ್ಕೆ ಉತ್ತರ ರೂಪದಲ್ಲಿ ಇವರು ಭಾಷಣ ಮಾಡುವರೆಂದು ನಿರೀಕ್ಷಿಸಿದ್ದ ನಮಗೆಲ್ಲ ಅತೀವ ನಿರಾಸೆಯೇ ಆಯಿತು. ಕಾರಣ ಇವರು ಒಂದೇ ವಾಕ್ಯದಲ್ಲಿ ತಮ್ಮನ್ನು ಅಭಿನಂದಿಸಿದ್ದಕ್ಕಾಗಿ ಕೃತಜ್ಞತೆ ಹೇಳಿ ಕುಳಿತುಬಿಟ್ಟರು.

ಡಾ. ಮೆನನ್ನರಿಗೆ 'ಪದ್ಮಶ್ರೀ' ಸಿಕ್ಕ ಸುದ್ದಿಯನ್ನು ಹೊತ್ತ ತಂತಿ ಸಂದೇಶವನ್ನು ಮಧ್ಯರಾತ್ರಿಯಲ್ಲಿ ತಂದು ಅವರನ್ನೆಬ್ಬಿಸಿ ಅಂಚೆ ಪೇದೆ ತಲುಪಿಸಿದ. "ಇದನ್ನು ಅಪರಾತ್ರಿಯಲ್ಲಿ ತರುವ ಅಗತ್ಯವಿರಲಿಲ್ಲ; ನಾಳೆ ತಂದಿದ್ದರೂ ನಡೆಯುತ್ತಿತ್ತಲ್ಲ?" ಎಂದು ಅವರು ಆಡಿದ್ದನ್ನು ಕೇಳಿದ ಪೇದೆಯ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿರಬೇಕು. ಆದರೆ ಮೆನನ್ನರಿಗೆ ಪ್ರಸಿದ್ಧಿ, ಹಣ, ಸಾಮಾಜಿಕ ಸ್ಥಾನಮಾನ ಇವಾವುದರ ಕಡೆಗೂ ಗಮನವಿಲ್ಲ. ಆದರೆ ಶೀಘ್ರ ಕೋಪ ಮಾತ್ರ ಇವರಲ್ಲಿ ಮನೆ ಮಾಡಿದೆ. ಮೂರ್ಖರನ್ನು ಸಹಿಸಿಕೊಳ್ಳುವಷ್ಟು ತಾಳ್ಮೆ ಅವರಲಿಲ್ಲ.

ಇಲಾಖೆಯ ನಿರ್ದೇಶಕರಾಗಿ ನಿವೃತ್ತರಾದ ನಂತರ ತಮ್ಮ ಹೆಚ್ಚಿನ ಸಮಯವನ್ನು ಡಾ. ಮೆನನ್ ಬರವಣಿಗೆಯಲ್ಲೇ ಕಳೆಯುತ್ತಿದ್ದಾರೆ. ತಮ್ಮ ಸಹೋದ್ಯೋಗಿಗಳಾಗಿದ್ದ ಡಾ. ಭಾಸ್ಕರ್ ರಾವ್ ಹಾಗೂ ಡಾ. ದೇವಿಯವರ ಜೊತೆಗೂಡಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ಇವರು ಬರೆದ ಪುಸ್ತಕ ವಿದ್ಯಾರ್ಥಿಗಳಲ್ಲೆಲ್ಲ ಅತ್ಯಂತ ಪ್ರಿಯವಾಗಿದೆ. ವೈಜ್ಞಾನಿಕ ಪತ್ರಿಕೆಗಳಲ್ಲೂ ಇವರ ಸಂಶೋಧಕ ಲೇಖನಗಳು ಪ್ರಕಟವಾಗುತ್ತಿರುತ್ತವೆ.

ಡಾ. ಮೆನನ್ ಪ್ರಸಿದ್ಧಿಯಿಂದ ದೂರ ಸರಿಯಬೇಕೆಂದಷ್ಟೂ ಕೀರ್ತಿಲಕ್ಷ್ಮಿ ಅವರನ್ನು ಸುತ್ತುವರಿಯುತ್ತಿದ್ದಾಳೆ. ಎಲ್ಲಿಯೂ ಸಭೆ ಸಮಾರಂಭಗಳಲ್ಲಿ ಹಾರ ಹಾಕಿಸಿಕೊಳ್ಳುವ, ಫೋಟೊಕ್ಕೆ ಪೋಜು ಕೊಡುವ ಇಲ್ಲವೆ ಭಾಷಣ ಬಿಗಿದು ಹೆಗ್ಗಳಿಕೆ ಹೆಚ್ಚಿಸಿಕೊಳ್ಳುವುದರಿಂದ ಅವರು ತುಂಬ ದೂರ ಉಳಿಯುತ್ತಾರೆ. ಕೆಲವು ವರ್ಷಗಳ ಹಿಂದೆ ಆಗ್ರಾದಲ್ಲಿ ಅಖಿಲ ಭಾರತ ಪ್ರಸೂತಿಶಾಸ್ತ್ರಜ್ಞರ ಸಮ್ಮೇಳನ ನಡೆಯಿತು. ಡಾ. ಮೆನನ್ನರಿಗಾಗಿ ವೇದಿಕೆಯ ಮೇಲೆ ಒಂದು ಆಸನವನ್ನು ಕಾದಿರಿಸಲಾಗಿತ್ತು. ಸಭೆ ಪ್ರಾರಂಭ

ವಾದರೂ ಆ ಆಸನ ಖಾಲಿಯಾಗೇ ಉಳಿದಿತ್ತು. ಸಂಘಟಕರು ಧ್ವನಿವರ್ಧಕದಲ್ಲಿ ಕೂಗಿ ಕೂಗಿ ಕರೆದ ನಂತರ ಹಿಂದುಗಡೆ ಮೂಲೆಯಲ್ಲಿ ಸಾಮಾನ್ಯ ಅಪರಿಚಿತ ಪ್ರೇಕ್ಷಕನಂತೆ ಕುಳಿತವರು ಎದ್ದು ಮೆಲ್ಲಗೆ ಹೋದರು. ವೇದಿಕೆಯ ಮೇಲೆ ಆಢ್ಯತೆಯಿಂದ ಮೆರೆಯುವುದು ಇವರ ಸ್ವಭಾವಕ್ಕೇ ವ್ಯತಿರಿಕ್ತವಾದುದು. ಅವರ ಕುರಿತು ಲೇಖನ ಬರೆಯಬೇಕೆಂಬ ಉದ್ದೇಶದಿಂದ ನಾನು ಅವರನ್ನೊಮ್ಮೆ ಸ್ವಲ್ಪ ಅಳುಕಿನಿಂದಲೇ ಕೇಳಿದೆ. "ನನಗೆ ಒಣ ಪ್ರಸಿದ್ಧಿ ಹಿಡಿಸುವುದಿಲ್ಲ. ಇದುವರೆಗೆ ಯಾರಾದರೂ ನನ್ನ ಬಗ್ಗೆ ಏನಾದರೂ ಬರೆದಿದ್ದರೆ, ತಿಳಿದುಕೊಂಡಿದ್ದರೆ ಅದಾವುದಕ್ಕೂ ನಾನು ಹೊಣೆಯಲ್ಲ. ನನ್ನಿಂದ ಮಾತ್ರ ನನ್ನ ಬಗ್ಗೆ ಯಾರಿಗೂ ಏನೂ ತಿಳಿಯುವುದಿಲ್ಲ. ನಾನು ಇಲ್ಲಿಯವರೆಗೂ ಹೀಗೇ ಇದ್ದೇನೆ; ಇಹಜೀವನದ ಕೊನೆಯ ಕ್ಷಣದ ವರೆಗೂ ಹೀಗೇ ಉಳಿಯುವ ಆಸೆಯಿದೆ," ಎಂದು ಬಿಟ್ಟರು.

ವೈದ್ಯರ ಬಗ್ಗೆ ಡಾ. ಮೆನನ್ನರ ಅಭಿಪ್ರಾಯವನ್ನು ಅವರ ಬರವಣಿಗೆಯಿಂದ ಸಂಗ್ರಹಿಸಿ ಹೇಳುತ್ತೇನೆ. ಮಾತೃಭೂಮಿಯ ಋಣವನ್ನು ಜನ್ಮವಿತ್ತ ಮಾತಾ–ಪಿತೃಗಳ ಋಣವನ್ನು ವ್ಯಕ್ತಿ ತೀರಿಸಬೇಕಿರುವಂತೆ ಸ್ನಾತಕೋತ್ತರ ವಿದ್ಯಾರ್ಥಿಗಳ ಋಣ ವಿಜ್ಞಾನಕ್ಕೂ ಇದೆ ಎನ್ನುತ್ತಾರೆ ಅವರು, ಸ್ನಾತಕೋತ್ತರ ಪದವಿ ಪಡೆದ ನಂತರ ವೈದ್ಯರು ತಮ್ಮಿಂದಾದ ಸಂಶೋಧನ ಮಾಡಿ ವಿಜ್ಞಾನದ ಋಣ ತೀರಿಸಬೇಕೆನ್ನುತ್ತಾರೆ. ಬರಿ ಹಣ ಗಳಿಕೆ, ಕೀರ್ತಿ ಸಂಪಾದನೆ ಮಾತ್ರವೇ ವೈದ್ಯನ ಗುರಿಯಾದರೆ ಅದರಂಥ ಕೃತಘ್ನ ಕೃತಿ ಇನ್ನೊಂದಿಲ್ಲವೆನ್ನುತ್ತಾರೆ.

ಡಾ. ಮೆನನ್ ವೈದ್ಯಕೀಯ ಇಲಾಖೆಯ ನಿರ್ದೇಶಕರಾಗಿದ್ದಾಗ ಮದ್ರಾಸ್ ಸರಕಾರಿ ವೈದ್ಯಕೀಯ ಕಾಲೇಜಿನಲ್ಲಿ ಒಂದು ಘಟನೆ ನಡೆಯಿತು. ಅಲ್ಲಿ ಒಂದು ಪ್ರಕರಣದಲ್ಲಿ, ಅಲ್ಲಿ ಪ್ರಾಧ್ಯಾಪಕಿಯಾಗಿದ್ದ ತಮ್ಮ ಹೆಂಡತಿ ತಳೆದ ನಿಲುವು ತಪ್ಪು, ವಿದ್ಯಾರ್ಥಿಯ ನಿಲುವೇ ಸರಿಯೆಂದು ಅವರಿಗೆ ಮನವರಿಕೆಯಾದಾಗ ಡಾ. ಮಾಧವಿಯವರ ನಿಲುವೆ ತಪ್ಪೆಂದು ಬಹಿರಂಗವಾಗಿ ಸಾರುವ ಎದೆಗಾರಿಕೆಯನ್ನು ಅವರು ತೋರಿದರು.

ಡಾ. ಮೆನನ್ ಅವರ ಮನದಂತೆ ಅವರ ಕೈಯೂ ಹರಿತವಾದದ್ದು; ಲೇಖನಿಯನ್ನು ಎಷ್ಟೊಂದು ಸುಲಲಿತವಾಗಿ ಬಳಸಬಲ್ಲರೋ ಅಷ್ಟೇ ಸಮರ್ಥ ರೀತಿಯಿಂದ ಸಲಿಲವಾಗಿ ಚಾಕುವನ್ನೂ ಆಡಿಸಬಲ್ಲರು. ಇವರ ಶಸ್ತ್ರಕ್ರಿಯೆಯ ಶರವೇಗವನ್ನು ಇಂದಿಗೂ ನೆನೆಸಿಕೊಳ್ಳುವ ಸಹೋದ್ಯೋಗಿಗಳು ಇನ್ನೂ ಇದ್ದಾರೆ. ಅವರು ಕಲಿಸಿದ ಪಾಠಗಳನ್ನು ಇನ್ನೂ ಮೆಲುಕು ಹಾಕುವ ವೈದ್ಯರಿದ್ದಾರೆ. ಬಸಿರಿಯಲ್ಲಿ ಕಾಲಿಗೆ ಬಾವು ಒಂದು ರಕ್ತದ ಒತ್ತಡ ಹೆಚ್ಚಾಗಿ ಸೆಟೆರೋಗ ಬರುತ್ತದೆ. ಅದಕ್ಕೆ Eclampsia ಎನ್ನುತ್ತಾರೆ. ಅಂಥ ರೋಗದಲ್ಲಿ ಒಂದು ಚುಚ್ಚುಮದ್ದು ಕೊಡುವ ವಿಶಿಷ್ಟ ಪದ್ಧತಿಯನ್ನು ಅವರು ಶೋಧಿಸಿದ್ದಾರೆ. ಅದು 'ಕೃಷ್ಣ ಮೆನನ್ ಪದ್ಧತಿ' ಎಂದೇ ಹೆಸರಾಗಿದೆ.

ಇವರಿಗೆ ಪದ್ಮಶ್ರೀ ಸಿಕ್ಕಾಗ, ಸಂಜಯ ಗಾಂಧಿ ಬಹುಮಾನ ಬಂದಾಗ ಇವರಿಗೆ ತಿಳಿಯದಂತೆ ಅಕಸ್ಮಾತ್ತಾಗಿ ಇವರನ್ನು ಸನ್ಮಾನಿಸಿದ ಪ್ರಸಂಗಗಳನ್ನು ಬಿಟ್ಟರೆ ಅವರು ಯಾವುದೇ ಸನ್ಮಾನವನ್ನು ಮಾಡಿಸಿಕೊಂಡವರಲ್ಲ, ಡಾ. ಮೆನನ್ ಅವರನ್ನು ಮೆಚ್ಚಿಸಬೇಕಾದವರು ತಮ್ಮ ಕಾರ್ಯಕ್ಷಮತೆ, ಕಾರ್ಯತತ್ಪರತೆಯಿಂದಲೇ ಹಾಗೆ ಮಾಡಲು ಶಕ್ಯವೇ ಹೊರತು ಹೊಗಳಿಕೆಯಿಂದಲ್ಲ. ಅದನ್ನು ನೋಡಿದರೆ ಶ್ರೀಕೃಷ್ಣ ಹೇಳಿದ ನಿಷ್ಕಾಮ ಕರ್ಮಯೋಗಿಯ ಚಿತ್ರ ಕಣ್ಣೆದುರು ಕಟ್ಟುತ್ತದೆ. ❖

# ಜೂಡಸ್ ಇಸ್ಕ್ಯಾರಿಯಟ್‌ನ ಮುಖ

**ಇಂಗ್ಲಿಷ್ ಮೂಲ: ಜೋನಿ ಷ್ಯಾಂಬರ್‌ಲಿನ್**
**ಕನ್ನಡಕ್ಕೆ: ಸಿದ್ಧರಾಜ ಪೂಜಾರಿ**

ಮುದಿ ಪಾದ್ರಿಯೊಬ್ಬ ನನಗೆ ಈ ಕಥೆ ಹೇಳಿದಾಗ ನಾನಿನ್ನೂ ಬಹಳ **ಚಿಕ್ಕವನಾಗಿದ್ದೆ.** ಅಂದಿನಿಂದ ಈ ಕಥೆಯ ಮೂಲದ ಬಗ್ಗೆ ನಾನು ಎಷ್ಟೋ ಬಾರಿ ಕುತೂಹಲಗೊಂಡಿರುವೆ. ಅವರ ಬಗ್ಗೆ ನನಗೆ ಯಾರೂ ಏನನ್ನೂ ಹೇಳಲಿಲ್ಲ.

ಶತಮಾನಗಳ ಹಿಂದೆ ಸಿಸಿಲಿಯನ್ ಪಟ್ಟಣದ ಕ್ಯಾಥೆಡ್ರಲ್ ಗೋಡೆಗಳ ಮೇಲೆ ವರ್ಣಚಿತ್ರ ಬಿಡಿಸುವುದರಲ್ಲಿ ಕಲಾವಿದನೊಬ್ಬ ಕಾರ್ಯತತ್ಪರನಾಗಿದ್ದ. ಯೇಸುವಿನ ಜೀವನ ವರ್ಣಚಿತ್ರದ ವಿಷಯವಾಗಿತ್ತು. ಎಷ್ಟೋ ವರ್ಷಗಳ ಕಾಲ ಆ ಕಲಾವಿದ ಶ್ರಮಶೀಲನಾಗಿ ದೃಢತೆಯಿಂದ ಕಾರ್ಯ ಮಾಡಿದ. ಇನ್ನೆರಡು ಮಹತ್ವದ ಚಿತ್ರಗಳನ್ನು ಬಿಡಿಸುವುದನ್ನುಳಿದು ಆತ ಎಲ್ಲ ಕೆಲಸ ಮುಗಿಸಿದ. ಹಸುಳೆ 'ಕ್ರಿಸ್ತ ಮತ್ತು ಜೂಡಸ್ ಇಸ್ಕ್ಯರಿಯಟ್' ಇವೇ ಬಿಡಿಸಬೇಕಾದ ಆ ಎರಡು ಮಹತ್ವದ ಚಿತ್ರಗಳು. ಆ ಎರಡೂ ಚಿತ್ರಗಳ ರೂಪದರ್ಶಿಗಳಿಗಾಗಿ ಆತ ದೂರ ದೂರದವರೆಗೂ ಸಂಚರಿಸಿದ.

ಒಂದು ದಿನ ಪಟ್ಟಣದ ಹಳೆಯ ಭಾಗದಲ್ಲಿ ಸಂಚರಿಸುತ್ತಿದ್ದಾಗ ಓಣಿಯಲ್ಲಿ ಆಡುತ್ತಿರುವ ಕೆಲವು ಮಕ್ಕಳು ಅವನ ಕಣ್ಣಿಗೆ ಬಿದ್ದವು. ಅವರಲ್ಲಿ ಹನ್ನೆರಡು ವರುಷದ ಬಾಲಕನೋರ್ವನ ಮುಖ ಕಲಾವಿದನ ಹೃದಯ ಕಲಕಿತು. ಆ ಮುಖದಲ್ಲಿ ದಿವ್ಯ ಪುರುಷನ ಕಳೆ ತುಂಬಿಕೊಂಡಿತ್ತು. ಬಹಳ ಕೊಳೆಯಾಗಿದ್ದರೂ ಅದು ಕಲಾವಿದನೊಬ್ಬ ಬಯಸಿದ ಮುಖವಾಗಿತ್ತು.

ಕಲಾವಿದ ಮಗುವನ್ನು ಕರೆದುಕೊಂಡು ಮನೆಗೆ ಹೋದ. ಹಸುಳೆ ಯೇಸುವಿನ ಚಿತ್ರ ಬಿಡಿಸಿ ಮುಗಿಸುವವರೆಗೆ ಅನುದಿನವೂ ಆ ಬಾಲಕ ಸಹನೆಯಿಂದ ಕುಳಿತುಕೊಂಡ.

ಆದರೆ ಜೂಡಸ್‌ನ ಚಿತ್ರದ ರೂಪದರ್ಶಿಯಾಗಿ ಯಾರೂ ದೊರೆಯುತ್ತಿಲ್ಲ. ಎಷ್ಟೋ ವರುಷಗಳು ಗತಿಸಿದವು. ತನ್ನ ಮಹಾನ್ ಕೃತಿ ಅರ್ಧಕ್ಕೇ ಉಳಿಯುವುದೆಂಬ ಭೀತಿಯಿಂದ ಆತ ಹುಡುಕುವುದನ್ನು ಮುಂದುವರಿಸಿದ.

ಅರ್ಧಕ್ಕೆ ನಿಂತ ಆ ಮಹಾನ್ ಕಲಾಕೃತಿಯ ಕಥೆ ಬಹಳ ದೂರದವರೆಗೂ ಹರಡಿತು. ತಮ್ಮ ಮುಖ ದುಷ್ಟನ ಮುಖವನ್ನು ಹೋಲುತ್ತದೆಂದು ಭಾವಿಸಿದ್ದ ಅನೇಕರು ಜೂಡಸ್–ರೂಪದರ್ಶಿಯಾಗಲು ಮುಂದೆ ಬಂದರೂ ಕಲಾವಿದನಿಗೆ ಗ್ರಾಹ್ಯರಾಗಲಿಲ್ಲ. ಬದುಕಿನ ಒತ್ತಡದಿಂದ ವಕ್ರಗೊಂಡ ಸ್ವಭಾವ; ದುರಾಶೆ ಮತ್ತು ಕಾಮುಕತೆಗೆ ಶರಣಾಗತವಾದ ದೌರ್ಬಲ್ಯಗಳನ್ನು ಪ್ರತಿಬಿಂಬಿಸುವಂಥ ಜೂಡಸ್ ಚಿತ್ರದ ರೂಪದರ್ಶಿಗಾಗಿ ಆತ ಹಂಬಲಿಸತೊಡಗಿದ.

ಆ ಒಂದು ಮಧ್ಯಾಹ್ನ ಮದ್ಯಸಂಗಡಿಯಲ್ಲಿ ಗ್ಲಾಸಿನಿಂದ ಮದ್ಯ ಹೀರುತ್ತ ಕಲಾವಿದ ಕುಳಿತಿದ್ದ. ಹರಕು ಬಟ್ಟೆ ಧರಿಸಿದ ತುಂಬ ಕೃಶನಾದ ವ್ಯಕ್ತಿಯೊಬ್ಬ ತೂರಾಡುತ್ತ ಬರುತ್ತಿದ್ದಾತ ಹೊಸ್ತಿಲು ಎಡವಿ ಬಿದ್ದುಬಿಟ್ಟ. "ಮದ್ಯ, ಮದ್ಯ," ಎಂದು ಆತ ಯಾಚಿಸಿದ. ಕಲಾವಿದ



ಅವನನ್ನು ಮೇಲೆತ್ತಿ ಮುಖ ನೋಡಿ ಬೆಚ್ಚಿ ಬಿದ್ದ. ಅವನ ಮುಖದ ರೇಖೆಗಳು ಮಾನವ ಸಾಧ್ಯವಾದ ಎಲ್ಲ ಪಾಪಗಳನ್ನೂ ಪ್ರತಿಬಿಂಬಿಸು ವಂತಿದ್ದವು.

ಅತ್ಯಂತ ಉತ್ತೇಜಿತನಾಗಿ ಮುದಿ ಕಲಾವಿದ ಆ ಪಾಪಿಯನ್ನು ಎತ್ತಿ ನಿಲ್ಲಿಸಿದ. "ನನ್ನ ಜೊತೆಗೆ ಬಾ; ನಾನು ನಿನಗೆ ದುಡ್ಡು, ಆಹಾರ, ಬಟ್ಟೆ ಎಲ್ಲ ಕೊಡುವೆ."

ಕೊನೆಗೂ ಜೂಡಸ್* ಚಿತ್ರಕ್ಕೊಬ್ಬ ರೂಪದರ್ಶಿ ದೊರಕಿದ. ಹಗಲು ರಾತ್ರಿಗಳಲ್ಲಿಯ ಅಂತರವನ್ನು ಗಮನಿಸಿದೇ ವ್ಯೆಯಲ್ಲಿ ದೆವ್ವ ಬಂದವನಂತೆ ದುಡಿಯುತ್ತ ಆ ಕಲಾವಿದ ತನ್ನ ಮಹಾನ್ ಕೃತಿಯನ್ನು ಮುಗಿಸುವುದರಲ್ಲಿ ತಲ್ಲೀನನಾದ.

ಚಿತ್ರರಚನೆ ಮುಂದುವರೆದಂತೆ ಆ ರೂಪದರ್ಶಿಯ ಮುಖದ ಮೇಲೆ ಒಂದು ರೀತಿಯ ವಿಲಕ್ಷಣ ಬದಲಾವಣೆ ಕಂಡುಬಂತು. ದಿಗ್ಭ್ರಮೆ ಹುಟ್ಟಿಸುವ ದೌರ್ಬಲ್ಯದ ಬದಲಾಗಿ ಒಂದು ಬಗೆಯ ವಿಚಿತ್ರ ಉದ್ವೇಗ ಆತನಲ್ಲಿ ತುಂಬಿಕೊಂಡುತಿತ್ತು. ಭಯಭೀತನಾಗಿ ರಕ್ತ-ಸಿಕ್ತ ಕಣ್ಣುಗಳಿಂದ ತನ್ನಂತಿರುವ ಆ ವರ್ಣಚಿತ್ರವನ್ನೇ ಆತ ದಿಟ್ಟಿಸತೊಡಗಿದ.

ಒಂದು ದಿನ ಆ ವ್ಯಕ್ತಿಯು ಮುಖದ ಮೇಲಿನ ಕೊರಗನ್ನು ಗ್ರಹಿಸಿದ ಕಲಾವಿದ ತನ್ನ ಕೆಲಸ ನಿಲ್ಲಿಸಿ ಕೇಳಿದ: "ಅಯ್ಯಾ, ನಿನಗೇನಾದ ತೊಂದರೆಗಳೇನು? ನಾನು ನಿನಗೆ ಸಹಾಯ ಮಾಡ ಬೇಕೆನ್ನುವೆ."

ಮುಖವನ್ನು ತನ್ನ ತೋಳುಗಳಲ್ಲಿ ಹುದುಗಿಸಿ ಕೊಂಡು ಆ ವ್ಯಕ್ತಿ ಬಿಕ್ಕಳಿಸತೊಡಗಿದ, ಬಹಳ ಹೊತ್ತಿನ ನಂತರ ಆ ಮುದಿ ಕಲಾವಿದನ ಮುಖವನ್ನೇ ದಿಟ್ಟಿಸುತ್ತ ಆ ವ್ಯಕ್ತಿಯು ಕಣ್ಣುಗಳೇ ಹೇಳತೊಡಗಿದವು:

'ನೀನು ನನ್ನನ್ನು ಮರೆತುಬಿಟ್ಟೆಯಾ? ವರ್ಷಗಳ ಹಿಂದೆ ನಿನ್ನ ಬಾಲ ಯೇಸುವಿನ ಆ ಚಿತ್ರಕ್ಕೆ ರೂಪದರ್ಶಿಯಾಗಿದ್ದವ ನಾನೇ ಅಲ್ಲವೇ?'

---

* ಯೇಸು ಕ್ರಿಸ್ತನನ್ನು ವಿಶ್ವಾಸದ್ರೋಹದಿಂದ ಶತ್ರುಗಳ ವಶ ಮಾಡಿದ ಆತನ ಶಿಷ್ಯ.

# ಶಿರಸಾಸನ(ದಲ್ಲಿ)

ಮುಂಜಾನೆ ಎದ್ದವನೆ
ತಲೆ ಕೆಳಗೆ-ಕಾಲು ಮೇಲೆ
ಮಾಡಿ ನಿಲ್ಲುತ್ತೇನೆ
ಹನ್ನೆರಡು ಟನ್ ತೂಕದ ಲಾರಿ ಮೊಗಚಿದಂತೆ-
ಒಮ್ಮೆಲೆ ಯೋಚನೆಯ ಮೂಟೆಗಳೆಲ್ಲ ಉರುಳುತ್ತಾ
ಬಿಚ್ಚಿಕೊಳ್ಳುತ್ತಾ ಸುರಿದು ಚೆಲ್ಲಾಪಿಲ್ಲಿಯಾಗಿ
ನೆಲದಲ್ಲಿ ಸುತ್ತ ಹರಡುತ್ತವೆ.
    ಚೈತ್ರದಿಂದಾಗಿ ಮಾಗಿಯ ವರೆಗೂ
    ಎದುರು ನೋಡುತ್ತೇನೆ-(ಆಶಾವಾದಿ)
    ಹೀಗೆ ನಿರ್ದಯಿ ಕಾಲಗಳದೆಷ್ಟು ಮುಗಿದುವೊ
    ಹಸ್ತದಿಂದ ಮಸ್ತಕದವರೆಗೂ
    ಮೂಳೆಗಳು ಬಲಿಯುತ್ತಿವೆ
    ಮಾಂಸಗಳು ಬಲಗೊಳ್ಳುತ್ತಿವೆ
ಕಣ್ಣಲಗಿನ ಕೋಲ್ಮಿಂಚು ಮಾಯವಾಗಿ
ಸುಡುವ ಬೇಗೆಗೆ
ತನಿಗೆನ್ನ ಹಸಿ ಗಲ್ಲ ಮುರುಟುತ್ತಿರುವಂತೆ
ನೋಟ ನರಳುತ್ತಿದೆ
ಎಳೆತನ ಯೌವನಗಳು ಗತಿಸಿದಂತೆ ಭಾಸವಾಗಿ
ಬುದ್ಧಿಯನ್ನು ಅರ್ಥಾತ್ ಅಡೀತ ಸೂತ್ರವನ್ನು ತಪಿಸುತ್ತೇನೆ.
    ನನ್ನ ಮನೋ(ವಿಧಾನ)ಮಂಡಲದಲ್ಲಿ
    ಅದೆಷ್ಟು ಬಾರಿ ಅರಚಿದ್ದೇನೆ
    ಈ "ದೇಹ"ವನ್ನು ಬರಗಾಲ ಪೀಡಿತ ಪ್ರದೇಶ
    -ವೆಂದು ಸಾರಿ; ಕೇಂದ್ರ(ಸ್ವರ್ಗ!)ದ
    ನೆರವು ಕೋರಿ(?) ಅತ್ಯಗತ್ಯ ಎಂದು
    ಸಂಪ್ರದಾಯ ಪ್ರಭುಗಳಲ್ಲಿ
    ಇದೂ ಒಂದು ಅರಣ್ಯರೋದನ ಮಾತ್ರ
ಕಾಲುಗಳು ನಿಧಾನವಾಗಿ ಕೆಳಗಿಳಿಯುತ್ತವೆ
ಕಣ್ಣುಗಳು ಕೆಂಪೇರಿರುತ್ತವೆ
ಮತ್ತೂ ಸೋರುವುದನ್ನು (ಹರಿಯು?) ತಡೆಯುವ
ತಡೆದದ್ದನ್ನು ಉಳಿಸಿಕೊಳ್ಳುವ
ತವಕ
ನಿತ್ಯ ಆಸನಗಳಲ್ಲಿ ನಿಲ್ಲುತ್ತೇನೆ
ಗಟ್ಟಿಯಾಗಿ.

—ಬಿ. ಸಿ. ಸ್ವಾಮಿ

卐 ರತ್ನಾ ಜೋಶಿ

ಈ ಜನಾಂಗದ ಜನಸಂಖ್ಯೆ ಸುಮಾರು ೮೦೦ ಮಾತ್ರ. ಇವರ ಜನಸಂಖ್ಯೆ ಇಷ್ಟು ಅಲ್ಪವಾದರೂ ಇವರ ವಿಶಿಷ್ಟ, ವಿಭಿನ್ನ ಸಂಸ್ಕೃತಿಯಿಂದಾಗಿ ಇವರಿಗೆ ಇಷ್ಟೊಂದು ಪ್ರಾಮುಖ್ಯ ದೊರಕಿದೆ.

ಪುರಾತನ ಗ್ರೀಕ್ ಜನರು ತಮ್ಮ ದಿನಚರಿಗಳಲ್ಲಿ ವರ್ಣಿಸಿರುವ ದರ್ದ ಜನಾಂಗಗಳಲ್ಲಿ ಕಾಣುಬರುವ ಲಕ್ಷಣಗಳು ಮಿನಾರೋಗಳಲ್ಲಿವೆ. ಆದುದರಿಂದ ಮಿನಾರೋಗಳು ದರ್ದ ಜನಾಂಗಗಳಲ್ಲಿ ಉಳಿದುಕೊಂಡವರು ಎಂಬುದು ಕೆಲವರ ಊಹೆ. ಅಲೆಕ್ಸಾಂಡರ್‌ನು ಭಾರತದ ಮೇಲೆ ದಂಡೆತ್ತಿ ಬಂದಾಗ ಉಳಿದ ಸೈನ್ಯದ ತುಕಡಿಯಿಂದ ಬೆಳೆದ ಜನಾಂಗವಿದು ಎಂದೂ ಕೆಲವರು ಹೇಳುತ್ತಾರೆ.

# ಮಿನಾರೋ ಶುದ್ಧ ಆರ್ಯರೆ?

ಕಾಶ್ಮೀರದ ಗುಡ್ಡಗಾಡುಗಳಲ್ಲಿರುವ ಲೋಟ್ಸಪ್ ಎಂಬ ಹಳ್ಳಿಯಿಂದ ಮುಂದೆ ಹೋದಂತೆ ನಾಗರಿಕತೆಯಿಂದ ಬೇರ್ಪಟ್ಟ ಮಿನಾರೋ ಎಂಬ ಬುಡಕಟ್ಟಿನ ಜನ ವಾಸವಾಗಿದ್ದಾರೆ. ಇವರು ನಾಗರಿಕತೆಯು ಸೋಂಕಿಲ್ಲದ ಶುದ್ಧ ಅರಣ್ಯವಾಸಿ ಜನರು. ಇವರಿರುವ ಸ್ಥಳಕ್ಕೆ ಹೋಗಲು ನಿರ್ದಿಷ್ಟವಾದ ರಸ್ತೆಗಳಿಲ್ಲ.

ಮಿನಾರೋ ಜನರ ಬಣ್ಣ, ಚಹರೆ ಮತ್ತು ಇತರ ಲಕ್ಷಣಗಳು ಯುರೋಪಿಯನ್ನರನ್ನು ಹೋಲುತ್ತವೆ. ಅವರಿರುವ ಪ್ರದೇಶಕ್ಕೆ ಹತ್ತಿರವಿರುವ ಇತರ ಕಾಶ್ಮೀರೀ ಗುಡ್ಡಗಾಡು ಜನಾಂಗಗಳಿಗಿಂತ ಮಿನಾರೋಗಳು ತೀರಾ ಭಿನ್ನವಾಗಿದ್ದಾರೆ.

ಇನ್ನೂ ಕೆಲವರ ವಾದ ಕುತೂಹಲಕಾರಿಯಾಗಿದೆ. ಮಿನಾರೋ ಜನರು ಯುರೋಪಿಯನ್ನರನ್ನು ಹೋಲುವವರಾದ ಇವರು ಮೂಲತಃ ಆರ್ಯ ಜನಾಂಗದವರು. ಮಿನಾರೋಗಳ ಭಾಷೆ, ಚಹರೆಗಳಿಗೂ ಯುರೋಪಿಯನ್ನರ ಭಾಷೆ ಚಹರೆಗಳಿಗೂ ಸಾಕಷ್ಟು ಹೋಲಿಕೆಗಳಿವೆ ಎನ್ನುತ್ತಾರೆ. ಈ ಸಾಧ್ಯತೆಯ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಅಡಾಲ್ಫ್ ಹಿಟ್ಲರನು ೧೯೩೮ರಲ್ಲಿ ಪರಿಣತರನ್ನು ಕಳುಹಿಸಿದನೆಂಬ ಬಗ್ಗೆ ವರದಿಗಳಿವೆ.

ಮಿನಾರೋಗಳ ಬಗ್ಗೆ ಅಭ್ಯಸಿಸಲು ಫ್ರಾನ್ಸಿನ ಪ್ರಾಚ್ಯ ಸಂಶೋಧಕ ಮೈಕೆಲ್ ಪಿಸಿಲ್ ಸಿದ್ಧನಾದನು. ಮಿನಾರೋಗಳಂತೆಯೇ ವೇಷ ಧರಿಸಿ

ಮುಖದ ಬಣ್ಣವನ್ನು ಬದಲಾಯಿಸಿ ಅವರೊಡನೆ ಆರು ತಿಂಗಳು ವಾಸಿಸಿ ಅವರ ಜೀವನದ ಶೈಲಿ ಯನ್ನು ತಿಳಿದುಕೊಂಡನು. ಟಿಸೆಲ್‌ನ ಸಂಶೋಧನೆಯ ಪ್ರಕಾರ, ಮಿನಾರೋ ಜನಾಂಗ ಶುದ್ಧ ಆರ್ಯ ಜನಾಂಗ! "ಮಿನಾರೋ ಜನಾಂಗವೆಂದರೆ ಶಿಲಾಯುಗದ ಜೀವನ ಶೈಲಿಯನ್ನು ಜೀವಂತವಾಗಿ ತೋರಿಸುವ ಪ್ರಾಚ್ಯ ವಸ್ತು ಸಂಗ್ರಹಾಲಯ." ಎನ್ನುತ್ತಾನೆ ಟಿಸೆಲ್.

ಮಿನಾರೋ ಜನರು ವಿಶಿಷ್ಟವಾದ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಇಬೆಕ್ಸ್ ಎನ್ನುವ ಗುಡ್ಡಗಾಡು ಆಡನ್ನು ತಿಂದು ಜೀವಿಸುತ್ತಾರೆ. ಈ ಆಡನ್ನು ಬೇಟೆಯಾಡಲು ಬಿಲ್ಲು ಬಾಣವನ್ನು ಉಪಯೋಗಿಸುತ್ತಾರೆ. ಬಾಣದ ತುದಿಗೆ ವಿಷವನ್ನು ಲೇಪಿಸಿರುತ್ತಾರೆ. ಇದಲ್ಲದೆ ಮಿನಾರೋಗಳು ಕುರಿಗಳನ್ನು ಸಾಕುತ್ತಾರೆ ಮದ್ಯವನ್ನು ತಯಾರಿಸಲು. ದ್ರಾಕ್ಷಿಯನ್ನು ಬೆಳೆಸುತ್ತಾರೆ. ಅವರಿರುವ ಪ್ರದೇಶದ ಅರ್ಧ ಮರುಭೂಮಿಗೆ ವ್ಯತಿರಿಕ್ತವಾಗಿ ಕೆಲವು ಧಾನ್ಯಗಳನ್ನು ಬೆಳೆಸುತ್ತಾರೆ.

ವಿಶೇಷ ಸಮಾರಂಭಗಳಲ್ಲಿ ಬಿಳಿ ಗಡ್ಡದ, ಹಿರಿಯರಾದ ಮಿನಾರೋಗಳು ಸಭೆಯ ಮುಖ್ಯ ಸ್ಥಳಗಳನ್ನು ಅಲಂಕರಿಸಿರುತ್ತಾರೆ. ಇವರಲ್ಲಿ ಬಹುಪತಿತ್ವ ಜಾರಿಯಲ್ಲಿದೆ. ಒಬ್ಬ ಹೆಣ್ಣಿಗೆ ಎರಡು ಅಥವಾ ಹೆಚ್ಚು ಸಂಖ್ಯೆಯಲ್ಲಿ ಗಂಡಂದಿರು ಇರುತ್ತಾರೆ. ಮಿನಾರೋಗಳದು ಸ್ತ್ರೀ-ಪ್ರಧಾನ ಕುಟುಂಬ. ಬೀದಿಯಲ್ಲಿ, ಎಲ್ಲ ಜನರೂ ನೋಡುತ್ತ ಇರುವಾಗ ಹೆಣ್ಣು ಬಂದು ಗಂಡಿನ ಕೆನ್ನೆಗೆ ಹೊಡೆಯುವುದು ಸಾಮಾನ್ಯ. ಮಿನಾರೋಗಳ ಮುಖ್ಯ ದೈವಗಳೆಲ್ಲಾ ಸ್ತ್ರೀರೂಪದವೇ. ಈ ದೇವತೆಗಳಲ್ಲಿ ಮುಖ್ಯವಾದವೆಂದರೆ ಅದೃಷ್ಟ ದೇವತೆ ಮತ್ತು ಫಲದೇವತೆ.

ಮಿನಾರೋ ಜನರ ಇನ್ನೊಂದು ವೈಚಿತ್ರ್ಯವೇನೆಂದರೆ ಅವರು ಹಸುಗಳನ್ನು ಸಾಕುವುದಿಲ್ಲ ಅವುಗಳನ್ನು ಮುಟ್ಟುವುದೂ ಇಲ್ಲ. ಬಸುರಿ ಹೆಂಗಸರು, ಅಥವಾ ತಾನೆ ಹೆರಿಗೆಯಾದ ಹೆಂಗಸರು ರಜಸ್ವಲೆಯಾದ ಹೆಂಗಸರು ಇವರೆಲ್ಲಾ ಅಶುಚಿಯಾದವರು. ಇವರು ಉಪಯೋಗಿಸಿದ ಪಾತ್ರೆಗಳನ್ನು ಬಳಸುವುದೂ ನಿಷೇಧ.

ಮಿನಾರೋಗಳಲ್ಲಿ ಸ್ನಾನ ಮಾಡುವುದು ವಿರಳ. ಕೆಲವು ವಿಶೇಷ ಸಂದರ್ಭಗಳಲ್ಲಿ ಜುನಿಪರ್ ಗಿಡವನ್ನು ಸುಟ್ಟು ಅದರ ಹೊಗೆಯಿಂದ ತಮ್ಮನ್ನು ಶುದ್ಧಮಾಡಿಕೊಳ್ಳುತ್ತಾರೆ. ಇವರ ರೀತಿ ನೀತಿಗಳಿಗೆ ಅಸಹ್ಯಪಟ್ಟುಕೊಂಡು, ಇವರ ನೆರೆಯವರಾದ ತಿಬೇಟಿಯನ್ನರು "ಹೊಲಸು ಜನಾಂಗ" ಎಂದು ಇವರಿಗೆ ಬಿರುದು ಕೊಟ್ಟಿದ್ದಾರೆ.

ಮಿನಾರೋಗಳ ದೈಹಿಕ ಮತ್ತು ಸಾಂಸ್ಕೃತಿಕ ಸಾಮ್ಯತೆಯಲ್ಲದೆ ಅವರ ಭಾಷೆಯೂ ಯುರೋಪಿಯನ್ನರ ಭಾಷೆಯನ್ನು ಹೋಲುತ್ತದೆ. ಮಿನಾರೋಗಳ ಭಾಷೆ ಶಿನಾ. ಈ ಭಾಷೆಯ ಎಷ್ಟೋ ಶಬ್ದಗಳು ಇಂಗ್ಲೀಷ್ ಭಾಷೆಯನ್ನು ಹೋಲುತ್ತವೆ. Doorಗೆ ದಾರ್, Handಗೆ ಹ್ಯಾಥ್, Timeಗೆ ಟೈಮ್ ಮತ್ತು Kniteಗೆ ಕಟರ್ ಎಂತಲು ಹೇಳುತ್ತಾರೆ. ಟಿಸಿಲ್‌ನ ವಾದದ ಪ್ರಕಾರ ಮಿನಾರೋ ಜನಾಂಗದವರು ತಮ್ಮ ಶುದ್ಧ ಆರ್ಯತ್ವವನ್ನು ಕಾಪಾಡಿಕೊಂಡು ಬರಲು ಕಾರಣವೇನೆಂದರೆ ಅವರಿರುವ ಪ್ರದೇಶವು ಉಳಿದೆಲ್ಲಾ ಜನವಸತಿಗಳಿರುವ ಪ್ರದೇಶಗಳಿಂದ ತೀರಾ ದೂರವಾಗಿರುವುದು ಮತ್ತು ಅವರಿಗಿರುವ ಸ್ವಾತಂತ್ರ್ಯ. ಇವಿಲ್ಲದೇ ಹೋಗಿದ್ದರೆ, ಮಂಗೋಲಿಯನ್ನರು ದಾಳಿ ಮಾಡಿದಾಗ ಆ ಅಲೆಯಲ್ಲಿಯೋ ಅವರೂ ಬದಲಾಗಿ ಬಿಡುತ್ತಿದ್ದರು.

ಟಿಸೆಲ್, ಈ ಬಗ್ಗೆ ಇನ್ನೂ ಅಧ್ಯಯನ ಅಧ್ಯಯನ ನಡೆಬೇಕಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಭಾರತ ಸರ್ಕಾರದವರು, ಮಿನಾರೋಗಳಿರುವ ಪ್ರದೇಶಕ್ಕೆ ರಸ್ತೆಗಳನ್ನು ಮಾಡುತ್ತಿದ್ದಾರೆ. ಇನ್ನು ಕೆಲವೇ ದಿನಗಳಲ್ಲಿ ಈ ಜನಾಂಗಕ್ಕೂ ನಾಗರಿಕತೆಯ ಗಾಳಿ ಸೋಂಕಿ, ಅತ್ಯಲ್ಪ ಮಿನಾರೋ ಜನಾಂಗವು ಅಳಿದು ಹೋಗುವ ಸಂಭವವಿದೆ.

# ಡಾ. ಜಾನ್‌ಸನ್

## ಒಂದು ಸ್ಮರಣೆ

ಗೌರೀಶ ಕಾಯ್ಕಿಣಿ

ಕೃತಿ ಹಿರಿದೋ? ಕೃತಿಕಾರ–ಕವಿ–ಕಲಾವಿದ ಹಿರಿದೋ? ಕೆಲ ಸಲ ಕವಿಗಿಂತ ಕೃತಿಗಾರನಿಗಿಂತ ಕೃತಿಯೇ ಹಿರಿದಾಗಿ ಕಾಣುತ್ತದೆ. ಅಂಥ ಒಂದು ಮಿಗಿಲಾದ ಕೃತಿಯನ್ನು ನಿರ್ಮಿಸಿದ ಮೇಲೆಯೂ ಆ ಮೊದಲೂ ಆ ಕವಿ ಆ ಮಟ್ಟದ ಇತರ ಕೃತಿಯನ್ನು ಲೋಕಕ್ಕೆ ನೀಡಿದ್ದೂ ಕಡಿಮೆಯೇ ಇರುತ್ತದೆ. ಆಗ ಲೋಕಕ್ಕೆ ಬೆಡಗು–ಇಂಥ ಸಾಮಾನ್ಯವಾಗಿ ತೋರುವ ಕವಿ ಇಂಥ ಸಾಮಾನ್ಯ ಕೃತಿಯನ್ನು ಹೇಗೆ ರಚಿಸಿದನೆಂದು. ವೇದಾಭ್ಯಾಸ ಜಡ ಋಷಿಯ ಆಶ್ರಮದಲ್ಲಿ ಶಕುಂತಲೆಯಂಥ ರೂಪಸುಂದರಿ ಹೇಗೆ ಹುಟ್ಟಿ ಬಂದಳೆಂದು ದುಷ್ಯಂತ ಸೋಜಿಗಪಟ್ಟಂತೆ!

ತದ್ವಿರುದ್ಧವಾಗಿ ಕೆಲ ಸಲ ಕವಿಯೋ ಕಲಾವಿದನೋ ತನ್ನ ಕೃತಿಗಿಂತ ದೊಡ್ಡವನಾಗಿರುವುದುಂಟು. ಕೃತಿ ಏನೋ ಸಾಮಾನ್ಯ ಸದರು ಅನಿಸಿದರೂ ಕೃತಿಕಾರ ಇದಕ್ಕೂ ಹೆಚ್ಚಿನ ನಿರ್ಮಿತಿ ಮಾಡಲು ಸಮರ್ಥ. ಅಂಥ ಸತ್ವಶಕ್ತಿ ಉಳ್ಳ ವ್ಯಕ್ತಿತ್ವ ಅವನದು ಎಂಬ ಒಂದು ಭರವಸೆ ಅನಿಸಿಕೆ ನಮ್ಮಲ್ಲಿ ಉಳಿದೇ ಇರುತ್ತದೆ. ಇಂಥ ಕೃತಿಕಾರನ ವ್ಯಕ್ತಿತ್ವವೇ ಅಷ್ಟು ಕಾಂತಿಯುಕ್ತವಾಗಿರುತ್ತದೆ, ವರ್ಣಮಯವಾಗಿರುತ್ತದೆ, ಪ್ರತಿಭಾಸ್ವಿತವಾಗಿರುತ್ತದೆ.

ಅಂಥ ಅಲೌಕಿಕ ವ್ಯಕ್ತಿತ್ವ ಡಾ. ಸ್ಯಾಮ್ಯುಅಲ್ ಜಾನ್‌ಸನ್‌ರದಿತ್ತು. ಇದೀಗ ಅವರ ಜನ್ಮದ ದ್ವಿಶತಮಾನೋತ್ಸವದ ವರ್ಷ. ಅವರು ಬಾಳಿ ಬೆಳಗಿದ ೧೮ನೇ ಶತಮಾನದಲ್ಲಿ ಆಂಗ್ಲ ಸಾಹಿತ್ಯಕ್ಕೆ, ತನ್ನ ಆ ಯುಗಕ್ಕೆ ಡಾ. ಜಾನ್‌ಸನ್ ಅನಭಿಷಿಕ್ತ ದೊರೆಯಾಗಿದ್ದರು. ಅವರ ಸುತ್ತಲೂ ಕಲೆಯುತ್ತಿದ್ದ ಅಂದಿನ ಕವಿ, ಕಲಾವಿದ, ಮುತ್ಸದ್ದಿ, ಮೇಧಾವಿಗಳ ಗ್ರಹಮಂಡಲಕ್ಕೆ ಡಾ. ಜಾನ್‌ಸನ್ ಸೂರ್ಯಬಿಂಬವೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಮಾತಿಗಿಂತ ಕೃತಿ ಮೇಲು ಎಂಬ ನಾಣ್ಣುಡಿಯನ್ನು ಸುಳ್ಳಾಗಿಸಿತು. ಜಾನ್‌ಸನ್‌ರ ಅಸ್ಖಲಿತ



ಪ್ರತಿಭೆಯ ಜಾಣ್ನುಡಿ. ಅವರ ಜೀವಮಾನವೆಲ್ಲ ಮಾತೇ ಮುಖ್ಯವಾಯಿತು. ನಮ್ಮ ವರಕವಿ ಬೇಂದ್ರೆಯವರಂತೆ ಜಾನ್‌ಸನ್‌ರ ಮಾತೆಲ್ಲ ಜ್ಯೋತಿ. (ಆದರೆ ಡಾ. ದ. ರಾ. ಬೇಂದ್ರೆಯವರ ಮಟ್ಟಿಗೆ ಕವಿಯ ಹಿರಿಮೆಗೆ ಸರಿಸಾಟಿಯಾಗಿತ್ತು ಅವರ ಕೃತಿಗಳ ಹಿರಿಮೆ.) ಕನ್ನಡದ ಶಾರದಾ ಪೀಠಕ್ಕೆ ಶ್ರೀಗಳಾದ ನಮ್ಮ ಬಿ. ಎಂ. ಶ್ರೀಯವರಂತೆಯೇ ಡಾ. ಜಾನ್‌ಸನ್ ಅಂದಿನ ಉದಿತೋದಿತ ಆಂಗ್ಲ ಸಾಹಿತಿಗಳ ವಲಯಕ್ಕೆ ಮಾತಾಚಾರ್ಯರೂ ಮಾರ್ಗದರ್ಶಕರೂ ಮಿತ್ರರೂ ಆಗಿದ್ದರು.

ಡಾ. ಜಾನ್‌ಸನ್ ಹುಟ್ಟಿದ್ದು ೧೭೦೯ರಲ್ಲಿ. ಬದುಕಿದ್ದು ೭೫ ವರ್ಷ. ಆ ೧೮ ನೇಯ ಶತಮಾನ ಇಂಗ್ಲೀಷ್ ಸಾಹಿತ್ಯದ 'ಅಗಸ್ಟನ್ ಯುಗ'ವೆಂದು ಪ್ರಸಿದ್ಧ. (ರೋಮನ್ ಚಕ್ರವರ್ತಿ ಅಗಸ್ಟಸ್ ಸೀಜ಼ರನ ಕಾಲದಲ್ಲಿ ಲ್ಯಾಟಿನ್ ವಾಙ್ಮಯ ಉತ್ಕರ್ಷದ ಶಿಖರವನ್ನು ಮುಟ್ಟಿತ್ತು. ಜಾನ್‌ಸನ್ ಅದೇ ಮಾನದಂಡದಿಂದ ಅಂದಿನ ಆಂಗ್ಲ ಸಾಹಿತ್ಯವನ್ನು ಅಳೆಯಲು ಕಲಿಸಿದರು.

೧೭ ನೇಯ ಶತಮಾನ ಇಂಗ್ಲೆಂಡಿನ ಇತಿಹಾಸದಲ್ಲಿ ಅನೇಕ ವಿಪ್ಲವಗಳ ಕಂಗೆಟ್ಟ ಕಾಲಖಂಡ. ೧೬೪೪ರಿಂದ ೧೭೦೦ರ ತನಕವೂ ಇಂಗ್ಲೆಂಡಿನ ಜನ ಏನೆಲ್ಲ ನೋಡಿತು, ನೋವು ಉಂಡಿತು. ಒಬ್ಬ ರಾಜನ ತಲೆ ಉರುಳಿತು. ಇನ್ನೊಬ್ಬ ದೇಶ ಬಿಟ್ಟು ಓಡುವಂತಾಯಿತು. ೧೮ ವರ್ಷ ಅರಾಜಕ ಪ್ರಜಾಸತ್ತೆ ನಡೆಯಿತು. ಮತ್ತೆ ರಾಜನನ್ನು ತಂದು ಗದ್ದುಗೆ ಏರಿಸಲಾಯಿತು. ಲಂಡನ್ನಿನಲ್ಲಿ ಅಗ್ನಿಪ್ರಳಯವಾಯಿತು. ಪ್ಲೇಗಿನ ಮಾರಿ ಹಾವಳಿ ಎಬ್ಬಿಸಿತು. ಕೊನೆಗೂ ವಿಲಿಯಂ ಮತ್ತು ಮೇರಿಯರ ರಾಜ್ಯಾರೋಹಣದೊಂದಿಗೆ ಕಿರೀಟ ಕಟ್ಟಿದ ಪ್ರಜಾಪ್ರಭುತ್ವ ನೆಲೆಯೂರಿತು–ರಕ್ತರಹಿತ ರಾಜ್ಯಕ್ರಾಂತಿ ಒದಗಿ ಬಂತು.

ಇದೆಲ್ಲ ಸ್ಥಿತ್ಯಂತರದ ಫಲವಾಗಿ ೧೮ನೇ ಶತಮಾನದ ವಿಚಾರವಂತರು ಬದುಕಿನಲ್ಲಿ ಭದ್ರತೆ ಶಾಶ್ವತ ಮೌಲ್ಯಗಳನ್ನು ಬಯಸಿದರು. ಅದಕ್ಕಾಗಿ ಪ್ರಾಚೀನ ಪಾಶ್ಚಿಮಾತ್ಯ ಸಾಹಿತ್ಯದಿಂದ ಸ್ಫೂರ್ತಿ ಪಡೆಯಲು ಹೊರಳಿದರು. ಈ ಹಾದಿ ಹಿಡಿಯಲು ಹೇಳಿದ ಗುರು ಡಾ. ಜಾನ್‌ಸನ್. ಪ್ರಾಚೀನ ಅಗಸ್ಟನ್ ಯುಗದ ಮೌಲ್ಯಪೂರ್ಣತೆಯ ಪುನಃಪ್ರತಿಷ್ಠೆ ಇಂಗ್ಲೀಷ್ ಸಾಹಿತ್ಯದಲ್ಲಿ ಮಾಡಲು ಹೆಣಗಿದ ಮಹಾಪುರುಷ, ಯುಗಪ್ರವರ್ತಕ.

ನಮ್ಮ ಸುದೈವ ಡಾ. ಜಾನ್‌ಸನ್‌ರಂಥ 'ಬಾಲೋನ್ಮತ್ತ ಪಿಶಾಚವತ್' ಬಾಳಿದ ಧೀರ ವಿಕ್ಷಿಪ್ತ, ವಿಚಿತ್ರ, ವಿಕಾರವಶ ಪ್ರತಿಭೆಯ ಶಾಪಭ್ರಷ್ಟ ದೇವತಾಪುರುಷನಿಗೆ ಬಾಸ್ವೆಲ್‌ನಂಥ ಒಬ್ಬ ಅಂತೇವಾಸಿ ಚರಿತ್ರ ಲೇಖಕ 'ಹಸ್ತಕ' ಲಭಿಸಿದ. (ನಮ್ಮ ಬೇಂದ್ರೆಯವರಿಗೂ ಅಂಥ ಒಬ್ಬ ಆಪ್ತ ಕಾರ್ಯದರ್ಶಿ ದೊರೆಯದೇ ಹೋದದ್ದು ಕನ್ನಡ ಸಾಹಿತ್ಯ ಲೋಕದ ದೌರ್ಭಾಗ್ಯ). ನಾವು ಇಂದು ಕೊಂಡಾಡುವ ಡಾ. ಜಾನ್‌ಸನ್ ಬಾಸ್ವೆಲ್‌ನ ದಿನಚರಿಗಳಿಂದ, ತನ್ನ ಈ ಗುರುವಿನ ಚರಿತ್ರ ಗ್ರಂಥದಿಂದ ಕಂಡುಕೊಂಡಂತೆ.

ಡಾ. ಜಾನ್‌ಸನ್‌ರ ಮಾರ್ಮಿಕ, ಕೆಲ ಸಲ ಮರ್ಮಭೇದಕ ಚತುರೋಕ್ತಿ ಚಾಟೂಕ್ತಿಗಳೂ ಜೀವನ ಸಾಹಿತ್ಯ ಲೋಕ ಚರಿತಗಳ ಯಾವದೇ ವಿಷಯದ ಬಗೆಗಿನ ಅವರ ಯಾವದೇ ಅಭಿಪ್ರಾಯಗಳು ಯಾವಾಗಲೂ ಅವಿಸ್ಮರಣೀಯ. ಆದರೆ ಅವುಗಳ ಸ್ಮರಣಕ್ಕೆ ನಾವು ಬಾಸ್ವೆಲ್‌ನಿಗೆ ಋಣಿಯಾಗಿದ್ದೇವೆ. ಅಲ್ಲದೆ ಈ ಮಹಾಪುರುಷನ ಜೀವಂತ ವ್ಯಕ್ತಿ ರೇಖೆಗಳನ್ನು ನಮ್ಮ ನಮ್ಮ ಮನೆಯ ಚಿರಪರಿಚಿತ ಹಿರಿ ಮನುಷ್ಯನ ಗುಣದೋಷಗಳನ್ನು ನಾವು ಅವನ ದಿನಚರಿಗಳಲ್ಲಿ ಕಟುಮಧುರವಾಗಿ, ಕರುಣ ರಮ್ಯವಾಗಿ ಅರಿತುಕೊಳ್ಳುತ್ತೇವೆ.

ಡಾ. ಜಾನ್‌ಸನ್‌ರ ಸಮುಜ್ವಲ ಪ್ರತಿಭೆಯ ಧೀಮಂತಿಕೆ ಶ್ರೀಮಂತಿಕೆ ಎಷ್ಟು ಉದ್ದಾಮವೋ, ದಿನದ ಬದುಕಿನ ಅವರ ಹಟ ಚಟಗಳೂ ವಿಕಾರಗೆಟ್ಟ ವರ್ತನೆಗಳೂ ಅಷ್ಟೇ ಉದ್ದಾಮ. ಅವುಗಳಲ್ಲಿ ಅವರ ಕಡು ಬಡತನದ ಕಷ್ಟ ಕಾರ್ಪಣ್ಯಗಳ ನಡುವೆಯೂ ಅವರ ಉದ್ದಾಮ ದರ್ಪ ಹಾಗೂ ಮರೆಮಾಚದ ನಾಚದ ಮೊಂಡತನ ವ್ಯಕ್ತವಾಗುತ್ತದೆ. ಚಿಕ್ಕಂದಿನಿಂದಲೂ ಅವರದು ಸ್ಥೂಲ ಕಾಯ. ಜತೆಗೆ ಬಾಳಿನುದ್ದಕ್ಕೂ ಬೆನ್ನೇ ಅಸಾಧ್ಯ ಚರ್ಮರೋಗಕ್ಕೂ ಗ್ರಂಥಿಗಳ ಬಿಗಿಗೂ

(Scrofula) ಬಲಿ. ಇದರಿಂದ ಅವರ ಮೋರೆ ವಿಕಾರಗೆಟ್ಟ ಕಲೆಗಳಿಗೂ ಸೊಟ್ಟ ಸ್ಪಂದನಗಳಿಗೂ ಎಡೆಯಾಗಿ ಶಾಲೆಯಲ್ಲಿ ಆಕ್ಸ್‌ಫರ್ಡಿನ ಕಾಲೇಜಿನಲ್ಲಿ, ಮಿತ್ರಮಂಡಳಿಯಲ್ಲಿ ಕುಚೇಷ್ಟೆಗೆ ಅಪಹಾಸ್ಯಕ್ಕೆ ಗುರಿ. ಸಾಲದ್ದಕ್ಕೆ ಇದಕ್ಕೆ 'ಅನುರೂಪ'ವಾಗಿ ಅವರದು ಸಂಸ್ಕೃತ ನಾಟಕಗಳಲ್ಲಿಯ ವಿದೂಷಕನಂತೆ ವಿಕೃತ ಅಂಗವೇಷ. ಅಸಡ್ಡಾಳ ನಡಿಗೆ. ಚರ್ಯೆ. ಅಂಗವಿಕ್ಷೇಪಗಳು. ಏನೋ ಆಳದ ಪ್ರಕೃತಿದೋಷದಿಂದ ಬಾಲಿಶ ಮತಿ ವಿಕಾರ, ತನ್ನಷ್ಟಕ್ಕೇ ಗೊಣಗಾಡುವದು. ನಗುವದು, ಫಕ್ಕನೆ ಎದ್ದು ಏನಾದರೂ ಮಂಗ ಚೇಷ್ಟೆ ಮಾಡುವದು ಜಾನ್‌ಸನ್‌ರ ನಿತ್ಯದ ಚಾಳಿ. ಶಿಷ್ಟಾಚಾರದ ಯಾವ ನಿಯಮಕ್ಕೂ ಅವರು ಬದ್ಧರಿದ್ದಿಲ್ಲ. ಊಟದ ವೇಳೆಗೆ ಮೇಜಿನ ಇದುರಿಗೆ ಕೂತ ಮಹಿಳೆಯ ಪಾದ ಜಗ್ಗುವದು, ಸಿಡಿಮಿಡಿ ಆಗುವದು, ಹೊಟ್ಟೆಬಾಕನಂತೆ ಗಪಗಪ ತಿನ್ನುವದು. ಮೈಮೇಲೆ ಅಕ್ಕಪಕ್ಕಕ್ಕೆ ಖಾದ್ಯ ಪೇಯ ಚೆಲ್ಲುವದು. ಒಟ್ಟಾರೆ ಮಂದಿಯ ಅಸಹ್ಯಕ್ಕೆ ಜಿಗುಪ್ಸೆಗೆ ಮೂದಲಿಕೆಗೆ ಕಾರಣವಾಗುವದು ಈ ದುರ್ದೈವಿ ಮಹಾಮೇಧಾವಿಯ ಜಾಯಮಾನವಾಗಿತ್ತು.

ಇದರಿಂದ ಅವರ ಶಿಕ್ಷಣ ವ್ಯವಸ್ಥಿತವಾಗಿ ಸಾಗಲಿಲ್ಲ, ಸಾಂಗ್ಯವೂ ಆಗಲಿಲ್ಲ. ಆದರೆ ಆರಂಭದಿಂದಲೂ ಅಧ್ಯಾಪಕರೂ ಪ್ರಾಧ್ಯಾಪಕರೂ ಇವರ ಅಗಾಧ ಸ್ಮರಣ ಶಕ್ತಿಗೆ ಅಪಾರ ವಾಚನಕ್ಕೆ ಅದ್ಭುತ ಗ್ರಹಣ ಶಕ್ತಿಗೆ ಮೂಕ ವಿಸ್ಮಿತರಾಗುತ್ತಿದ್ದರು. ಶಾಲೆ ಕಾಲೇಜಿನ ಸಂಗಾತಿಗಳು ಇವರ ಎಂಥ ವಿಕೃತ ಅಂದಗೆಟ್ಟ ನಡತೆಯನ್ನೂ ಸಹಿಸಿ ಇವರ ಮಾತಿನ ವೈಭವಕ್ಕೆ ವೈಖರಿಗೆ ಮುಗ್ಧರಾಗುತ್ತಿದ್ದರು. ಎಳೆ ವಯಸ್ಸಿನಲ್ಲಿ ಹಸಿವಿನ ಬಾಧೆಗೆ ಏನೋ ಅಟ್ಟದಲ್ಲಿ ಸೇರಿಸಿ ಹಣ್ಣು ಇಟ್ಟಿದ್ದಾರೋ ಎಂದು ಹುಡುಕಾಡುತ್ತಿದ್ದಾಗ ತರುಣ ಜಾನ್‌ಸನ್‌ನ ಕೈಗೆ ಒಂದು ದಪ್ಪ ಹಳೆಯ ದಫ್ತರು ಸಿಕ್ಕಿತು. ತೆರೆದು ನೋಡಿದಾಗ ಅದು ಪ್ರಾಚೀನ ಲ್ಯಾಟಿನ್ (ರೋಮನ್) ಕವಿ ಪೆಟ್ರಾರ್ಕನ ಕೃತಿಗಳ ಕಟ್ಟು. ಜಾನ್‌ಸನ್ ಹಸಿವೆಯನ್ನೂ ಮರೆತು ಆ ಲ್ಯಾಟಿನ್ ಕೃತಿಗಳ ವಾಚನದಲ್ಲಿ ಮಗ್ನನಾದ. ಅವರ ಲ್ಯಾಟಿನ್ ಭಾಷಾ ಪ್ರಭುತ್ವ ಅಪ್ರತಿಮವಾಗಿ ಬೆಳೆಯಿತು. ಇಂಗ್ಲೀಷ್ ಭಾಷಾಭಿವ್ಯಕ್ತಿಗೆ ಮುಂದೆ ಅವರು ಲ್ಯಾಟಿನ್ನಿನ ಮಾರ್ಗೀಯ ಶಿಸ್ತು ಹಾಗೂ ಶೋಭೆ ತರಲು ಯತ್ನಿಸಿದರು.

ಅವರ ಅಸಡ್ಡಾಳ ಅಂದಗೆಟ್ಟ ನಡೆ ನಡತೆ ಉಡಿಗೆ ತೊಡಿಗೆಯ ಅವ್ಯವಸ್ಥಿತತೆ ವಿಕ್ಷಿಪ್ತ ನಲೆ ತಿರುಕುತನ ಇವೆಲ್ಲವೂ ಅವರ ಸತ್ವದ ಪ್ರೌಢಿಮೆ ಸಾಹಿತ್ಯಿಕ ಪ್ರತಿಭೆಯಷ್ಟೇ ಇಂದು ಲೋಕ ಪ್ರಸಿದ್ಧ. ಜತೆಗೆ ಅವರ ಅಂತಃಕರಣದ ನಿರ್ಮಲತೆ, ದೀನ ದರಿದ್ರರ ಬಗೆಗೆ ಹೊಸ ಹೆಜ್ಜೆ ಇಡುವ ಕವಿ ಲೇಖಕರ ಬಗೆಗೆ ಅವರ ಅಪಾರ ಮರುಕ. ಅಂಥವರಿಗೆ ಯಥಾಶಕ್ತಿ ಪ್ರೋತ್ಸಾಹ ಸಹಾಯ ರಕ್ಷಣೆ ಕೊಡುವದರಲ್ಲಿ ತತ್ಪರತೆ. ಪ್ರಕಾಂಡ ಪಾಂಡಿತ್ಯ ಮತ್ತು ಬೌದ್ಧಿಕ ಪ್ರಚಂಡತೆಯುಳ್ಳ ಈ ವ್ಯಕ್ತಿ ನಿತ್ಯ ಜೀವನದಲ್ಲಿ ಚರ್ಯೆ ಚಟಗಳಲ್ಲಿ ಇಷ್ಟೊಂದು ಅಸಡ್ಡಾಳನಾಗಿರುವದೇ ಒಂದು ಸೋಜಿಗವಾಗಿತ್ತು. ಜಾನ್‌ಸನ್ ನಿಜವಾದ ಸೊಗಸು. ಉಜ್ವಲ ಸಂಭಾಷಣೆಗಳಲ್ಲಿ ಸಾಹಿತ್ಯಕ ಗೋಷ್ಠಿಗಳಲ್ಲಿ ಕಾವ್ಯಶಾಸ್ತ್ರ ವಿನೋದದಲ್ಲಿ ಅವರ ಖಾಸಗಿ ಸುಖಗಳ ಮಟ್ಟಿಗೆ ಮಾತ್ರ ತೀರ ಒರಟು!

ಆದರೆ ಈ ಒರಟುತನ ಅವರ ಕೃತಿಗಳಲ್ಲಿ ಕಾಣಸಿಗುತ್ತಿದ್ದಿಲ್ಲ. ಅದು ಜಡದ ಮೇಲೆ ಚೇತನದ ಗೆಲುವಾಗಿತ್ತು. ಏನೇ ಬರೆಯಲಿ ಅದರಲ್ಲಿ ಔಚಿತ್ಯ, ನಿಚ್ಚಳ ತರ್ಕ ಮತ್ತು ಶಿಷ್ಟಾಚಾರಗಳಿಗೆ ಚ್ಯುತಿ ಇರುತ್ತಿದ್ದಿಲ್ಲ. ಇದುವೆ ಅಗಸ್ಟನ್ ಯುಗಧರ್ಮ. ಮಾರ್ಗೀಯ (Classical) ಪ್ರೌಢಿಮೆ ಸದಭಿರುಚಿಯ ಸಂಸ್ಕಾರ ಮತ್ತು ಮಾನದಂಡ, ಅವರು ಇಂಗ್ಲೀಷ ನಿಘಂಟು ರಚನೆಗಾಗಿ ಸುಪ್ರಸಿದ್ಧ ಒಂದು ಶತಮಾನ ಅದು ಪ್ರಮಾಣವಾಗಿ ಉಳಿದು. ಹೆಬ್ಬೊತ್ತಿಗೆ ಈ ಅವರು ಅತ್ಯಂತ ಪರಿಶ್ರಮದಿಂದ ಕಷ್ಟದಲ್ಲಿ ಪೂರ್ಣಗೊಳಿಸಿದರು. ಅವರ ಪ್ರಕಾಶಕನಿಗೂ ಆದ ಕಷ್ಟ ಅಷ್ಟಿಷ್ಟಲ್ಲ. "ದೇವರಿಗೆ ಅಭಾರಿ ನಾನು. ಅಂತೂ ಇದನ್ನೊಮ್ಮೆ ಮುಗಿಸಿದೆ" ಎಂದು ಆ ಪ್ರಕಾಶಕ ನಿಟ್ಟುಸಿರು ಬಿಟ್ಟನಂತೆ. ಈ ಸುದ್ದಿ ಬಾಸ್ವೆಲ್ ಡಾಕ್ಟರ್

ಸಾಹೇಬರಿಗೆ ತಿಳಿಸಿದಾಗ ಅವರ ತತ್‌ಕ್ಷಣ ಅಂದರು: "ಆತ ಯಾವುದಕ್ಕೂ ದೇವರಿಗೆ ಆಭಾರಿ ಆಗುತ್ತಲೆ ಇರುತ್ತಾನೆ!" ಜಾನ್ಸನ್ ತೀವ್ರ ಪ್ರತಿಕ್ರಿಯೆಗಳಿಗಾಗಿ ಮುಲಾಜು ಇಲ್ಲದ ಮಾತುಗಳಿಗಾಗಿ ಪ್ರಸಿದ್ಧರು. ಅವರಿಗೆ ಕೆಲವೊಂದು ಸ್ಥಿರಬದ್ಧ ಪೂರ್ವಗ್ರಹ ಪೀಡೆಗಳಿದ್ದವು. ಸ್ಕಾಟಿಶ್ ಮಂದಿಯೆಂದರೆ ಅವರಿಗೆ ವಿಶೇಷ ತಿರಸ್ಕಾರ ತಮ್ಮ ನಿಘಂಟುವಿನಲ್ಲಿ 'Oats' ಧಾನ್ಯದ ಅರ್ಥವನ್ನು ಅವರು ಹೀಗೆ ಕೊಟ್ಟಿದ್ದಾರೆ. 'ಅದು ಕುದುರೆಗಳೂ ಸ್ಕಾಟಿಶ್ ಜನರೂ ಉಣ್ಣುವ ಧಾನ್ಯ." ಹೀಗೆ ಅವರ ನಿಘಂಟುವೂ ಸಾಹಿತ್ಯಕ ಸ್ವಾರಸ್ಯದ್ದಾಗಿದೆ ಇಂಥ ಚಾಟೂಕ್ತಿಗಳಿಂದ!

ಡಾ. ಜಾನ್ಸನ್ ಶೇಕ್ಸ್‌ಪಿಯರನ ನಾಟಕಗಳನ್ನು ಸಂಪಾದಿಸಿದರು. ಅವುಗಳ ಕುರಿತು ಅವರು ಬರೆದ ಪ್ರಸ್ತಾವನೆ ಇಂಗ್ಲೀಷ್ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತ ಸ್ಥಾನ ಪಡೆದಿದೆ. ಅವನು ಬರೆದ ಇಂಗ್ಲೀಷ್ ಕವಿಗಳ ಚರಿತ್ರೆಯೂ ಅಷ್ಟೇ ಪ್ರಸಿದ್ಧ. ಆ ಗ್ರಂಥ (Lives of the poets) ಸಾಹಿತ್ಯದ ಚರಿತ್ರೆ ಹಾಗೂ ವಿಮರ್ಶೆಯ ಸಂಪ್ರದಾಯವನ್ನು ಜಾನ್ಸನ್ ಹಾಕಿಕೊಟ್ಟರು. ಈ ಕೃತಿಯಲ್ಲಿಯೂ ಅವರ ನಿರ್ಭಿಡೆಯ "ನಿಷ್ಠುರದ ನುಡಿ"ಗಳಿಗೆ ಕೊರತೆ ಇಲ್ಲ. ಪ್ರಸಿದ್ಧ ಕವಿ ಗ್ರೇಯ ಕುರಿತು ಆತ ಅಂದಿದ್ದಾನೆ. "ಆತ ತುದಿಗಾಲ ಮೇಲೆ ನಡೆಯುತ್ತಾನೆ. ಆದ್ದರಿಂದ ಎತ್ತರ ಕಾಣುತ್ತಾನೆ." "ಮಾರ್ಗೀಯ ಮಹಾಕೃತಿ (Classics)ಗಳನ್ನು ಹೊಗಳುವುದು ಹೆಚ್ಚು, ಓದುವುದು ಕಡಿಮೆ." ಇತ್ಯಾದಿ. ಮಾತಿನ ಈ ಕಟುತೆ ಡಾ. ಜಾನ್ಸನ್‌ರ ವಿಕಾರಗಟ್ಟಿದ ಮನೋಧರ್ಮದ್ದೇ ಪ್ರತಿಕ್ರಿಯೆ. ಈ ಮತಿ ವಿಕಾರಕ್ಕೆ ಅವರಲ್ಲಿ ರಕ್ತಗತವಾಗಿ ಬಂದ ಮನೋವಿಷದೋಷವೇ ಮೂಲ. ಚಿಕ್ಕಂದಿನಲ್ಲಿ ಅವನ ಚರ್ಮರೋಗದ ವಿಕಾರ ಅಸಾಧ್ಯವಾಗಿ ಬೆಳೆಯಿತು. ಆಗ ಇಂಗ್ಲಂಡಿನಲ್ಲಿ ಒಂದು ಮೂಢ ನಂಬಿಕೆ ಇತ್ತು. ಇಂಥ ಅಸಾಧ್ಯ ರೋಗಕ್ಕೆ ಮದ್ದು ರಾಜಸ್ಪರ್ಶ. ಬಾಲಕ ಜಾನ್ಸನ್‌ನನ್ನು ತಂದೆ ತಾಯಿ ಅರಮನೆಗೊಯ್ದರು. ಮೊದಲು ರಾಜವೈದ್ಯರಿಂದ ಉಪಚಾರವಾಯಿತು. ಆ ಮೇಲೆ ಅಂದಿನ ಮಹಾರಾಣಿ ಆನ್‌ಳು ಬಾಲಕನನ್ನು ಮುಟ್ಟಿ ಅವನ ಕೈಯಲ್ಲಿ ಒಂದು ಚಿನ್ನದ ನಾಣ್ಯವನ್ನು ಕೊಟ್ಟದ್ದೂ ಆಯಿತು. ಜಾನ್ಸನ್‌ನ ಪಾಲಿಗೆ ಅದೊಂದೇ ಪ್ರಾಪ್ತಿ. ಕಾಯಿಲೆ ಉಲ್ಬಣಗೊಂಡೇ ಉಳಿಯಿತು. ಅದರಿಂದ ಮೋರೆಯ ನರಗಳಿಗೆ ಏನೋ ಸಿಡಿತ. ಮೋರೆ ವಕ್ರವಾಗಿ ವಿಕಾರಗೊಳ್ಳುತ್ತಿತ್ತು. ಇದು ಅವರ ಬಾಳಿನುದ್ದಕ್ಕೂ ಉಳಿದುಕೊಂಡಿತು. ಅವರ ಮಿತ್ರವಲಯದಲ್ಲಿಯೂ ಪರಿಹಾಸದ ವಿಷಯವಾಯಿತು. ಗ್ಯಾರಿಕ್ ಎಂಬ ಅಂದಿನ ವಿಖ್ಯಾತ ನಟ ಜಾನ್ಸನ್ ಮುಖಚರ್ಯೆಯ ಮುದ್ರಾಭಿನಯ ಮಾಡಿ ಮಂದಿಯನ್ನು ನಗಿಸುತ್ತಿದ್ದನು. ಅವನ ಒರಟು ವ್ಯವಹಾರಕ್ಕೆ ಅನೇಕರು ಹೇಸುತ್ತಿದ್ದರು, ರೇಗುತ್ತಿದ್ದರು, "ಜಾನ್ಸನ್ ಒಬ್ಬ ಕರಡಿ."—ಎಂದ ಒಬ್ಬ ಸಾಹಿತಿಮಿತ್ರ. ಆದರೆ ಈ ಮಹಾಚೇತನವನ್ನು ಚೆನ್ನಾಗಿ ಬಲ್ಲ ಕವಿ ಆಲಿವರ್ ಗೋಲ್ಡ್‌ಸ್ಮಿತ್ ಅದನ್ನು ಕೇಳಿ ಹೇಳಿದ. "ಜಾನ್ಸನ್‌ನಲ್ಲಿ ಕರಡಿಯ ಸ್ವಭಾವದ ಲಕ್ಷಣವೂ ಇಲ್ಲ— ಮೈದೊಗಲೊಂದು ಬಿಟ್ಟರೆ." ಜಾನ್ಸನ್‌ರ ಅಂತರಂಗ ವ್ಯಾಪ



ಮಧುರವಾಗಿತ್ತು– ಹಲಸಿನ ಹಣ್ಣಿನಂತೆ. ಒರಟು ತನ ಹೊರ ಮೈಯ ತೋರಿಕೆ

ಡಾ. ಜಾನ್‌ಸನ್ ಬರೆದ 'ರಾಸೆಲಸ್' ಎಂಬ ಒಂದು ಅದ್ಭುತ ರಮ್ಯ ನೀಳ್ಗತೆ ಪ್ರಸಿದ್ಧವಿದೆ. ಆದರೆ ಅವರು ರ್‍ಯಾಂಬ್ಲರ್, ಅಡ್ವೆಂಚರರ್, ಐಡ್ಲರ್ ಆದಿ ಹೆಸರಿನಲ್ಲಿ ನಿಯತಕಾಲಿಕಗಳನ್ನೂ ನಡೆಯಿಸಿದರು. ಅವು ಅವರ ಪ್ರಬಂಧಗಳಿಂದ ಕೆಲ ಕಾಲ ಜೀವ ಹಿಡಿದುಳಿದವು. ಒಟ್ಟಿನಲ್ಲಿ ಡಾ. ಜಾನ್‌ಸನ್‌ರದು ಒಂದು ಸಡಗರದ ಸೋಲು. ಆದಾಗ್ಯೂ ೧೮ನೆ ಶತಮಾನದ ಹೊಸದಾಗಿ ತಲೆಯೆತ್ತುತ್ತಿದ್ದ ಮಧ್ಯಮವರ್ಗದ ವಾಚನಾಭಿರುಚಿಯನ್ನು ತಿದ್ದುವ, ಸಾಹಿತ್ಯದಲ್ಲಿ ಚಿರಂತನ ಮೌಲ್ಯಗಳನ್ನು ಎತ್ತಿ ಹಿಡಿಯುವ, ಹಾಗೂ ನಾಗರೀಯ ಸಾಹಿತ್ಯದ ಪ್ರತಿಷ್ಠೆಯನ್ನು ಭದ್ರಪಡಿಸುವ ಮಹತ್ಕಾರ್ಯವು ಅವರ ಐತಿಹಾಸಿಕ ಕಾಣಿಕೆ. ಸಮ್ಯಕ್ ದೃಷ್ಟಿಯ ಸಮೀಕ್ಷನಾಗಿ ಅವರ ಅಧಿಕಾರ ಸರ್ವ ಸಮ್ಮತವಿತ್ತು. ಅವರ ಮಾನಸವು ವ್ಯಾವಹಾರಿಕವಾಗಿ ಎಷ್ಟೇ ಅವ್ಯವಸ್ಥಿತವೂ ವ್ಯಗ್ರವೂ ಆಗಿರಲಿ. ಸಾಹಿತ್ಯದ ಕ್ಷೇತ್ರದಲ್ಲಿ ನಿರ್ದಿಷ್ಟವೂ ಪ್ರಖರವೂ ಆಗಿತ್ತು. ಹಾಗೆಯೇ ಅವರ ಮರುಕ ಮಮತೆ. ಬೆಕ್ಕುಗಳಲ್ಲಿ ಅವರಿಗೆ ಅಸಾಧ್ಯ ಪ್ರೀತಿ. ಹಾದಿಯಲ್ಲಿ ಸಾಗುವಾಗ ದೀಪದ ಕಂಬಗಳನ್ನು ಮುಟ್ಟುತ್ತಾ ಹೋಗುವುದು ಅವರದೊಂದು ಹಾಸ್ಯಾಸ್ಪದ ಚಟ. ಥಕ್ಕನೆ ಒಂದು ಕಂಬವನ್ನು ಮುಟ್ಟಲು ಮರೆತರೆ ಅವರು ನೆನಪಾದೊಡನೆ ಹಿಂದಕ್ಕೆ ಬಂದು ಅದನ್ನು ಮುಟ್ಟಿಯೇ ಮುಂದುವರಿವವರು. ಈ ಮೊಂಡ ಹಟ ಅವರ ಉದ್ದಾಮ ವೃತ್ತಿಗೆ ಮಟ ವೇರಿಸುತ್ತಿತ್ತು.

"ಬದುಕಿನುದ್ದಕ್ಕೂ ಹೊಟ್ಟೆ ಬಟ್ಟೆಯ ಪರಿವೆ ಇಲ್ಲದೆ ಆಯುಷ್ಯ ಕಳೆದರು ಜಾನ್‌ಸನ್. ತನ್ನ ತತ್ವ, ಸಾಹಿತ್ಯಾಭಿರುಚಿ ಮತ್ತು ಪ್ರಾಮಾಣಿಕತೆಯ ಮಟ್ಟಿಗೆ ಎಂದಿಗೂ ಯಾರೊಂದಿಗೂ ಒಡಂಬಡಿಕೆ ಮಾಡಿಕೊಳ್ಳಲಿಲ್ಲ. ಹೃದಯವಂತಿಕೆಯನ್ನು ಆತ್ಮವನ್ನು ಯಾವ ಹಣಕ್ಕೂ ಹಂಗಿಗೂ ಮಾರಿಕೊಂಡವರಲ್ಲ, ಅಲ್ಪರಾಗಿ ಕಾಣಿಸಿಕೊಂಡವರಲ್ಲ.

ಗರ್ವವನ್ನು ತಗ್ಗಿ ಸಹಿಸು ಕಷ್ಟವನ್ನು ದುಃಖ ಪ್ರಕಟಿಸಿ ಖುಷಿಗೊಳಿಸುವ ಯೋಜನೆ ನನಗಿಲ್ಲ. ಅಲ್ಲದೆ ನಾನು ಯಾರ ಮನ್ನಣೆಯನ್ನೂ ಪ್ರಾರ್ಥಿಸಿಲ್ಲವೋ ಅಂಥವರು ಉಪೇಕ್ಷಿಸಿದರೆಂದು ದೂರಿಕೊಳ್ಳುವದೂ ವಿವೇಕವೆಂದು ನಾನು ತಿಳಿದವನಲ್ಲ. ಸಾಹಿತ್ಯಿಕ ಸನ್ಮಾನಗಳನ್ನು ಹಂಚುವವರು ನನ್ನನ್ನು ಸತ್ಕರಿಸಿಲ್ಲವಾದರೆ, ಅಂಥ ಅನುಗ್ರಹಗಳನ್ನು ಗಿಟ್ಟಿಸಿಕೊಳ್ಳುವ ಕಲೆಗಳಿಗೂ ನಾನು ಎಂದೂ ಇಳಿದವನಲ್ಲ!–" ಅಂದಿದ್ದಾರೆ ಅಭಿಮಾನಧನರಾದ ಡಾ. ಜಾನ್‌ಸನ್.

ಲಾರ್ಡ್ ಚೆಸ್ಟರ್‌ಫೀಲ್ಡ್ ಆ ಕಾಲದ ಒಂದು ದೊಡ್ಡ ಹೆಸರು. ಶ್ರೀಮಂತ ಹಾಗೂ ಸಾಹಿತಿಗಳಿಗೆ ಉದಾರಾಶ್ರಯ ತೋರುವ ದೊಡ್ಡಸ್ತಿಕೆಯ ಜಂಭದ ಕೋಳಿ. ತನ್ನ ನಿಘಂಟುವನ್ನು ಪ್ರಕಟಿಸುವ ಸಮಯ ಅವರಿಂದ ಏನಾದರೂ ಆರ್ಥಿಕ ನೆರವು ಒದಗಿಸಬಹುದೆಂದು ಡಾ. ಜಾನ್‌ಸನ್ ಚೆಸ್ಟರ್‌ಫೀಲ್ಡ್‌ರ ಭೆಟ್ಟಿಗೆ ಹೋಗಿ ಹಜಾರದಲ್ಲಿ ಹಾದಿಕಾದು ಬೇಸತ್ತು ಮರಳಿದರು. ಮುಂದೆ ಆ ನಿಘಂಟು ಪ್ರಕಾಶಗೊಂಡು ಡಾ. ಜಾನ್‌ಸನ್ ಪ್ರಸಿದ್ಧಿ ಪಡೆದಾಗ ಅವರಿಗೆ ತಮ್ಮ ಆಶ್ರಯಾನುಗ್ರಹ ನೀಡಿ ತಾವೂ ಹೆಸರಾಗಬೇಕೆಂದು, ಈ ಅಹಂಮನ್ಯ ಲಾರ್ಡ್‌ಸಾಹೇಬರು ಅವರಿಗೆ ಪತ್ರ ಬರೆದು ಭೆಟ್ಟಿಗೆ ಕರೆದರು. ಅದಕ್ಕೆ ಡಾ. ಜಾನ್‌ಸನ್ ಬರೆದ ಉತ್ತರ ಇಂಗ್ಲೀಷ್ ಸಾಹಿತ್ಯದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ:

"ನೀವು ನನ್ನ ಪರಿಶ್ರಮಕ್ಕೆ ಗಮನವೀಯುವ ಅನುಗ್ರಹ ತೋರಿದ್ದೀರಿ. ಅದು ಈ ಮುಂಚೆಯೇ ಆಗಿದ್ದರೆ ದಯಾಳುವೆನಿಸುತ್ತಿತ್ತು. ಆದರೆ ಅದೀಗ ತುಂಬ ವಿಲಂಬಿತವಾಗಿದೆ. ನಾನು ಅದರ ಬಗೆಗೆ ಉದಾಸೀನನಾಗಿ ಅದನ್ನು ಸವಿಯದೇ ಇರುವ ತನಕ; ನಾನು ಏಕಾಕಿಯಾಗಿದ್ದು (ಹೆಂಡತಿ ನಿಧನವಾಗಿದ್ದಳು.) ಅದನ್ನು (ನನ್ನವಳೊಂದಿಗೆ–ಲೇ.) ಹಂಚಿಕೊಳ್ಳದಂತೆ ಆಗುವನಕ ಮತ್ತು ನಾನು ವಿಖ್ಯಾತನಾಗಿದ್ದು, ಅದು ಬೇಕೆನಿಸದಿರುವನಕ."

ಇಂಥ ಮಹಾಪುರುಷನ ಪುಣ್ಯಸ್ಮರಣೆ ನಿಜವಾಗಿಯೂ ಭುವನದ ಭಾಗ್ಯ!

# ಪದಾರ್ಥ ಚಿಂತಾಮಣಿ

– ೭೪ –

## ತುರುಕರ ವಿಜಯ

**ತುರುಕರು** ಕರೆದರೆ ಉಣಬಹುದಣ್ಣಾ" ಎಂದು ಪುರಂದರದಾಸರು ಹೇಳಿ ತುರು ಮತ್ತು ಕರು ಎಂಬ ಕನ್ನಡ ಪದಗಳ ಜೋಡಣೆಯಿಂದ ಚಮತ್ಕಾರ ಮಾಡಿದರು. ಮುಸಲ್ಮಾನರು ಎಂಬರ್ಥದಲ್ಲಿ **ತುರುಕರು** ಎನ್ನುವುದು ಇಂದಿಗೂ ಹಳೇ ಮಂದಿಯ ಬಾಯಲ್ಲಿ ಕೇಳಿಸುತ್ತದೆ. ಇದು ಭಾರತೀಯ ಇತಿಹಾಸದ ಒಂದು ಅಧ್ಯಾಯವನ್ನು ಗರ್ಭೀಕರಿಸಿಕೊಂಡಿದೆ. ತುರುಕರು ಮೂಲ ಮುಸಲ್ಮಾನರೇನೂ ಅಲ್ಲ. ಅರಬರು ಮೂಲ ಮುಸಲ್ಮಾನರು. ಪ್ರಥಮತಃ ಭಾರತದಲ್ಲಿ ಅರಬರದೇ ದಾಳಿ ಆದದ್ದು. ಕುಲದಲ್ಲಿಯೂ ತುರುಕರು ಅರಬರಿಗೆ ಹತ್ತಿರದವರಲ್ಲ. ಮಧ್ಯ ಏಶಿಯದ ಅನಾಗರಿಕ ಯೋಧ ಕುಲ ಅದು. ಇಸ್ಲಾಂ ಧರ್ಮಕ್ಕೆ ಅವರ ಮತಾಂತರ ಪೈಗಂಬರರ ನಂತರ ಕೆಲ ಶತಮಾನಗಳ ಮೇಲೆ ಆದದ್ದು. ಆದರೆ ಭಾರತದ ಮೇಲೆ ವ್ಯಾಪಕ ದಾಳಿ ಮಾಡಿ ಗೆದ್ದು ಭಾರತದ ಬಹುಭಾಗದಲ್ಲಿ ತಮ್ಮ ಆಯುಧದ ಹರಿತವನ್ನು ಪ್ರದರ್ಶಿಸಿ ನೆನಪು ಬಿಟ್ಟು ಹೋದವರು ತುರ್ಕಿ ಮೂಲದ ಮುಸಲ್ಮಾನ ಸೇನಾನಿಗಳು; ಕುತ್ಬುದ್ದೀನನಿಂದ ಬಾಬರನವರೆಗೆ ಅನೇಕ ಮಹಾ ಸೇನಾನಿಗಳು ತುರ್ಕಿ ಕುಲದವರು. ಹೀಗೆ ಭಾರತದ ಬಹುತರ ಭಾಷೆಗಳಲ್ಲಿ **ತುರುಕ** ಎಂಬುದು **ಮುಸಲ್ಮಾನ**ಕ್ಕಿಂತಲೂ ಹೆಚ್ಚು ಪ್ರಚಲಿತವಾದ ಪದವಾಗಿದೆ. **ಯವನ** ಎಂಬ ಪದದೊಡನೆ ಸಂಸ್ಕೃತದಲ್ಲಿ **ತುರುಷ್ಕ** ಪ್ರಾಕೃತದಲ್ಲಿ ತುರುಕ್ಕ ಇವೆ. ೧೩ನೇ ಶತಮಾನದಿಂದಲೇ ಕನ್ನಡದಲ್ಲಿ ತುರುಕ ಕಾಣಿಸಿಕೊಂಡಿದ್ದಾನೆ.

ತುರ್ಕಿ ಭಾಷೆ ಈ ದೇಶದಲ್ಲಿ ಆಡಳಿತದಲ್ಲಿ ವ್ಯಾಪಕವಾಗಿ ಬಳಕೆಗೆ ಬಾರದಿದ್ದರೂ ತುರ್ಕಿ ಸುಲ್ತಾನರ ಮತ್ತು ಸೇನಾಪತಿಗಳ ಆಯುಧ ಕೌಶಲ ಭಾರತದ ಭಾಷೆಗಳಿಗೆ ಕೆಲ ಶಬ್ದಗಳನ್ನು ಕೊಟ್ಟಿದೆ. ತೋಪು (ಫಿರಂಗಿ), **ತುಪಾಕಿ** (ತೋಪ್, ತುಪಾಕ್), ಚಾಕೂ (= **ಚೂರಿ**), ಕೈಂಚೀ (= ಕತ್ತರಿ) ತುರ್ಕಿ ಪದಗಳು. **ಉರ್ದು** ಭಾಷೆಯ ಹೆಸರೂ ತುರ್ಕರಿಟ್ಟದ್ದು, ತುರ್ಕಿಯಲ್ಲಿ **ಓರ್ದು** ಎಂದರೆ ಶಿಬಿರ, ಬೀಡು. ಪರ್ಶಿಯನ್ ಭಾಷೆ ಅದನ್ನು ಸ್ವೀಕರಿಸಿ ಪೇಟೆ, ಬಾಜಾರ್ ಎಂಬರ್ಥಕ್ಕೆ ಅದನ್ನು ವಿಸ್ತರಿಸಿದೆ, ಅಂಗಡಿ ಪೇಟೆಯ ಭಾಷೆ ಅಂದರೆ ತಾವು ಗೆದ್ದ ಪ್ರದೇಶದ ಜನಸಾಮಾನ್ಯರ ಭಾಷೆ ಹಿಂದಿ, ಮಾರ್ಕೆಟಿನ ಭಾಷೆಯಿಂದ ಆದೀಗ ಸಮೃದ್ಧ ಸಾಹಿತ್ಯ ಭಾಷೆಯಾಗಿ ಬೆಳೆದಿದೆ ಎಂಬುದು ಅದೃಷ್ಟದ ಲೀಲೆ. ಇವಲ್ಲದೆ **ಕೂಲಿ** (ತುರ್ಕಿ, ಕುಲೀ = ಗುಲಾಮ), **ಬೀಬಿ**, **ಬೇಗಮ್**, **ಖಾನ್** (ತುರ್ಕಿ–ಖಾನ್ = ಪ್ರಭು ಒಡೆಯ), **ಬಕ್ಷಿ** (ತುರ್ಕಿ—ಬಕ್‌ಶೀ = ಹಣ ಹಂಚುವ ಅಧಿಕಾರಿ) ಎಂಬ ಪದಗಳನ್ನು ತುರ್ಕರು ನಮಗೆ ಕೊಟ್ಟರು; **ಖಜಾಂಚಿಯ** **ಖಜಾನಾ** ಪಾರಸಿಕ ಪದವಾದರೂ **ಚೀ** ಪ್ರತ್ಯಯ ತುರ್ಕಿ. ಅಷ್ಟೇಕೆ, **ಚಕಮಕಿ** ಎಂಬುದು ತುರ್ಕಿ ಮೂಲದ್ದು (ಚಕ್ ಮಾಕ್) ಎಂದು ಸಹಸಾ ತೋರುವುದೇ ಇಲ್ಲ. ಈಗೀಗ ಜನಪ್ರಿಯವಾಗುತ್ತಿರುವ **ಕೂರ್ಮಾ** ಎಂಬ ತಿಂಡಿಗೂ ಸಂಸ್ಕೃತ **ಕೂರ್ಮ**ನಿಗೂ ಸಂಬಂಧವಿಲ್ಲ. ಅದು ಮೂಲತಃ ತುರ್ಕರ ಒಂದು ಮಾಂಸದ ತಿನಿಸು. ತುರ್ಕಿ – ಕವುರ್ಮ ನಾವು ಶಾಕಾಹಾರಿ ಕುರ್ಮಾವನ್ನು ರೂಪಿಸಿಕೊಂಡಿರುವುದು ಭಾರತೀಯ ಪಾಕ ವಿದ್ಯೆಯ ಸಾಧನೆ ಅಷ್ಟೇ.

ಶ್ರೇಷ್ಠ ಉಣ್ಣೆ – ರೇಶ್ಮೆ ನೇಯ್ಗೆಯ ಅಂಗವಸ್ತ್ರವನ್ನು ಹಿಂದಿನವರು **ಸಕಲಾತಿ** ಎನ್ನುತ್ತಿದ್ದರು. ನಮ್ಮ ಪಂಡಿತರು ಸಕಲಾತಿ ಹೊತ್ತುಕೊಂಡು ತಮ್ಮ ಆಢ್ಯತೆ ಮೆರೆಯುತ್ತಿದ್ದರು. ನಮ್ಮದೇ ಕಾಶ್ಮೀರ ದೇಶ ಜಗತ್ತಿನ ಶ್ರೇಷ್ಠ ಉಣ್ಣೆ ಬಟ್ಟೆಗಳ ಆಗರವಾಗಿದ್ದರೂ (ಪಾಶ್ಚಾತ್ಯ ಭಾಷೆಗಳಲ್ಲಿ **ಕಾಶ್ಮೀರ** ಎಂದರೆ ಉಣ್ಣೆ ಬಟ್ಟೆ) **ಸಕಲಾತಿ** ಸಂಸ್ಕೃತವೂ ಅಲ್ಲ, ದೇಶ್ಯವೂ ಅಲ್ಲ.

ಅದು ಪಾರಸೀಕ **ಸಕಲಾತ್** ಪದದ ದೇಶೀಕರಣ. ಅದರ ಅರ್ಥ ಬೆಲೆಬಾಳುವ ಪದಾರ್ಥ. ಮುಂದೆ ಶಾಲುಗಳಿಗೆ ಅನ್ವಯಿಸುವಾಗ ಅದು ಕೆಂಬಣ್ಣದ ಅಮೂಲ್ಯ ಬಟ್ಟೆ ಎಂದು ಪ್ರಚಲಿತವಾಯಿತು.

ನಮ್ಮ ವಸ್ತ್ರೋದ್ಯಮದ ಪದಸಂಪತ್ತಿನಲ್ಲಿ ನನಗೆ ಬಂದ ಒಂದು ಸಮಸ್ಯೆಯನ್ನು ಬಿಡಿಸುವುದು ಕಷ್ಟವಾಗಿದೆ. **ಜರಿ** ಬಟ್ಟೆಗೆ ದೇಶೀ ಶಬ್ದವೇನು? **ಕಲಾಬತ್ತಿನ** ಬಟ್ಟೆ ಎಂದೂ ಅದನ್ನು ಕರೆಯುತ್ತಾರೆ. ಬಂಗಾರದ ಎಳೆಯೊಡನೆ ನೇಯ್ದ ಬಟ್ಟೆಯನ್ನು ಭಾರತದ ಆಢ್ಯರು ಧರಿಸುತ್ತಾರೆಂದು ಚಂದ್ರಗುಪ್ತ ಮೌರ್ಯನ ಕಾಲದ ವಿದೇಶಿ ಪ್ರವಾಸಿಕರೂ ಬರೆದಿದ್ದಾರೆ. ಆದರೆ **ಜರಿ, ಕಲಾಬತ್ತು, ಬ್ರೊಕೇಡ್** ಇವು ಯಾವುವೂ ಸಂಸ್ಕೃತವೂ ಅಲ್ಲ, ದೇಶ್ಯವೂ ಅಲ್ಲ. **ಜರಿ** ಪಾರಸೀಕ ಪದ. **ಜರ್** ಎಂದರೆ ಚಿನ್ನ; **ಜರೀ** ಎಂದರೆ ಚಿನ್ನದ್ದು, **ಜರಕಾರಿ** ಎಂದರೆ ಬಂಗಾರದ ಸರಿಗೆಯುಳ್ಳದ್ದು. **ಜರ್‌ದಾರ್** ಎಂದರೆ ಬಂಗಾರುಳ್ಳದ್ದು, **ಜರದಾರಿ** ಎಂದರೆ ಬಂಗಾರದ್ದು. **ಕಲಾಬತೂ** ಎಂಬುದು ತುರ್ಕಿಪದ. **ಬ್ರೊಕೇಡ್** ಪಾಶ್ಚಾತ್ಯದೇಶದ–ಇಟಾಲಿಯನ್ ಮೂಲದ್ದು. ಮೈಸೂರ ಕಡೆ, ತಮಿಳು ನಾಡಿನಲ್ಲಿ **ಸರಿಗೆ** ಪೇಟಾ ಇತ್ಯಾದಿಯಾಗಿ ಹೇಳುತ್ತಾರೆ. ಚಾಲುಕ್ಯ ಸೋಮನಾಥನು ತನ್ನ "ಅಭಿಲಷಿತಾರ್ಥ ಚಿಂತಾಮಣಿ"ಯಲ್ಲಿ ರಾಜರಿಗೆ ಧರಿಸಲು ಯೋಗ್ಯವಾದ "ಸರಕ್ಯೆರ್ಯುರ್ಕೃಂ" (**ಸರಕ**ದಿಂದ ಕೂಡಿದ) ಬಟ್ಟೆಯ ವಿಷಯ ಹೇಳುತ್ತಾನೆ: ಇದೂ **ಸರಿಗೆ**(ತಮಿಳು–ಚರಿಕೈ)ಯೂ ಒಂದೇ ಎಂಬಲ್ಲಿ ಸಂಶಯವಿಲ್ಲ. ಆದರೆ **ಸರಕ**ಕ್ಕೆ ನಿಜವಾದ ಪ್ರಾಚೀನ ಸಂಸ್ಕೃತ ಕೋಶಾಧಾರ ಸಿಗುವುದಿಲ್ಲ. **ಸರಕ** ಎನ್ನುವುದು ಪಾರ-ಸೀಕ **ಜರ**(Zar)ದ ಭಾರತೀಕರಣವಿರಬೇಕೆಂಬ ಬಲವಾದ ಸಂಶಯ ಬರುತ್ತದೆ. **ಜರಗು** ಎಂಬೊಂದು ಪದ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸಿಗುತ್ತದೆ. ಅರ್ಥ ಚಿನ್ನದ ಕಣಗಳು ಎಂದು. ಅದಕ್ಕೂ ೧೨ ನೇ ಶತಮಾನಕ್ಕಿಂತ ಹಿಂದಿನ ಪ್ರಯೋಗಗಳು ಸಿಗುವುದಿಲ್ಲ.

ಕ್ರಿ. ಶ. ಒಂದನೇ ಶತಮಾನದವನೆಂದು ನಂಬಲಾದ ಅಶ್ವಘೋಷನ "ಬುದ್ಧಚರಿತೆ"ಯಲ್ಲಿ ಬಂಗಾರದಿಂದ ಹಂಸ ಚಿತ್ರಗಳನ್ನು ರಚಿಸಿದ ರೇಶ್ಮೆ ಬಟ್ಟೆ (ಕಾಂಚನ ಹಂಸ ಚಿಹ್ನ)ಯ ಸುದ್ದಿ ಇದೆ. ಆದರೆ ಅದಕ್ಕೆ ಬೇರೆ ಹೆಸರಿಲ್ಲ. ಅನೇಕ ಸಾಂಸ್ಕೃತಿಕ ವಿಷಯಗಳ ಕೋಶದಂತಿರುವ ಬಾಣಭಟ್ಟನ ಕಾದಂಬರಿಯಲ್ಲಿ ಜರಿ ಬಟ್ಟೆಯ ಪ್ರಸ್ತಾಪವಿಲ್ಲ. ಅಲ್ಲಿ ಸರಕದ ಸುದ್ದಿ ಇಲ್ಲ. ಬದಲಿಗೆ ಗೋರೋಚನದಿಂದ ರಚಿಸಿದ ಹಂಸಾದಿಗಳನ್ನೊಳಗೊಂಡ ಚಿತ್ತಾರದ ಅಂಚಿನ ಮೇಲುದದ ವರ್ಣನೆ ಅಲ್ಲಿ ಇದೆ. ಅತ್ಯಂತ ವೈಭವವೋಪೇತವಾದ ಹರ್ಷನ ಕಾಲದಲ್ಲಿ ಜರಿ ಬಟ್ಟೆ ಇರಲಿಲ್ಲವೆ? ಅದು ಇರಾಣದಿಂದ ಆಮದಾಗುತ್ತಿದ್ದುದರಿಂದ **ಸರಕ** ಶಬ್ದವೂ ಅದರೊಡನೆ ಬಂತೇ? **ಧೌತ ಕೌಶೇಯ** ಮತ್ತು **ಪತ್ರೋರ್ಣ** ಎಂಬ ಎರಡು ಪದಗಳು ಬಟ್ಟೆಗೆ ಸಂಬಂಧಿಸಿ ಸಂಸ್ಕೃತದಲ್ಲಿದ್ದು ಅವೆರಡೂ ಜರಿ ಬಟ್ಟೆಗಳಿಗೆ ಅನ್ವಯಿಸುತ್ತಿರಬೇಕೆಂದು ನನ್ನ ವಿದ್ವಾನ್ ಮಿತ್ರರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಹೇಳುತ್ತಾರೆ. **ಪತ್ರ** ಎಂದರೆ ತೆಳ್ಳಗೆ ಬಡಿದ ಲೋಹದ ತಗಡು. **ಧೌತ** ಎಂದರ **ಬೆಳ್ಳಿ**. ಬೆಳ್ಳಿಬಂಗಾರದ ತೆಳ್ಳನ ತಗಡಿನಿಂದ ರಚಿಸಿದ ಕಲಾಪಗಳಿಂದ ಕೂಡಿದ್ದು ಪತ್ರೋರ್ಣ. ಧೌತ ಕೌಶೇಯ (ಊರ್ಣ = ಮುಚ್ಚಿದ್ದು: ಕೌಶೇಯ = ರೇಶ್ಮೆ) ತೆಳ್ಳನ್ನ ಚಿನ್ನ, ಬೆಳ್ಳಿಯ ತಗಡನ್ನು ತಗಲಿಸಿ ಮಾಡಿದ್ದೇ ಮೊದಲನೇ ಜರಿ ಬಟ್ಟೆಯಾಗಿದ್ದು ಆದರ ಸೂಕ್ಷ್ಮತಂತಿ ಎಳೆದು ನೇಯ್ದ ಬಟ್ಟೆಗಳು ಅನಂತರ ಬಂದಿರಬಹುದು. **ಬ್ರೊಕೇಡ್** ಎಂದರೆ ಮೊದಲನೇ ತರಹದ್ದು. ಆದರೆ ಕೋಶಕಾರರಿಗೂ ನಿಜವಾದ ಮೂಲಾರ್ಥ ಮರೆತುಹೋಗುವಷ್ಟು ಮಟ್ಟಿಗೆ ಈ ಪ್ರಾಚೀನ ಶಬ್ದಗಳು ಮೂಲೆಗೆ ಬಿದ್ದದ್ದು ಆಶ್ಚರ್ಯ. ನೇಯ್ಗೆಯಲ್ಲಿ ಚಿನ್ನ ಬೆಳ್ಳಿಯ ಸೂಕ್ಷ್ಮ ತಂತುಗಳನ್ನು ಬಳಸುವ ಕಲೆ ಇರಾಣದಲ್ಲೇ ಬೆಳೆದು ಭಾರತಕ್ಕೆ ಬಂತೇ? ತಗಡು ಹೊಲಿಯುವ ಹಳೇ ಪದ್ಧತಿಯೊಡನೆ ಅದರ ಹೆಸರೂ ಅಸ್ತವಾಯಿತೆ?

**ಪಾ. ವೆಂ.**

# ದೈತ್ಯಾಕಾರದ ಬೆಳಕಿನ ಬಿಲ್ಲು

**ವಿ. ಪ್ರಾಣೇಶರಾವ್**

ಆಕಾಶಗಂಗೆಯ ಕ್ಷೀರಪಥದ ಮಧ್ಯ ಭಾಗಕ್ಕೆ ಸ್ವಲ್ಪ ಹತ್ತಿರದಲ್ಲಿ ಬಿಸಿ ಅನಿಲಗಳ ದೈತ್ಯಾಕಾರದ ಬೆಳಕಿನ ಬಿಲ್ಲೊಂದು ಇರುವುದನ್ನು ಶೋಧಿಸಿರುವುದಾಗಿ ಖಗೋಳ ವಿಜ್ಞಾನಿಗಳ ಒಂದು ತಂಡ ಇತ್ತೀಚೆಗೆ ವರದಿ ಮಾಡಿದೆ. ಇದನ್ನು ಜ್ಯೋತಿಸ್ಸೇತು, ತೇಜೋರಾಶಿ ಎಂದೂ ಕರೆಯುತ್ತಾರೆ.

ಭೂಮಿಯಿಂದ ೩೦,೦೦೦ ಜ್ಯೋತಿರ್ವರ್ಷಗಳ ದೂರದಲ್ಲಿ ಪತ್ತೆ ಹಚ್ಚಲಾಗಿರುವ ಈ ಬೆಳಕಿನ ಬಿಲ್ಲು ಸೂರ್ಯನಿಗಿಂತಲೂ ಲಕ್ಷ ಕೋಟ್ಯಂತರ ಪಟ್ಟು ದೊಡ್ಡದಾಗಿದ್ದು ಬೃಹತ್ ಸೌರಜ್ವಾಲೆಯೊಂದನ್ನು ಹೋಲುತ್ತದೆ ಎಂಬುದಾಗಿ ಲಾಸ್ ಏಂಜಲೀಸ್‌ನಲ್ಲಿರುವ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯ ('ಯುಕ್ಲಾ') ಹಾಗೂ ನ್ಯೂಯಾರ್ಕ್‌ನ ಕೊಲಂಬಿಯಾ ವಿಶ್ವವಿದ್ಯಾನಿಲಯದ ಖಗೋಳ ವಿಜ್ಞಾನಿಗಳು ಹೇಳುತ್ತಾರೆ.

೧೫೦ ಜ್ಯೋತಿರ್ವರ್ಷಗಳಿಗಿಂತಲೂ ಉದ್ದವಾಗಿರುವ ಈ ಬೆಳಕಿನ ಬಿಲ್ಲು ೯೦° ಕೋನದ ಬಳಿ ಬಾಗುವುದಕ್ಕೆ ಮೊದಲು ಆಕಾಶಗಂಗೆ ಮತ್ತು ನಮ್ಮ ಸೌರವ್ಯೂಹಕ್ಕೆ ಸಮತಲದಲ್ಲಿ ಮೇಲೇಳುತ್ತದೆ. ಪ್ರತಿ ಸೆಕೆಂಡಿಗೆ ೧,೮೬,೦೦೦ ಮೈಲಿಯಂತೆ ಒಂದು ವರ್ಷ ಕಾಲ ಬೆಳಕು ಪಯಣಿಸುವ ದೂರವನ್ನು ಒಂದು ಜ್ಯೋತಿರ್ವರ್ಷವೆನ್ನುತ್ತಾರೆ. ಒಂದು ವರ್ಷ ಕಾಲ ಬೆಳಕು ಪಯಣಿಸುವ ದೂರ ಕೆಲವು ಆರು ಟ್ರಿಲಿಯನ್ ಮೈಲುಗಳು. ಅಂದರೆ ಆರು ಹತ್ತು ಲಕ್ಷದ ಹತ್ತು ಲಕ್ಷದ ಹತ್ತು ಲಕ್ಷ ಮೈಲುಗಳು.

ನೋಡಲು ಇದೊಂದು ದೊಡ್ಡ ಸೌರಜ್ವಾಲೆಯನ್ನು ಹೋಲುತ್ತದೆಯಾದರೂ ಇದರ ಅಳತೆ ಲಕ್ಷ ಕೋಟ್ಯಂತರ ಪಟ್ಟು ದೊಡ್ಡದಾಗಿದೆ ಎಂಬುದಾಗಿ 'ಯುಕ್ಲಾ'ದಲ್ಲಿ ಖಗೋಳ ವಿಜ್ಞಾನದ ಸಹ ಪ್ರಾಧ್ಯಾಪಕರಾಗಿರುವ ಡಾ. ಮಾರ್ಕ್ ಮಾರಿಸ್ ಹೇಳಿದ್ದಾರೆ. ಅಗಲ ಕಿರಿದಾಗಿ ಉದ್ದವಾದ ಎಳೆಗಳಂಥ ರಚನೆಗಳು ಒಂದೊಂದೂ ಅನೇಕ ಜ್ಯೋತಿರ್ವರ್ಷಗಳಷ್ಟು ವಿಸ್ತಾರವಾಗಿರುವಂಥವು ಬಿಸಿ ಅನಿಲದ ಈ ಬೆಳಕಿನ ಬಿಲ್ಲಿನಲ್ಲಿ ಇರುವುದಾಗಿ ಸಮೀಕ್ಷೆಗಳು ಸೂಚಿಸುತ್ತವೆ ಎನ್ನುತ್ತಾರೆ ಖಗೋಳ ವಿಜ್ಞಾನಿಗಳು.

ಯಾವುದು ಈ ಬೆಳಕಿನ ಬಿಲ್ಲನ್ನು ಉಂಟು ಮಾಡಿದೆ ಎಂಬುದು ತಿಳಿದುಬಂದಿಲ್ಲವಾದರೂ ಆಕಾಶಗಂಗೆಯ ಪರಿಭ್ರಮಣದಿಂದಾಗಿ ಸೇರುವ ಕಾಂತೀಯ ರೇಖೆಗಳ ಜೋಡಣೆಯಿಂದಾಗಿ ಇದರ ಸಂಘಟನೆಯಾಗಿರಬಹುದು ಎಂದು ಮಾರಿಸ್ ಹೇಳಿದ್ದಾರೆ. ಆಕಾಶಗಂಗೆಯ ಕಾಂತವಲಯವು ಸಮತಲದಲ್ಲಿದೆಯೆಂದು ಭಾವಿಸಲಾಗಿದ್ದರೂ "ಉತ್ತರ–ದಕ್ಷಿಣ"ವಾಗಿ ಅಥವಾ ಲಂಬವಾಗಿ ಒಂದು ಕಾಂತವಲಯವೂ ಇರಬಹುದೆಂದು ಈ ಹೊಸ ರಚನೆಯು ಸೂಚಿಸುತ್ತದೆ.

"ಅಯಾನೀಕೃತ ಬಿಸಿ ಅನಿಲದ ಈ ಬೆಳಕಿನ ಬಿಲ್ಲು ಒಂದು ಕಾಂತವಲಯದ ನಿಯಂತ್ರಣಕ್ಕೊಳಗಾಗಿದೆ ಎಂಬುದನ್ನು ಈಗ ಲಭ್ಯವಿರುವ ಸಾಕ್ಷ್ಯಾಧಾರಗಳು ಅದರಲ್ಲೂ – ಈ ರಚನೆಯ ವಿಸ್ತೃತ ಸ್ವರೂಪವು– ಸೂಚಿಸುತ್ತದೆ" ಎಂದು ಮಾರಿಸ್ ಹೇಳಿದ್ದಾರೆ.

'ಯುಕ್ಲಾ'ದ ಮಾರಿಸ್ ಮತ್ತು ಕೊಲಂಬಿಯಾದ ಖಗೋಳ ವಿಜ್ಞಾನಿಗಳಾದ ಫರ್ಹಾದ್ ಯೂಸೆಫ್ ಜಾದೆ ಮತ್ತು ಡಾನ್ ಚಾನ್ಸ್‌ರವರು, ನ್ಯೂ ಮೆಕ್ಸಿಕೊದಲ್ಲಿರುವ ಬೃಹದಾಕಾರದ ದೂರದರ್ಶಕ ಸಂಕೀರ್ಣದ ಸಹಾಯದಿಂದ ಈ ಬೆಳಕಿನ ಬಿಲ್ಲನ್ನು, ತೇಜೋರಾಶಿಯನ್ನು ಶೋಧಿಸಿದ್ದಾರೆ. ◆

# 'ಅವಂತಿ'

**ಯಾತ್ರಿಕ**

ಗೋಪಾಲಸಿಂಹ "ಅವಂತಿ"ಯ ಪುನರ್ಜನ್ಮಿಸಿದ ಗಂಡ ಎನ್ನುವುದು 'ಅವಂತಿ' ಲೇಖನದಲ್ಲಿನ ಘಟನೆಗಳ ಒಂದು ಮುಖ್ಯ ಅಂಶ. ಆದ್ದರಿಂದ ಜನ್ಮ ಪುನರ್ಜನ್ಮಗಳ ತಥ್ಯದ ಬಗ್ಗೆ ಮೊದಲು ಪರಿಶೀಲಿಸೋಣ. ಸಾಂಪ್ರದಾಯಿಕ ಹಿಂದೂ ಬೌದ್ಧ ಜೈನ ಮತಾವಲಂಬಿಗಳ ಮನೆಗಳಲ್ಲಿ ಹುಟ್ಟಿ ಬೆಳೆದವರಿಗೆ ಜನ್ಮ ಪುನರ್ಜನ್ಮಗಳಲ್ಲಿ ಸಂಶಯವೇ ಇಲ್ಲ. ಅವರ ಹಿಂದೆ ಆ ಜನಗಳ ಸಹಸ್ರಾವಧಿ ವರ್ಷಗಳ ಅನುಭವವಿದೆ. ಇದರಲ್ಲಿ ನಂಬಿಕೆ ಅವರ ರಕ್ತದಲ್ಲಿಯೇ ಹುಟ್ಟಿ ಬೆಳೆದು ಬರುತ್ತಿದೆ. ಕ್ರೈಸ್ತ, ಇಸ್ಲಾಂ ಧರ್ಮಾವಲಂಬಿಗಳಲ್ಲಿ ಮನುಷ್ಯನಿಗೆ ಇರುವುದು ಇದೊಂದೇ ಜನ್ಮ ಎಂಬ ನಂಬಿಕೆ ಬೇರೂರಿದೆ. 'ದೇವರೇ ಇಲ್ಲ ಎಂಬ ನಾಸ್ತಿಕರಿಗೆ ಆತ್ಮ ಎಂಬುದರಲ್ಲೂ ನಂಬಿಕೆ ಇಲ್ಲ. ಅನ್ನಾಹಾರಗಳಿಂದ ತನ್ನಷ್ಟಕ್ಕೆ ತಾನಾಗಿ ಬೆಳೆದು ವಂಶಾಭಿವೃದ್ಧಿಯಾಗಿ ಕಡಗೆ ಸತ್ತು ಪೃಥ್ವಿಯ ಮೂಲ ಕಣಗಳಲ್ಲಿ ಬೆರೆತು ಹೋಗುವ ಈ ಜೀವನ ಅವರ ಕಣ್ಣಿನಲ್ಲಿ ಯಾವ ಅರ್ಥವೂ ಉದ್ದೇಶವೂ ಇಲ್ಲದೆ ಅಕಸ್ಮಾತ್ತಾಗಿ ತಾನಾಗಿಯೇ ಉಂಟಾಗಿ ಬೆಳೆದು ಬಂದ ಒಂದು ಘಟನೆ, ಅಷ್ಟೇ. ಅನೇಕ ಪಾಶ್ಚಾತ್ಯ ವಿಜ್ಞಾನಿಗಳೂ ಕಮ್ಯೂನಿಸ್ಟ್ (ರಷ್ಯಾ, ಚೈನಾಗಳೂ ಸೇರಿ) ವಾದವನ್ನು ಅನುಸರಿಸುವ ಎಲ್ಲಾ ಜನಗಳೂ ಈ ದೃಷ್ಟಿಕೋಣವನ್ನು ಸಮರ್ಥಿಸುತ್ತಾರೆ,

ಆದರೆ ಈಗೀಗ ಪಾಶ್ಚಾತ್ಯ ವಿಜ್ಞಾನಿಗಳೂ ಕಮ್ಯೂನಿಸ್ಟ್ ವಿಜ್ಞಾನಿಗಳೂ ನಿಧಾನವಾಗಿ ತಮ್ಮ ಕಣ್ಣು ತೆರೆದು ನೋಡುತ್ತಿದ್ದಾರೆ. "ಈ ಜನ್ಮವಲ್ಲದೆ ಬೇರೊಂದಿಲ್ಲ" ವಾದದಲ್ಲಿ ಪಾಶ್ಚಾತ್ಯ ಕ್ರೈಸ್ತರಲ್ಲೂ ಕೂಡ ಅಸಂತುಷ್ಟಿ ಹುಟ್ಟಿದೆ. ಈ ಜನ್ಮದ ಏರುತಗ್ಗುಗಳೂ, ಕಷ್ಟ ಕಾರ್ಪಣ್ಯಗಳೂ ಸಂತೋಷ ದುಃಖಗಳೂ ತಮ್ಮ ಹಿಂಬದಿಯಲ್ಲಿ ಯಾವ ಅರ್ಥವನ್ನೂ ಹೊಂದಿರದ ಘಟನೆಗಳೇ? ಎಂಬ ಸಂಶಯ ಹುಟ್ಟಿ ತಮ್ಮ ಕಣ್ಣಿಗೆ ಗೋಚರವಾಗದ ಘಟನೆಗಳ ಬಗ್ಗೆ ತಿಳಿದುಕೊಳ್ಳಲು ಆಸಕ್ತಿ ಹೊಂದಿದ್ದಾರೆ. 'ಪ್ಯಾರಾ ಸೈಕಾಲಜಿ" ಎಂಬ ಹೆಸರು ಹೇಳಿಕೊಂಡು "ಬಿದ್ದರೂ ಮೀಸೆ ಮಣ್ಣಾಗಲಿಲ್ಲ" ಎಂಬ ಗಾದೆಯಂತೆ ತಮ್ಮ ಹೊಸ ಶಾಸ್ತ್ರದ ಮೂಲಕ ಹೊಸ ಹೆಸರುಗಳನ್ನು ಕೊಟ್ಟು ಜನ್ಮ-ಪುನರ್ಜನ್ಮವನ್ನು ಪರಿಶೀಲಿಸುತ್ತಿದ್ದಾರೆ. ಕಸ್ತೂರಿ, ಫೆಬ್ರುವರಿ, ೧೯೮೩ರಲ್ಲಿ "ಪುನರ್ಜನ್ಮ ತಥ್ಯವೇ?" ಎಂಬ ಲೇಖನದಲ್ಲಿ ಎ.ವಿ. ಗೋವಿಂದರಾಯರು ಪಾಶ್ಚಾತ್ಯರ ಇಂತಹ ಪ್ರಯತ್ನಗಳನ್ನು ವಿವರಿಸಿದ್ದಾರೆ.

ಪುನರ್ಜನ್ಮಿಸುವುದು ಯಾವುದು ಎಂದು ತಿಳಿಯೋಣ. ಅದಕ್ಕೆ ಮುಂಚೆ ಜೀವಂತ ಮನುಷ್ಯ ವ್ಯಕ್ತಿತ್ವದ ಬಗ್ಗೆ ಎರಡು ಮಾತು ಹೇಳಬೇಕು. ಸಾಂಪ್ರದಾಯಿಕವಾಗಿ ಹೇಳುವುದಾದರೆ ಜೀವಂತ ವ್ಯಕ್ತಿಯು ಪಂಚಕೋಶಗಳಿಂದ ರಚಿತನಾಗಿದ್ದಾನೆ. ಆತನ ಭೌತಿಕ ಶರೀರವೆಲ್ಲ ಸೇರಿ ಒಂದು ಹೊದಿಕೆ,

ಅಥವಾ ಅನ್ನಮಯಕೋಶ ಎಂದು ಹೇಳುವುದುಂಟು. ಅನ್ನಮಯ ಕೋಶದ ವಿವಿಧ ಅಂಗಗಳನು ತಮ್ಮ ತಮ್ಮ ಕಾರ್ಯ ನಿರ್ವಹಿಸುವಂತೆ ಮಾಡುವ ಚಟುವಟಿಕೆಗಳ ಒಟ್ಟು ಸಮುದಾಯವನ್ನು ಪ್ರಾಣಮಯಕೋಶವೆನ್ನುತ್ತಾರೆ. ಇದಕ್ಕೂ ಒಳಗೆ ಇರುವ ಮನೋಮಯ ಕೋಶವು ಪಂಚೇಂದ್ರಿಯ ಮತ್ತು ಮೇಧಾಶಕ್ತಿಯ ಮೂಲ ಸ್ಥಾನ. ಈ ಮೂರು ಕೋಶಗಳೂ ಪ್ರತಿ ಮನುಷ್ಯನಿಗೂ ಅವನವನ ವ್ಯಕ್ತಿತ್ವವನ್ನು ಕೊಡುತ್ತವೆ. ಈ ಮೂರು ಕೋಶಗಳ ಒಳಗಡೆ ಆನಂದಮಯ ಕೋಶ, ಅದಕ್ಕೂ ಒಳಗಡೆ ಜ್ಞಾನಮಯ ಕೋಶ, ಎಲ್ಲಕ್ಕೂ ಒಳಗೆ ಆತ್ಮ ಇರುತ್ತದೆ. ಹೊರಗಡೆಯ ಮೂರು ಕವಚಗಳೇ ಮನುಷ್ಯನಿಗೆ ವ್ಯಕ್ತಿತ್ವವನ್ನು ಕೊಡುತ್ತವೆ. ಆದರ ಒಳ ಕೋಶಗಳಿಗೆ ವ್ಯಕ್ತಿತ್ವವಿಲ್ಲ. ವ್ಯಕ್ತಿತ್ವ ಎನ್ನುವುದು ಆತ್ಮನಿಗೆ ಒಂದು ಹೊರೆ, ಶೃಂಖಲ, ಬಿಗಿಯಾಗಿ ಹಿಡಿದು ಕಟ್ಟಿರುವ ಬಂಧನ.

ಮರಣಕಾಲದಲ್ಲಿ ಪ್ರಾಣಮಯಕೋಶ ನಶಿಸಿ ಹೋಗಿ ಉಳಿದ ಕೋಶಗಳು ಹೊರಗೆ ಬಂದು ವ್ಯಕ್ತಿಯ ಅನ್ನಮಯ ಕೋಶ ನಿರ್ಜೀವವಾದ ಕಳೇಬರವಾಗುತ್ತದೆ. ಈ ಕಳೇಬರ ದಹನದಿಂದಲೋ ದಫನದಿಂದಲೋ ಪುನಃ ಮಣ್ಣು ನೀರು ಗಾಳಿಯೊಳಗೆ ಸೇರಿ ವಿಲೀನವಾಗುತ್ತದೆ. ಕಳೇಬರದಿಂದ ಉಳಿದ ಕೋಶಸಮೂಹಕ್ಕೆ "ಪ್ರೇತ"ವೆನುತ್ತಾರೆ. ಇದರಲ್ಲಿ ಮನೋಮಯ ಕೋಶ ಇನ್ನೂ ಉಳಿದಿರುವುದರಿಂದ ಇದು ಸುಖ ದುಃಖಗಳನ್ನು ಇನ್ನೂ ಅನುಭವಿಸುತ್ತಿದೆಯೆಂಬ ನಂಬಿಕೆ ಇದೆ, ಜನಸಾಮಾನ್ಯರಲ್ಲಿ "ಪ್ರೇತ" ಎಂಬ ಪದ ಕೇಳುತ್ತಲೇ ಒಂದು ರೀತಿಯ ಭಯ ಉಂಟಾಗುತ್ತದೆ. ಏಕೆಂದರೆ, ಪ್ರೇತವು ಕೆಲವು ಸಂದರ್ಭಗಳಲ್ಲಿ ಜೀವಂತ ವ್ಯಕ್ತಿಗಳಿಗೆ ಸೇರಿ ತೊಂದರೆ ಮಾಡಬಹುದೆಂಬ ನಂಬಿಕೆ. ಇದಕ್ಕೆ ಸ್ವಲ್ಪ ಮಟ್ಟಿಗೆ ಆಧಾರವಿದೆ. ಮುಂದೆ ತಿಳಿಯೋಣ.

ಇಷ್ಟು ತಿಳಿದಮೇಲೆ ಈಗ ಪುನರ್ಜನ್ಮಿಸುವುದು ಯಾವುದು ಎಂದು ನೋಡೋಣ. ಉದಾಹರಣೆಗೆ XYZ ಎಂಬಾತ ಜೀವಂತವಾಗಿರುವಾಗಲೇ ಹುಟ್ಟಿದ ಆತನ ಮೊಮ್ಮಗ ತದ್ವತ್ ಅಜ್ಜನಂತೆಯೇ ಇದೆ. ವ್ಯಕ್ತಿ ಲಕ್ಷಣಗಳು, ಧ್ವನಿ, ನಡಿಗೆ, ಎಲ್ಲವೂ ಕೂಡ. ಆದೂ ಅಜ್ಜ ಮೊಮ್ಮಗನಾಗಿ ಪುನರ್ಜನ್ಮಿಸಿದ ಎಂದು ಹೇಳಲು ಅವಕಾಶವಿಲ್ಲ. ಏಕೆಂದರೆ, ಅಜ್ಜ ಇನ್ನೂ ಜೀವಂತನಾಗಿದ್ದಾನೆ. ಇದು ಹೇಗೆ ಸಾಧ್ಯವಾಯಿತು ಎಂದು ಕೇಳಿದರೆ ವಿಜ್ಞಾನ ರೀತಿಯಾಗಿ ಹೇಳಬಹುದು. ಜೀವಕಣಗಳು ಆತನ ಮಗನ ಮುಖಾಂತರ ಅನುವಂಶೀಯ ಕ್ರಮದಲ್ಲಿ ಮೊಮ್ಮಗನಿಗೆ ಇಳಿದು ಬಂದು ಸರಿಯಾದ ಪ್ರಮಾಣದಲ್ಲಿ ಸರಿಯಾದ ಕ್ರಮದಲ್ಲಿ ಪುನರ್ರಚಿತವಾಗಿ ಅಜ್ಜನ ಒಂದು ಪ್ರತಿಬಿಂಬ ಉಂಟಾಗಿದೆ. ಹೀಗೆ X Y Z ಅನ್ನಮಯ ಕೋಶ ಪುನರುತ್ಪತ್ತಿಯಾಗಿದೆ. ಆದರೆ ಇದು ಪುನರ್ಜನ್ಮವಲ್ಲ, ಎಂದು ಪುನಃ ಒತ್ತಿ ಹೇಳಬೇಕು ಅಜ್ಜನ ಕಾಲಾನಂತರ ಆತನ ಕಳೇಬರದಿಂದ ಹೊರಬಿದ್ದ ಮನೋಮಯ, ಆನಂದಮಯ, ವಿಜ್ಞಾನಮಯ ಕೋಶಗಳು ಒಟ್ಟಿಗೆ ಸೇರಿ ಆತನ ಸಂಸಾರಕ್ಕೆ ಸೇರಿದ ಜನರಲ್ಲೇ ಆಗಲಿ ಅಥವಾ ಆತ ಜೀವಂತವಾಗಿರುವಾಗ ನೋಡಿಯೂ ನೋಡಿರದ ಮತ್ತು ದೂರ ಸ್ಥಳದಲ್ಲಿ ವಾಸವಾಗಿರುವ ಇನ್ನಾವುದೋ ಸಂಸಾರದಲ್ಲೇ ಆಗಲಿ ಗರ್ಭಧರಿಸಿದ ಸ್ತ್ರೀಯೊಬ್ಬಳ ಗರ್ಭಾಣುವಿನಲ್ಲಿ ಸೇರಿ ಪುನರ್ಜನ್ಮಿಸಬಹುದು. ಆನಂದಮಯ ಮತ್ತು ವಿಜ್ಞಾನಮಯ ಕೋಶಗಳಿಗೆ ವ್ಯಕ್ತಿತ್ವವಿಲ್ಲ. ಮನೋಮಯ ಕೋಶದಲ್ಲಿರುವ ಅಜ್ಜನ ಬುದ್ಧಿಶಕ್ತಿ ಮಾತ್ರ ಪುನರ್ಜನ್ಮಿಸುತ್ತದೆ. ಹೀಗೆ ಹೊಸದಾಗಿ ಹುಟ್ಟಿದ ಈ ಮಗುವಿನ ಕಾಲ್ಪನಿಕ ರಚನೆಯಲ್ಲಿ ಆದರ ಶಾರೀರಕ ತಂದೆ ತಾಯಿ ಅನುವಂಶೀಯವಾಗಿ ಕೊಟ್ಟಿರುವ ಅನ್ನಮಯ ಪ್ರಾಣಮಯ ಕೋಶಗಳೂ ಪುನರ್ಜನ್ಮಿಸುತ್ತಿರುವ ವ್ಯಕ್ತಿಯ (ಮೇಲೆ ಹೇಳಿದ "ಅಜ್ಜ"ನ) ಮನೋಮಯ ಕೋಶದ (ಬುದ್ಧಿಶಕ್ತಿ) ಮತ್ತು ಆನಂದಮಯ ಕೋಶ ವಿಜ್ಞಾನಮಯ ಕೋಶಗಳೂ ಸೇರಿವೆ. ಹೀಗೆ ವ್ಯಕ್ತಿಯ ಕೇವಲ ಒಂದು ಭಾಗ ಮಾತ್ರ ಪುನರ್ಜನ್ಮವಾಗಿ ಯಥಾಪ್ರಕಾರ ಈ ಜನ್ಮದ ಅನುಭವಗಳನ್ನು ಪಡೆದು ತಾನು ವ್ಯತ್ಯಾಸ ಹೊಂದಿ ಮುಂದೆ ಪುನಃ ಪುನಃ ಜನ್ಮಿಸುತ್ತದೆ. ಪ್ರತಿ ಪುನರ್ಜನ್ಮದಲ್ಲೂ ವ್ಯತ್ಯಾಸ

ವಾಗುತ್ತಾ ಒಂದು ಮನೋಮಯ ಕೋಶ(ಬುದ್ಧಿ)ಕ್ಕೂ ಅನೇಕ ಜನ್ಮಗಳ ಹಿಂದೆ ನೋಡಲು ಕಂಡ ವ್ಯಕ್ತಿಯ ಮನೋಮಯ ಕೋಶಕ್ಕೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ಹೀಗೆ ಸುಮಾರು ಸಾವಿರ ವರ್ಷಗಳ ಹಿಂದೆ ಮೃತನಾದ ಬೇಲಪಾಠಕನ ಆತ್ಮ ಎಂಟು ಒಂಭತ್ತು ಜನ್ಮಗಳ ನಂತರ ಗೋಪಾಲಸಿಂಹನಲ್ಲಿ ಪುನರ್ಜನ್ಮವಾಗಿದ್ದರೂ ಅವರಿಬ್ಬರಿಗೂ ವ್ಯಕ್ತಿ ಸಂಬಂಧ ತೋರಿಸುವ ಪುನಃ ಪ್ರವೃತ್ತಿಗಳು ಕೇವಲ ಅತ್ಯಲ್ಪವಿರಬೇಕು. ಇಬ್ಬರೂ ಬೇರೆ ಬೇರೆ ವಂಶಗಳಲ್ಲಿ ಬಹಳ ದೂರ ಪ್ರಾಂತಗಳಲ್ಲಿ ಹುಟ್ಟಿದ್ದು, ಬೇಲಪಾಠಕನ ಅನ್ನಮಯ ಪ್ರಾಣಮಯ ಕೋಶಗಳಾಗಲಿ ಪಂಚೇಂದ್ರಿಯಗಳಾಗಲಿ ಗೋಪಾಲಸಿಂಹನಿಗೆ ಅನುವಂಶೀಯವಾಗಿ ಬಂದಿರಲಾರವು. ಹೀಗಿದ್ದರೂ ಸಾವಿರ ವರ್ಷಗಳ ಹಿಂದಿನ ಬೇಲಪಾಠಕ ಈಗ ಗೋಪಾಲಸಿಂಹನಾಗಿ ಹುಟ್ಟಿದ್ದನ್ನು 'ಅವಂತಿ' ಕಂಡುಹಿಡಿದಳೆಂದು ಹೇಳುವುದಕ್ಕೆ ಆಧಾರ ಸಾಲದು. ಆದರೂ 'ಅವಂತಿ' ಹಾಗೆ ಹೇಳಿದಳೆಂದು ಸಾಬೀತಾಗಿದೆ. ಇದಕ್ಕೆ ಬೇರೆ ಯಾವುದೋ ಕಾರಣವಿರಬೇಕು. ಇದನ್ನು ಮುಂದೆ ತಿಳಿಯೋಣ.

ಮರಣ ಹೊಂದಿದವರ ಆತ್ಮ ಕಾಲಾನುಕ್ರಮದಲ್ಲಿ ಇನ್ನೊಂದು ಶರೀರದಲ್ಲಿ ಪುನರ್ಜನ್ಮಿಸುವ ಒಂದು ನಿಯಮ ಇರುವಾಗ "ಅವಂತಿ ಮಾತ್ರ ಹಾಗೆ ಬೇರೊಂದು ಜನ್ಮ ತಾಳದೆ ಅದೇ ಪ್ರೇತಸ್ಥಿತಿಯಲ್ಲಿಯೇ ಇಷ್ಟು ಕಾಲ ಇರಲು ಸಾಧ್ಯವಿತ್ತೇ? ಸಾಧ್ಯವಿದ್ದದ್ದರಿಂದಲೆ ಆಕೆ ಪ್ರೇತಸ್ಥಿತಿಯಲ್ಲಿ ಉಳಿದಳು ಎನ್ನುವುದೇ ನಮ್ಮ ಉತ್ತರ. ಯಾವ ಪ್ರಾಕೃತಿಕ ನಿಯಮವಾಗಲಿ ಶೇಕಡ ತೊಂಭತ್ತೊಂಭತ್ತರಷ್ಟು ಸತ್ಯವಾದರೆ ನಿಯಮಕ್ಕೆ ವಿರುದ್ಧವಾಗಿ ಜರುಗುವ ಘಟನೆ (ಅಪವಾದ) ಶೇಕಡ ಒಂದೋ ಅಥವಾ ಇನ್ನೂ ಕಡಿಮೆಯೋ ಇದ್ದೇ ಇರುತ್ತದೆ. ಇದಕ್ಕೆ ಅನೇಕ ಕಾರಣಗಳಿರಬಹುದು. ಅದರ ಬಗ್ಗೆ ಇಲ್ಲಿ ವಾದಿಸುವುದಕ್ಕೆ ವಿರಾಮವಿಲ್ಲ. ಯಾವಾಗ ಹದಿನೆಂಟು ವಯಸ್ಸಿನ ಇನ್ನೂ ಸಂಸಾರ ಸುಖದಲ್ಲಿ ಕಣ್ಣು ತೆರೆಯದ 'ಅವಂತಿ' ಪತಿಯೊಡನೆ ತಾನು ಚಿತೆ ಏರುವ ಸಂದರ್ಭ ಒದಗಿತೋ ಆಗ ಆ ಘಟನೆ ನಡೆಯುವ ಮೊದಲು ಕೆಲವು ಗಂಟೆಗಳ ಕಾಲ ಅದನ್ನೇ ನೆನೆದು ನೆನೆದು ಕರಗುತ್ತಾ ತಾನು ಬೇರೆ ಜನ್ಮ ಹೊಂದದೆ ಪ್ರೇತವಾಗಿಯೇ ಇದ್ದು ಎಷ್ಟು ಕಾಲವಾದರೂ ಆಗಲಿ ತನ್ನ ಮೃತ ಪತಿಯ ಆತ್ಮವನ್ನು ಅರಸುತ್ತಾ ಕಡೆಗೆ ಅವನೊಡನೆ ಸೇರಿಯೇ ಸೇರುವುದಾಗಿ ಖಂಡಿತ ಮಾಡಿ ಆ ಸ್ಥಿತಿಯಲ್ಲಿಯೇ ಗಂಡನ ಮೃತ ಶರೀರದೊಡನೆ ಆಕೆ ಬೆಂದು ಹೋದಳು. ಚಿತೆ ಏರಿ ಬೆಂದು ಹೋಗುವ ಕೆಲವು ಕ್ಷಣಗಳ ಮುಂಚೆಕೂಡ ಇದ್ದ ಆ ನಿರ್ಧಾರ ನಂತರ ಆಕೆಯ ಶರೀರ ಬೆಂದುಹೋಗಿ ಆಕೆಯ ಮನೋಮಯ ಕೋಶ (ಮತ್ತು ಅದರೊಳಗಿರುವ ಆನಂದಮಯ ವಿಜ್ಞಾನಮಯ ಕೋಶಗಳೂ ಸೇರಿ) ಪ್ರೇತವಾಗಿ ಆಕೆಯ ಕಳೇಬರದಿಂದ ನಿಯುಕ್ತ ಕ್ಷಣದಿಂದಲೂ ಅದು 'ಅವಂತಿ' ಪ್ರೇತದ ನಿರ್ಧಾರವಾಯಿತು. ಆ ಪ್ರೇತ ('ಅವಂತಿ') ಆ ಸ್ಥಿತಿಯನ್ನೇ ಬಿಗಿಯಾಗಿ ಹಿಡಿದು ಜನ್ಮಾಂತರವಾಗುವುದನ್ನೊಪ್ಪದೆ ಪ್ರೇತವಾಗಿಯೇ ನಿಂತಿತು. ಹೀಗೆ ಒಂದಲ್ಲ ಒಂದು ಕಾರಣದಿಂದ ಮೃತನಾದ ವ್ಯಕ್ತಿಯ ಆತ್ಮ ಪ್ರೇತಸ್ಥಿತಿಯಲ್ಲೇ ನಿಲ್ಲುವುದನ್ನು ನಮ್ಮ ಭಾರತದಲ್ಲಿ ಮಾತ್ರವಲ್ಲದೆ ಎಲ್ಲಾ ದೇಶಗಳ ಪ್ರಾಚೀನ ಸಂಸ್ಕೃತಿಗಳಲ್ಲೂ ಕಂಡಿದ್ದಾರೆ. ಆದರೆ ಒಟ್ಟಿನಲ್ಲಿ ಎಲ್ಲೆಲ್ಲೂ ಇಂತಹ ಪ್ರೇತಗಳ ಬಗ್ಗೆ ಜನಗಳು ಸ್ವಲ್ಪ ಭಯಭೀತಿಯಿಂದಲೇ ನಡೆದುಕೊಳ್ಳುತ್ತಾರೆ. ಅದಕ್ಕೆ ಕಾರಣವಿಲ್ಲದಿಲ್ಲ.

'ಅವಂತಿ' ಪುನರ್ಜನ್ಮಿಸುತ್ತಿದ್ದ ತನ್ನ ಪತಿಯನ್ನು ಕಾಣಲು ನಮ್ಮ ಕಾಲಮಾನದಲ್ಲಿ ಒಂದು ಸಾವಿರ ವರ್ಷಗಳು ಮತ್ತು ಮಾನವ ಜನ್ಮಮಾನದಲ್ಲಿ ಎಂಟು ಜನ್ಮಗಳು ಹಿಡಿಯಿತೆಂದು ತಿಳಿಯುತ್ತೇವೆ. ಬೇಲಪಾಠಕನ ಆತ್ಮವನ್ನು ಆತನ ಮರು ಜನ್ಮದಲ್ಲೇ 'ಅವಂತಿ' ಯಾಕೆ ಕಾಣಲಿಲ್ಲ? ಪ್ರೇತಸ್ಥಿತಿಯಲ್ಲಿರುವ ಆತ್ಮಕ್ಕೆ ಒಂದು ಮುಖ್ಯ ನಿರ್ಬಂಧವಿರುವುದಾಗಿ ಕಾಣುತ್ತದೆ. ಅದು ಜೀವಂತ ವ್ಯಕ್ತಿಗಳ ಮುಖಚರ್ಯೆ ನೋಡಿ ಅವರನ್ನು ಗುರುತು ಹಿಡಿಯಲಾರದು. ಈ ಕಾರ್ಯ ನಡೆಸಲು ಪ್ರೇತ ಆ ಮನುಷ್ಯನ ಅಂತರಾಳವನ್ನು ಪ್ರವೇಶಿಸಬೇಕು. ಆದರೆ ಆರೋಗ್ಯವಂತನಾದ ಮನುಷ್ಯನ ಅಂತರಾಳವನ್ನು ಪ್ರವೇಶಿಸಲು ಪ್ರೇತಕ್ಕೆ ಸಾಧ್ಯವಿಲ್ಲ. ಕಾರಣಾಂತರದಿಂದ ಮೆದುಳಿನ ವ್ಯಾಧಿ ತಟ್ಟಿದ್ದರೆ ಅಥವಾ

ಆತ ಮೂರ್ಛೆ ರೋಗಕ್ಕೆ ಈಡಾದರೆ, ಅಂತಹವನು ಪ್ರಜ್ಞಾಹೀನನಾಗಿ ಬಿದ್ದಿರುವಾಗ ಮಾತ್ರ ಪ್ರೇತ ಆತನ ಅಂತರಾಳದೊಳಕ್ಕೆ ನುಗ್ಗಿ ಆತ ತಾನು ಹುಡುಕುತ್ತಿರುವ ವ್ಯಕ್ತಿಯೊ ಅಲ್ಲವೊ ಎಂದು ತನಿಖೆ ಮಾಡಬಲ್ಲದು. ಆದ್ದರಿಂದ ತಾನೆ 'ಅವಂತಿ'ಯು ಇಷ್ಟು ಕಾಲವೂ ನೂರಾರು ಇಂತಹ ರೋಗ ಪೀಡಿತರಾದವರ ಒಳಗೆ ಸೇರಿ ಪರೀಕ್ಷಿಸಿ ನಿರಾಶ ಳಾಗಿ ಉಳಿದಿದ್ದರು. ಗೋಪಾಲಸಿಂಹ ಅಕಸ್ಮಾತ್ತಾಗಿ ಸಿಗುವ ವೇಳೆಗೆ ಒಂದು ಸಾವಿರ ವರ್ಷಗಳಾಗಿತ್ತು.

ಆದರೆ ನಾವು ಹಿಂದೆ ಹೇಳಿದ ಪ್ರಕಾರ ಗೋಪಾಲಸಿಂಹನಲ್ಲಿ ಒಂಭತ್ತು ಜನ್ಮಕ್ಕೆ ಹಿಂದಿನ ಚೇಲಪಾರಕನದೆಂದು ಹೇಳುವ ವ್ಯಕ್ತಿತ್ವದ ಅಂಶ ಏನೇನೂ ಇದ್ದಿರಲಾರದು. ಹೀಗಿದ್ದರೂ ಆತನೇ ತನ್ನ ಹಿಂದಿನ ಜನ್ಮದ ಪತಿ ಎಂದು 'ಅವಂತಿ' ಹೇಗೆ ಕಂಡುಹಿಡಿದಳು? ಇದು ಒಂದು ಮುಖ್ಯ ಪ್ರಶ್ನೆ. ಉತ್ತರ ಹೇಳುವುದು ಕಷ್ಟ. ಆದರೂ ಪ್ರಯತ್ನಿಸೋಣ. ಜೀವಂತರಾದ ಶರೀರಸ್ಥರಾದ ಮನುಷ್ಯರು ತಪ್ಪು ಮಾಡುವ ಹಾಗೆ ಅಶರೀರಸ್ಥರಾದ ಪ್ರೇತವೂ ತಪ್ಪು ಮಾಡಬಲ್ಲದು. ಪ್ರೇತವನ್ನು ನಾವು ಯಾವುದೋ ಸರ್ವಜ್ಞನಾದ ದೇವತೆ ಎಂದು ತಿಳಿಯುವುದು ತಪ್ಪು. ಅನ್ನಮಯ ಕೋಶ ಅಥವಾ ಈ ದುರ್ಬಲ ಶರೀರದ ಹೊರೆ ಕಳಚಿರುವುದರಿಂದ ಶರೀರಸ್ಥರಾದ ಜನಗಳಿಗಿಂತ ಪ್ರೇತವು ಎಷ್ಟೋ ವಿಧಗಳಲ್ಲಿ ಶಕ್ತಿಶಾಲಿಯಾಗಿದ್ದರೂ ಮಾನವನಿಗೆ ಸಹಜವಾದ ಬಯಕೆ, ತಪ್ಪು ತಿಳುವಳಿಕೆ, ಭ್ರಮೆ ಇವೆಲ್ಲವೂ ಪ್ರೇತದಲ್ಲಿ ಹಾಗೇ ಉಳಿದಿರುತ್ತವೆ. ಬೆಂಗಳೂರು ಪೇಟೆ ಬೀದಿಯಲ್ಲಿ ನಾವು ಹೋಗುತ್ತಿರುವಾಗ ಎದುರಿಗೆ ಬಂದವರು, ನೋಡಲು ಗೌರವಸ್ಥರೊಬ್ಬರು ನಮ್ಮನ್ನೇ ದುರುಗುಟ್ಟಿಕೊಂಡು ನೋಡಿ ಹತ್ತಿರ ಬಂದು ಮಾತಾಡಿಸಿ "ನೀವೇ ತಾನೆ ಆ ದಿನ, ಇಪ್ಪತ್ತು ವರ್ಷಗಳ ಹಿಂದೆ, ಮಂಗಳೂರಿಗೆ ಬಸ್ಸಿನಲ್ಲಿ ನನ್ನ ಜೊತೆಯಲ್ಲಿ ಪ್ರಯಾಣ ಮಾಡಿದಿರಿ?" ಎಂದರೆ ನಾನು "ನಾನು ಮಂಗಳೂರಿಗೆ ಎಂದೂ ಹೋಗೇ ಇಲ್ಲ" ಎಂದರೂ ಆತ ನನ್ನನ್ನು ಬಿಡದೆ ಮಾತು ಮುಂದುವರಿಸುತ್ತಾ ಬಂದರೆ ನಾನೇನು ಮಾಡಬಲ್ಲೆ ಹೇಳಿ. ಆತ ಹೇಳುತ್ತಿರುವುದನ್ನೆಲ್ಲಾ ಕೇಳಿ ಆಗಾಗ ತಲೆ ತೂಗುತ್ತಾ, ಆತ ನನ್ನನ್ನು ಬಿಟ್ಟು ಹೋಗುವುದನ್ನೇ ಕಾಯಬೇಕು ಅಷ್ಟೇ. ಇದೇ ರೀತಿಯಲ್ಲಿ 'ಅವಂತಿ'ಯು ಬೀಳುವ ರೋಗದಿಂದ ಪ್ರಜ್ಞೆ ಹೀನನಾಗಿ ಬಿದ್ದಿದ್ದ ಗೋಪಾಲಸಿಂಹನ ಅಂತರಾಳವನ್ನು ಪ್ರವೇಶಿಸಿ ತನಿಖೆ ಮಾಡಿ ಯಾವುದೇ ಕಾರಣವ ಸಲುವಾಗಿ ಮುಖ್ಯವಾಗಿ ಒಂದು ಭ್ರಮೆಯಿಂದಾಗಿ ಆತನೇ ತನ್ನ ಪೂರ್ವ ಜನ್ಮದ ಪತಿ ಚೇಲಪಾರಕ ಎಂದು ನಿರ್ಣಯಿಸಿದಳು. ಆ ನಿರ್ಣಯಕ್ಕೆ ಆಧಾರವಿಲ್ಲದಿದ್ದರೂ ತನ್ನ ತಪ್ಪು ನಿರ್ಣಯವನ್ನೇ ನಿಜವೆಂಬ ಭ್ರಮೆಯಿಂದ ಬಿಗಿಯಾಗಿ ಹಿಡಿದು ಆತನನ್ನು ಮುಂದಿನ ಕೆಲವಾರು ವರ್ಷಗಳು ತನ್ನ ಅಂಕೆಯಲ್ಲಿಟ್ಟುಕೊಂಡಿದ್ದಳು.

ಆದರೆ ಇಲ್ಲಿ ಒಂದು ಗಮನಾರ್ಹವಾದ ಅಂಶ ಜ್ಞಾಪಿಸಿಕೊಳ್ಳಬೇಕು. 'ಅವಂತಿ' ಉತ್ತಮ ಶ್ರೋತ್ರಿಯ ಕುಲದಲ್ಲಿ ಹುಟ್ಟಿ ಬೆಳೆದ ಹೆಣ್ಣು. ಬದುಕಿದ್ದಾಗ ಯಾರ ಬಗ್ಗೆಯೂ ಕೆಡುಕಿನ ಭಾವನೆ ಇರಲಿಲ್ಲ. ಸತ್ತು ಪ್ರೇತವಾಗಿ ಉಳಿದ ಮೇಲೂ ಆಕೆ ಗೋಪಾಲಸಿಂಹನಿಗೂ ಆತನ ಬಂಧು ವರ್ಗದವರಿಗೂ ಸಾಕಷ್ಟು ಒತ್ತಾಸೆಯಾಗಿದ್ದು, ಅಪಾಯಕರವಾದ ಸನ್ನಿವೇಶಗಳಲ್ಲಿ ಅವರ ಪ್ರಾಣ ಉಳಿಸಿದಳು. ಆದರೆ ಮರಣ ಸನ್ನಿಹಿತವಾಗುವ ವರೆಗೂ ಕೆಟ್ಟ ಯೋಚನೆಗಳನ್ನಿಟ್ಟುಕೊಂಡು ದ್ವೇಷ ಭಾವನೆಯಿಂದ ಉರಿಯುತ್ತಾ ಇದ್ದು ಪ್ರೇತವಾದವರು ನಿಜವಾಗಿಯೂ ಹಾನಿಕಾರರು. ಅಂತಹ, 'ದೈಯ'ಗಳ ಬಗ್ಗೆಯೂ ನಾವು ಆಗಿಂದಾಗ್ಗೆ ಕೇಳುತ್ತೇವೆ ಅಲ್ಲವೇ! ಬೀಳುವ ರೋಗ ಅಥವಾ ಮನಸ್ಸಿನ ಯಾವುದಾದರೂ ಖಾಯಿಲೆ ಇದ್ದು ಮನಸ್ಸಿನ ರಕ್ಷಣೆ ಕಡಿಮೆಯಾದಾಗ ಅಂತಹ ಮನಸ್ಸನ್ನು ಪುನರ್ಜನ್ಮಿಸದ ದುಃಸ್ವಭಾವದ ಪ್ರೇತ ("ದೆವ್ವ", "ದೈಯ", ಪಿ "ಶಾಚಿ" etc.) ಪ್ರವೇಶಿಸಿ ಆ ವ್ಯಕ್ತಿಯ ಮೂಲಕ ತನ್ನ ಹಿಂದಿನ ಜನ್ಮದ ಆಕಾಂಕ್ಷೆಗಳನ್ನು ತೀರಿಸಿಕೊಳ್ಳಲು ಪ್ರಯತ್ನಪಡಬಹುದು. ಅದನ್ನೇ 'ಹುಚ್ಚು' ರೋಗ ಎಂದೂ ಕರೆಯುವುದುಂಟು. ಆಧುನಿಕ ಮನೋವಿಜ್ಞಾನಿ

ಗಳು ಆತ್ಮವೆಂಬ ತತ್ವಕ್ಕೆ ಮಾನ್ಯತೆ ಕೊಡದಿರುವುದರಿಂದ ಆ ಸ್ಥಿತಿಯಲ್ಲಿ ಮಾನವನ ವ್ಯಕ್ತಿತ್ವ ಎರಡು ಭಾಗವಾಗಿ ಒಡೆದು ("split personality") ಎರಡು ಭಾಗಗಳೂ ಒಂದಕ್ಕೊಂದು ತಿಕ್ಕಾಟ ನಡೆಸುತ್ತಿವೆ ಎಂದು ಹೇಳುವುದುಂಟು. "ಬಿದ್ದರೂ ಮೀಸೆ ಮಣ್ಣಾಗಲಿಲ್ಲ" ಅಷ್ಟೇ.

ಉತ್ತರ ಭಾರತದಲ್ಲಿ, ದಿಲ್ಲಿ ಪ್ರಾಂತದಲ್ಲಿ, ಅಲ್ಲಲ್ಲೇ ಯಾವುದೋ 'ಶೃಂಗಿ' ಋಷಿ ಕುಲದ ಆಶ್ರಮವಿದ್ದ ಸ್ಥಳಗಳನ್ನು ಅಲ್ಲಿಯವರು ಗುರುತಿಸುವುದುಂಟು. ಅಂತಹ ಒಬ್ಬ ಋಷಿ ಪ್ರೇತವಾಗಿ ಉಳಿದು ದನ ಕಾಯುವ ಹುಡುಗನೊಬ್ಬ ಬೀಳುವ ರೋಗಕ್ಕೆ ತುತ್ತಾದ ಹುಡುಗ ಈತನ ಮೇಲೆ ಆಗಾಗ ಬಂದು ಆತನ ಬಾಯಿಯ ಮೂಲಕ ಈಗ ಕಳೆದುಹೋದ (ಲುಪ್ತವಾದ) ಆದರೆ ಹಿಂದೆ ಚಾಲ್ತಿಯಲ್ಲಿದ್ದ ಋಗ್ವೇದ ಮಂತ್ರಗಳನ್ನು ಸುಶ್ರಾವ್ಯವಾಗಿ ಹಾಡುತ್ತಾರೆ. ಅದನ್ನು ಈ ಲೇಖಕನೇ ಸ್ವಂತವಾಗಿ ಕೇಳಿದ್ದಾನೆ. ಕೃಷ್ಣಸ್ವಾಮಿ ನೆಂದು ಪ್ರಸಿದ್ಧಿ ಪಡೆದ ಈ ಯುವಕನು ಹೇಳುವುದನ್ನೆಲ್ಲಾ ಟೇಪ್‌ರಿಕಾರ್ಡ್ ಮಾಡಲಾಗಿದೆ. ಆ ಸ್ಥಿತಿಯಿಂದ ಹೊರಗೆ ಬಂದ ಆ ಹುಡುಗನಿಗೆ ತನ್ನ ಗೊಲ್ಲ ಭಾಷೆ ಬಿಟ್ಟು ಬೇರೇನೂ ತಿಳಿಯದು.

ಕೊನೆಯ ಒಂದು ಮುಖ್ಯ ಪ್ರಶ್ನೆ- 'ಅವಂತಿ' ಆಗಾಗ ಗೋಪಾಲಸಿಂಹನನ್ನು ತನ್ನ ಜೊತೆಯಲ್ಲಿ ವಾಡೆಯ ಮರದ ಕೆಳಗೆ ಬರುವಂತೆ ಏಕೆ ಹೇಳುತ್ತಿದ್ದಳು? 'ಅವಂತಿ' ಲೇಖನದಲ್ಲಿ ಈ ಬಗ್ಗೆ ಎಲ್ಲೂ ಸ್ಪಷ್ಟವಾಗಿ ಕಾರಣ ಹೇಳಿಲ್ಲ. ಮೂಲ ಮರಾಠಿ ಲೇಖನಗಳಲ್ಲೂ ಇದನ್ನು ಹೇಳಿಲ್ಲವೆಂದು ತಿಳಿಯಬೇಕು. ಈ ಪ್ರಶ್ನೆಗೆ ಉತ್ತರವಾಗಿ ಈ ಒಂದೆರಡು ವಿಷಯಗಳನ್ನು ಸೂಚಿಸಬಹುದು:

ಪ್ರಾಯಶಃ ಸಾವಿರ ವರ್ಷಗಳ ಹಿಂದಿನ 'ಅವಂತಿ' ಮತ್ತು ಬೇಲ್‌ಪಾತಕರ ಮಿಲನಗಳು ನಡೆದಿದ್ದ ಸ್ಥಳವೇ ಇದು? ಅಥವಾ ಇನ್ನಾರಾದರೂ ಸತಿಯಾದ ಸ್ಥಳವೋ? ಇಂತಹ ಯಾವ ಒಂದು ಕಾರಣವಿದ್ದು ಪ್ರೇತ 'ಅವಂತಿ'ಯ ಕಣ್ಣಿನಲ್ಲಿ ಆ ಜಾಗ ಪವಿತ್ರತೆಯನ್ನು ಪಡೆದಿರಬೇಕು. ಅಯ್ಯೋ ಪಾಪ. ಶರೀರಸ್ಥಳಾಗಿ ಬದುಕಿದ್ದಾಗ ಸುಖವನ್ನು ಪಡೆಯಲು ಹಂಬಲಿಸುತ್ತಿದ್ದರೂ ಸಾಕಷ್ಟು ಕಾಣದಿದ್ದ ಈಕೆ ತನ್ನ "ಪತಿ" ಗೋಪಾಲಸಿಂಹನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಅಲ್ಲಿ ಆತನೊಡನೆ ತನ್ನ ಪ್ರೇಮಾಕಾಂಕ್ಷೆ ತೀರಿಸಿಕೊಂಡು ತನ್ನ ಪ್ರೇತ-ಜನ್ಮವನ್ನು ಅಲ್ಲಿಗೇ ಮುಕ್ತಾಯಗೊಳಿಸಬೇಕು ಎಂದು ಯೋಚಿಸಿದಳೋ? ಹಾಗೇನಾದರೂ ನಡೆದಿದ್ದರೆ ಅದು ಗೋಪಾಲಸಿಂಹನ ಈ ಜನ್ಮದ ಅಂತ್ಯವೂ ಆಗುತ್ತಿತ್ತು. ಇಂತಹ ಒಂದು ಭಯದಿಂದ ಆತನೂ ಒಪ್ಪಲಿಲ್ಲ. ದೇವರ ಮೇಲೆ ಆಣೆಯಿಟ್ಟು ಇನ್ನು ಮೇಲೆ ಆ ವಿಚಾರ ಎತ್ತಬಾರದು ಎಂದ ಮೇಲೆ ಗರತಿಯಾದ "ಅವಂತಿ" ಪುನಃ ಆ ಮಾತು ಎತ್ತಲಿಲ್ಲ.

ಮಾನವನು ಪ್ರಾಕೃತಿಕ ಜೀವನದಲ್ಲೆ ಮಗ್ನನಾಗಿದ್ದಾಗ, (ಹತ್ತು ಸಾವಿರ ವರ್ಷಗಳಷ್ಟು ಹಿಂದೆ) ಪ್ರೇತ ಪ್ರಪಂಚವು ಶರೀರಸ್ಥ ಮಾನವನ ಪ್ರಪಂಚವೂ ಒಂದಕ್ಕೊಂದು ಅನತಿ ದೂರದಲ್ಲೇ ಇದ್ದು ನಡೆದುಕೊಂಡು ಬರುತ್ತಿದ್ದವು. ಆಸ್ಟ್ರೇಲಿಯದ ಪೂರ್ವನಿವಾಸಿಗಳು ('ಅಬಾರಿಜನ್ಸ್') ತಮ್ಮ ಪೂರ್ವಜರಿದ್ದ ಸ್ಥಳಗಳನ್ನು ಗೊತ್ತಿಟ್ಟುಕೊಂಡು ಅಲ್ಲಿ ಈಗಲೂ ಇರುವ ಅವರ ಪ್ರೇತಗಳೊಡನೆ ಸ್ವಲ್ಪ ಕಾಲ ಇದ್ದು ಬರಲು ಆಗಾಗ ಅಲ್ಲಿಗೆ ಹೋಗಿ ಬರುವುದುಂಟು.

ಆದರೆ ಮಾನವನು ನಾಗರಿಕನಾಗಿ ಹೆಚ್ಚು ಪ್ರಕೃತಿಯಿಂದ ದೂರನಾಗುತ್ತ ಬಂದ ಹಾಗೆಲ್ಲ, ಆತ ಪ್ರೇತ ಪ್ರಪಂಚದಿಂದಲೂ ದೂರವಾಗುತ್ತಿದ್ದಾನೆ. ಈಗ 'ಪ್ರೇತ'ವೆಂಬ ಪದ ಕೇಳಿದರೇನೇ ಭಯಗ್ರಸ್ತನಾಗುತ್ತಾನೆ. ಇಲ್ಲವೇ ಅದರಲ್ಲಿ ಆಧುನಿಕ ವಿದ್ಯಾಪಾರಂಗತರಾದವರು ತಮ್ಮ ವಿದ್ಯೆಗೆ ಶರಣಾಗಿ ಪ್ರೇತ ಪ್ರಪಂಚವೇ ಇಲ್ಲ ಹಾಗೆ ಕಾಣುವುದು ಏನಿದ್ದರೂ ಅದು ಒಂದು ಭ್ರಮೆ, ಮಾನಸಿಕ ರೋಗ ಎನ್ನುತ್ತಾರೆ. ✦

**(ಲೇಖಕರು ಸ್ವತಃ ನಿಷ್ಣಾತ ವಿಜ್ಞಾನಿಯಾಗಿದ್ದು ಭಾರತ ಸರಕಾರದಲ್ಲಿ ಮುಖ್ಯ ಸಸ್ಯವಿಜ್ಞಾನಿಯಾಗಿ ನಿವೃತ್ತರಾಗಿದ್ದಾರೆ.)**



ವೈದಿಕ ಮತ್ತು
ವೈಜ್ಞಾನಿಕ ದೃಷ್ಟಿಗಳು

# ವಿಶ್ವದ ಉತ್ಪತ್ತಿ

**ಎನ್. ಡಿ. ಮೊರಬ**

ಋಗ್ವೇದದ ೧೦ನೆಯ ಮಂಡಲದಲ್ಲಿರುವ ಪುರುಷಸೂಕ್ತ (೯೦ನೆಯ ಸೂಕ್ತ) ಮತ್ತು ನಾಸದೀಯ ಸೂಕ್ತ (೧೯ನೆಯ ಸೂಕ್ತ) ಗಳಲ್ಲಿ ವಿಶ್ವದ ಉತ್ಪತ್ತಿಯು ಹೇಗಾಯಿತು ಎಂಬುದರ ಬಗ್ಗೆ ವಿಚಾರ ಮಾಡಲಾಗಿದೆ. ಪುರುಷಸೂಕ್ತದಲ್ಲಿ ಪುರುಷ(ಪರಮಾತ್ಮ)ನೇ ವಿಶ್ವದ ಮೂಲನೆಂದೂ, ಅವನು ವಿಶ್ವವನ್ನು ವ್ಯಾಪಿಸಿ ಅದಕ್ಕಿಂತಲೂ ಹತ್ತು ಅಂಗುಲ ಹೆಚ್ಚಾಗಿದ್ದನೆಂದೂ ವರ್ಣಿಸಿ, ದೇವತೆಗಳು ಯಜ್ಞದಲ್ಲಿ ಈ ಪುರುಷನನ್ನು ಸಮರ್ಪಿಸಿದರೆಂದೂ, ಅದರಿಂದಲೇ ವಿಶ್ವವು ಉತ್ಪನ್ನವಾಯಿತೆಂದೂ ಹೇಳಿದೆ.

ಇಂತಹ ವಿಚಾರವು ಪುರುಷ ಅಥವಾ ಪರಮಾತ್ಮನಿಂದಲೇ ವಿಶ್ವವು ಉಂಟಾಗಿದೆ ಎಂದು ಹೇಳುವದೇ ಹೊರತು ವಿಶೇಷವನ್ನೇನೂ ಹೇಳುವದಿಲ್ಲ. ಆದರೆ ನಾಸದೀಯ ಸೂಕ್ತವು ಮಾತ್ರ ಹಿಂದಿನ ಋಷಿಗಳು ಸಹಿತ ವಿಶ್ವ ತರ್ಕಬದ್ಧವಾಗಿ, ಧೈರ್ಯದಿಂದ ವಿಚಾರಿಸುತ್ತಿದ್ದರೆಂದು ಸ್ಪಷ್ಟಪಡಿಸುತ್ತದೆ. ಇಂದಿನ ವಿಜ್ಞಾನಿಗಳಂತೆ ಸಪ್ರಮಾಣವಾಗಿ, ಸೂಕ್ಷ್ಮವಾಗಿ ಅವರು ವಿಚಾರಿಸದಿದ್ದರೂ, ವಿಶ್ವೋತ್ಪತ್ತಿಯ ಬಗ್ಗೆ ಅವರ ವಿಚಾರಗಳ ಬಾಹ್ಯ ರೇಷೆ ವಿಜ್ಞಾನಿಗಳ ವಿಚಾರದಂತೆಯೇ ಗೋಚರಿಸುತ್ತದೆ. ಎರಡೂ ವಿಚಾರಗಳನ್ನು ತುಲನೆ ಮಾಡುವದು ಯುಕ್ತಿಯುಕ್ತವಲ್ಲದಿದ್ದರೂ, ಅವೆರಡನ್ನೂ ತಿಳಿದಿರುವದು ಯೋಗ್ಯವೇ ಸರಿ.

ವಿಶ್ವದ ಉತ್ಪತ್ತಿಯ ಬಗ್ಗೆ ಕುತೂಹಲಿಗಳಾದ ಋಷಿಗಳು ರಚಿಸಿದ ಈ ನಾಸದೀಯ ಸೂಕ್ತದಲ್ಲಿ ಕೇವಲ ಮಂತ್ರ(ನುಡಿ)ಗಳಿವೆ. ಅವುಗಳ ಅರ್ಥ ಈ ರೀತಿಯಾಗಿದೆ:

"(ವಿಶ್ವೋತ್ಪತ್ತಿಯ ಪೂರ್ವದಲ್ಲಿ) ಸತ್ ಆಗಲಿ, ಅಸತ್ ಆಗಲಿ ಇರಲಿಲ್ಲ. ಆಗ ಹವೆಯಾಗಲಿ, ಆಕಾಶವಾಗಲಿ ಇರಲಿಲ್ಲ. ಹಾಗಾದರೆ ಏನಿದ್ದಿರಬಹುದು? ಎಲ್ಲಿ ಇದ್ದಿರಬಹುದು ? ಎಲ್ಲೆಲ್ಲಿಯೂ ಆಗ ನೀರಿದ್ದಿರಬಹುದೇ?"

"ಆಗ ಮೃತ್ಯುವಾಗಲಿ ಅಮೃತತ್ವವಾಗಲಿ ಇರಲಿಲ್ಲ. ದಿನ ರಾತ್ರಿಗಳೂ ಇರಲಿಲ್ಲ. ಸ್ವಶಕ್ತಿಯಿಂದ ಆತ್ಮನೊಬ್ಬನೆ ಇದ್ದನು."

"ಆದಿಯಲ್ಲಿ ಅಂಧಃಕಾರವು ಅಂಧಃಕಾರದಿಂದ ಆವೃತವಾಗಿತ್ತು. ಇದೆಲ್ಲವೂ ಜಲದಿಂದ ಆವೃತವಾಗಿತ್ತು. ಆಗ ಯಾವುದು ಅವ್ಯಕ್ತವಾಗಿದ್ದಿತೋ ಅದು ಉಷ್ಣತೆಯ * (ತಪಸಃ) ಪ್ರಭಾವದಿಂದ ವ್ಯಕ್ತವಾಯಿತು."

"ಅದರಲ್ಲಿ ಇಚ್ಛೆಯು ಉಂಟಾಯಿತು. ಅದೇ ಮನಸ್ಸಿನ ಮೂಲವು. ಋಷಿಗಳು ಬುದ್ಧಿಯಿಂದ ತಮ್ಮ ಹೃದಯದಲ್ಲಿ ಹುಡುಕಿ ಅವ್ಯಕ್ತ ಮತ್ತು ವ್ಯಕ್ತಗಳ ಸಂಬಂಧವನ್ನು ಕಂಡುಕೊಂಡಿದ್ದಾರೆ."

"ಉತ್ಪತ್ತಿಯ ಸುತ್ತಲೂ ಆರಂಭವಾಯಿತು. ಶಕ್ತಿ*(ಸ್ವಧಾ)ಯು ಮೇಲ್ಗಡೆ ಪ್ರೇರಣೆ *

---

* ಈ ಶಬ್ದಗಳನ್ನು ಆರ್ಥರ್ ಮ್ಯಾಕ್ ಡೊನೆಲ್ಲರ ಭಾಷಾಂತರಕ್ಕನುಗುಣವಾಗಿ ತೆಗೆದುಕೊಳ್ಳಲಾಗಿದೆ.

(ಪ್ರಯುತಿಃ) ಇತ್ತು. ಇವುಗಳಿಂದಲೇ ಉತ್ಪತ್ತಿ ಆರಂಭವಾಯಿತು.

"(ಆದರೆ) ನಿಜವನ್ನು ಅರಿತವರಾರು? ಇದು ಎಲ್ಲಿಂದ, ಏಂದು ಉತ್ಪನ್ನವಾಯಿತೆಂದು ಯಾರಾದರೂ ಹೇಳಬಲ್ಲರೇ? ಈ ವಿಶ್ವದ ಉತ್ಪತ್ತಿಯ ನಂತರವೇ ದೇವತೆಗಳು ಹುಟ್ಟಿ ದರಲ್ಲವೇ? ಆದ್ದರಿಂದ ದೇವತೆಗಳಿಗಾದರೂ ಇದು ಹೇಗೆ ಗೊತ್ತಿರಲು ಸಾಧ್ಯ?"

"ಈ ವಿಶ್ವವು ಎಲ್ಲಿಂದ ಹುಟ್ಟಿತು? ಅವನು (ದೇವನು) ಸೃಷ್ಟಿಸಿದನೇ ಅಥವಾ ಇಲ್ಲವೇ? ದಿವ್ಯಧಾಮದಲ್ಲಿರುವ ಆ ಪರಮಾತ್ಮನಿಗೊಬ್ಬನಿಗೆ ಇದು ಗೊತ್ತಿರಬೇಕು, ಇಲ್ಲವೆ ಅವನಿಗೂ ಗೊತ್ತಿರಲಿಕ್ಕಿಲ್ಲ."

ಈ ರೀತಿಯಾಗಿ ವೇದ ಋಷಿಗಳು ಸೃಷ್ಟಿಯ ಉತ್ಪತ್ತಿಯ ನಿಗೂಢತೆಯನ್ನೂ ಈ ರಹಸ್ಯ ತಿಳಿಯುವ ಅಸಾಧ್ಯತೆಯನ್ನೂ ಎತ್ತಿ ತೋರಿ- ಸಿದ್ದಾರೆ. ಅವರಿಗೆ ಈ ರಹಸ್ಯ ರಹಸ್ಯ ವಾಗಿಯೇ ಉಳಿದಿರುವದು ಈ ಸೂಕ್ತದಿಂದ ವ್ಯಕ್ತವಾಗುತ್ತದೆ.

ಸೂಕ್ಷ್ಮ ಸಾಧನ ಸಲಕರಣೆಗಳಿಂದ ಮಾಡಿದ ಅವಲೋಕನದಿಂದಲೂ, ನಿಸರ್ಗ ನಿಯಮಗಳ ನಿಶ್ಚಿತ ಜ್ಞಾನದಿಂದಲೂ, ಗಣಿತದ ಆಧಾರ ದಿಂದಲೂ ಇಂದಿನ ವಿಜ್ಞಾನಿಗಳು ವಿಶ್ವದ ಉತ್ಪತ್ತಿಯ ರಹಸ್ಯಭೇದ ಮಾಡಲು ಪ್ರಯತ್ನಪಟ್ಟಿದ್ದಾರೆ. ಆದರೆ ಇದರಲ್ಲಿ ಇನ್ನೂ ಸಂಪೂರ್ಣ ಸಾಫಲ್ಯವನ್ನು ಅವರು ಪಡೆದಿಲ್ಲ. ಕಾರ್ಲ್ ಸಗಾನ್ ಎಂಬ ಅಮೇರಿಕನ್ ಖಗೋಲ ಶಾಸ್ತ್ರಜ್ಞನು ತನ್ನ "ದಿ ಕಾಸ್ಮಿಕ್ ಕನೆಕ್ಶನ್" ಎಂಬ ಪುಸ್ತಕದಲ್ಲಿ ವಿಶ್ವದ ಉತ್ಕ್ರಾಂತಿಯನ್ನು ವಿಜ್ಞಾನ ರೀತ್ಯಾ ಬಹು ಮನೋರಂಜಕವಾಗಿ ಹೇಳಿದ್ದಾನೆ. ಅದನ್ನೇ ಸಂಕ್ಷೇಪವಾಗಿ, ಹೀಗೆ ನಿರೂಪಿಸಬಹುದು:

"ಸುಮಾರು ಹತ್ತು ಅಥವಾ ಹದಿನೈದು ಶತಕೋಟಿ ವರುಷಗಳ ಹಿಂದೆ ಈ ವಿಶ್ವಕ್ಕೆ ಯಾವ ಆಕಾರವೂ ಇರಲಿಲ್ಲ. ನಕ್ಷತ್ರಗಳಾಗಲಿ ಗ್ರಹಗಳಾಗಲಿ ಇರಲಿಲ್ಲ. ಜೀವಿಗಳಂತೂ ಇರಲೇ ಇಲ್ಲ. ವಿಶ್ವವನ್ನು ಕತ್ತಲೆಯು ಆವರಿಸಿತ್ತು. ಜಲಜನಕ ಮತ್ತು ಹೀಲಿಯಂ ವಾಯುಗಳು ಮಾತ್ರ ಎಲ್ಲೆಡೆ ಇದ್ದವು. ಬ್ರಹ್ಮಾಂಡದ† ಮಹಾ ಸ್ಫೋಟವು ಆಗ ತಾನೆ ಆಗಿ ಆ ಎರಡೂ ವಾಯುಗಳು ಸುತ್ತಲೂ ಹರಡುತ್ತಿದ್ದವು. ಅವುಗಳ ಹರಡುವಿಕೆ ಎಲ್ಲೆಡೆ ಸಮಾನವಾಗಿರದೆ, ಕೆಲವೆಡೆಗಳಲ್ಲಿ ಅವುಗಳ ಪ್ರಮಾಣ ಹೆಚ್ಚಾಗಿದ್ದಿತು. ಇಂತಹ ವಾಯುವಿನ ರಾಶಿಯು ತನ್ನ ಗುರುತ್ವ ಬಲದಿಂದ ಸುತ್ತಲಿನ ವಾಯು ವನ್ನು ಎಳೆದುಕೊಂಡು ಇನ್ನೂ ದೊಡ್ಡ ದಾಯಿತು. ಗುರುತ್ವ ಬಲ ಮತ್ತು ಭೌತಿಕ್ಯತೆಯ ಕಾರಣ ಈ ರಾಶಿಯು ಸಂಕುಚಿತ ವಾಗುತ್ತ, ಸಾಂದ್ರವಾಗುತ್ತ ತನ್ನ ಅಕ್ಷದ ಸುತ್ತ ವೇಗವಾಗಿ ತಿರುಗಹತ್ತಿತು. ಈ ಅತಿ- ಕಾಯದ ವಾಯುಗೋಲದಲ್ಲಿ ಅಲ್ಲಲ್ಲಿ ಅತಿ ಸಾಂದ್ರವಾದ ಕೋಟ್ಯನುಕೋಟಿ ಗೋಲಗಳು ಉಂಟಾದವು. ಈ ಗೋಲಗಳು ತಮ್ಮ ಅಕ್ಷದ ಸುತ್ತ ತಿರುಗುತ್ತಲೂ, ಸಂಕುಚಿತಗೊಳ್ಳುತ್ತಲೂ ಹೋದವು"

"ಸಂಕೋಚನೆಯು ಹೆಚ್ಚಾದಂತೆ ಗೋಲದ ಅಂತರ್ಭಾಗದ ಉಷ್ಣತೆಯು ಹೆಚ್ಚುತ್ತ ಹೋಗಿ, ಕೊನೆಗೆ ಜಲಜನಕದ ಪರಮಾಣುಗಳ ಸಂಯೋಗ ಆರಂಭವಾಯಿತು. ಅತಿ ಸರಳ ಪರಮಾಣುವಾದ ಜಲಜನಕದ ಸಂಯೋಗದ ಫಲವಾಗಿ ಹೀಲಿ ಯಮ್ ಉಂಟಾಯಿತು. ಈ ಸಂಯೋಗ ಕ್ರಿಯೆ ಯಲ್ಲಿ ಶಕ್ತಿಯು ಹೊರಹೊಮ್ಮಿತು. (ಜಲ ಜನಕದಿಂದ ಉಂಟಾದ ಹೀಲಿಯಮ್ಮಿನ ದ್ರವ್ಯ ರಾಶಿಯು ಜಲಜನಕಕ್ಕಿಂತ ಕಡಿಮೆಯಾಗಿರುತ್ತದೆ.

---

† **ಮೊದಲು ವಿಶ್ವದಲ್ಲಿದ್ದ ಎಲ್ಲ ಜಲಜನಕ, ಹೀಲಿಯಮ್‌ಗಳು ಒಂದು ಮಹಾಗೋಲಾ ಕಾರದಲ್ಲಿ ಇದ್ದವೆಂದೂ ಯಾವದೋ ಕಾರಣದಿಂದ ಆ ಮಹಾಗೋಲವು ಸ್ಫೋಟ ಗೊಂಡು ಜಲಜನಕ, ಹೀಲಿಯಮ್‌ಗಳು ಸುತ್ತಲೂ ಹರಡಹತ್ತಿದವೆಂದು ವಿಜ್ಞಾನಿ ಗಳು ಅಭಿಪ್ರಾಯಪಡುತ್ತಾರೆ. ಸ್ಫೋಟಕ್ಕೆ Big Bang ಎಂದೂ ಕರೆಯುವರು.**

ಈ ಕಡಿಮೆಯಾದ ದ್ರವ್ಯವೇ ಶಕ್ತಿಯಾಗಿ ಪರಿವರ್ತಿತವಾಗುತ್ತದೆ.) ಶಕ್ತಿಯು ಪ್ರಕಾಶ ಮತ್ತು ಉಷ್ಣತೆಯ ರೂಪದಲ್ಲಿ ಗೋಲದಿಂದ ಹೊರಬಂದು ಅಂತರಾಳದಲ್ಲಿ ಪ್ರಸಾರವಾಯಿತು. ಹೀಗೆ ನಕ್ಷತ್ರಗಳು ಜನ್ಮತಾಳಿದವು. ಆಗ ವಿಶ್ವದಲ್ಲಿ ಕತ್ತಲೆಯು ಹರಿದು ಬೆಳಕು ಮೂಡಿತು."

"ನಕ್ಷತ್ರಗಳ ಒಳಗೆ ಪರಮಾಣು ಸಂಯೋಗ ಕ್ರಿಯೆ ಮುಂದುವರೆದು ಹೀಲಿಯಮ್ಮಿನಿಂದ ಇಂಗಾಲ, ಇಂಗಾಲದಿಂದ ಆಮ್ಲಜನಕ ಇತ್ಯಾದಿ ಭಾರವಾದ ಮೂಲವಸ್ತುಗಳು ಉಂಟಾದವು. ಈ ನಕ್ಷತ್ರಗಳ ಸುತ್ತ ಚಿಕ್ಕ ಚಿಕ್ಕ ಗೋಲಗಳು ಉಂಟಾದವು. ಈ ಗೋಲಗಳು ಕೆಲ ನಕ್ಷತ್ರಗಳಿಂದ ಹೊರದೂಡಲ್ಪಟ್ಟ ವಸ್ತುವನ್ನೂ ಸ್ಫೋಟಗೊಂಡ ನಕ್ಷತ್ರಗಳ ಅವಶೇಷಗಳನ್ನೂ ಒಳಗೊಂಡ ಮೂಲಕ ಭಾರವಾದ ಮೂಲ ವಸ್ತುಗಳನ್ನು ಹೊಂದಿದ್ದವು. ಇವು ಚಿಕ್ಕವಾದ ಮೂಲಕ ಇವುಗಳಲ್ಲಿ ಪರಮಾಣು ಸಂಯೋಗ ಕ್ರಿಯೆ ಆರಂಭವಾಗಲಿಲ್ಲ. ಇವೇ ಗ್ರಹಗಳು. ಭೂಮಿಯು ಇಂತಹ ಒಂದು ಗ್ರಹ. ಸೂರ್ಯನೇ ನಕ್ಷತ್ರ."

"ಗ್ರಹದ ಮೇಲಿನ ವಾಯು ಘನೀಭವನ ಹೊಂದಿ ಸಾಗರಗಳಾದವು. ಆಗ ವಾತಾವರಣವು ಮಿಥೇನ್, ಅಮೋನಿಯಾ, ಹೈಡ್ರೋಜನ್ ಸಲ್ಫೈಡ್, ನೀರಾವಿ, ಜಲಜನಕಗಳಿಂದ ಕೂಡಿತ್ತು. ನಕ್ಷತ್ರದ (ಸೂರ್ಯನ) ಪ್ರಕಾಶ ಮತ್ತು ಉಷ್ಣತೆ ಇಂತಹ ವಾತಾವರಣದ ಮೇಲೆ ಬಿದ್ದಾಗ ಸಂಕೀರ್ಣ ಅಣುಗಳು ಉಂಟಾದವು. ಒಂದಾನೊಂದು ದಿನ ತನ್ನಂತಹುದನ್ನೇ ಉತ್ಪಾದಿಸಬಲ್ಲ ಸಂಕೀರ್ಣ ಅಣುವು ಉಂಟಾಯಿತು. ಇಂತಹ ಅಣುಗಳಿಗೆ ಆಹಾರವು ವಾತಾವರಣದಲ್ಲಿ ನಕ್ಷತ್ರಗಳ ಪ್ರಕಾಶದಿಂದಲೂ, ಮಿಂಚಿನಿಂದಲೂ ಉತ್ಪತ್ತಿಯಾಗುತ್ತಿತ್ತು. ಇದರೊಂದಿಗೆ ಆಮ್ಲಜನಕವೂ ವಾತಾವರಣದಲ್ಲಿ ಕಾಣಿಸಿಕೊಂಡಿತು. ಸಂಕೀರ್ಣ ಅಣುಗಳನ್ನು ಸರಳ ಅಣುಗಳನ್ನಾಗಿ ಪರಿವರ್ತಿಸಬಲ್ಲ ಈ ಆಮ್ಲಜನಕವು ಅಣುಜೀವಿಗಳಿಗೆ ವಿನಾಶಪ್ರಾಯವಾಗಿತ್ತು. ಆದರೆ ಜೀವಿಗಳು ನಿಸರ್ಗದ ಈ ಪ್ರತಿರೋಧವನ್ನು ಚೆನ್ನಾಗಿ ಎದುರಿಸಿದವು. ಕೆಲ ಜೀವಿಗಳು ಆಮ್ಲಜನಕ ಕಡಿಮೆ ಇರುವ ಜಲದಲ್ಲಿ ಸೇರಿಕೊಂಡವು. ಕೆಲವಂತೂ ಈ ಆಮ್ಲಜನಕವನ್ನು ತಮ್ಮ ಜೀವ ದ್ರವ್ಯದ ರಚನೆಗಾಗಿ ಉಪಯೋಗಿಸಹತ್ತಿದವು. ಹೀಗೆ ಜೀವಿಯ ಜೀವಿಸುವ ಇಚ್ಛೆಯಿಂದ ಉತ್ಕ್ರಾಂತಿ ಆರಂಭವಾಯಿತು."

"ಹೀಗೆಯೇ ಒಂದಾನೊಂದು ದಿನ, ಅತಿ ಸಂಕೀರ್ಣ ಅಣು ರಚನೆಯುಳ್ಳ ಜೀವಜಾತಿಯೊಂದು ಭೂ ಗ್ರಹದ ಮೇಲೆ ಕಾಣಿಸಿಕೊಂಡಿತು. ಈ ಜೀವಿಯು ತನ್ನ ಉತ್ಕ್ರಾಂತಿಯ ಬಗ್ಗೆ, ತಾನು ನಕ್ಷತ್ರ ದ್ರವ್ಯದಿಂದ ಉಂಟಾದ ರೀತಿಯ ಬಗ್ಗೆ ವಿಚಾರಿಸಬಲ್ಲದ್ದಾಗಿತ್ತು. ತನ್ನ ನಿಗೂಢವಾದ ಭವಿಷ್ಯವನ್ನೂ ತಿಳಿಯಬಯಸಿತು. ಈ ಜೀವಿಯೇ ಮಾನವ. ನಕ್ಷತ್ರಗಳಿಂದ ಉಂಟಾದ ಅವನು ನಕ್ಷತ್ರಗಳನ್ನು ಮುಟ್ಟಬಯಸಿದನು."

ಹೀಗೆ ಅತಿ ಸರಳವಾದ ಜಲಜನಕದಿಂದ ಆರಂಭಿಸಿ ಇಂದಿನ ವಿಚಿತ್ರ ವಿಶ್ವ ರಚಿತವಾಗಿದೆ.

ಪರಮಾತ್ಮನಿಂದಲೇ ಮಾಯಾಮಯ ವಿಶ್ವವು ಆಕಾರ ತಾಳಿದೆಂದು ಋಷಿಗಳು ತಿಳಿದುಕೊಂಡ ರಾದರೂ, ವಿಶ್ವಕ್ಕೆ ಮೂಲನಾದ ಪರಮಾತ್ಮನು ಹೇಗಾದನೆಂದು ಋಷಿಗಳು ತಿಳಿಯದೇ ಹೋದರು. ಜಲಜನಕವೇ ಸಕಲ ವಿಶ್ವರಚನೆಗೆ ಮೂಲವಸ್ತುವೆಂದೂ ವಿಜ್ಞಾನಿಗಳಿಗೆ ಗೊತ್ತಿದ್ದರೂ, ಆ ಜಲಜನಕವು ಹೇಗೆ ಉಂಟಾಯಿತು. ಎಂದು ಅವರು ಇನ್ನೂ ಉತ್ತರಿಸದಾಗಿದ್ದಾರೆ. ಒಟ್ಟಿನಲ್ಲಿ ವಿಶ್ವದ ಉತ್ಪತ್ತಿಯು ಇನ್ನೂ ರಹಸ್ಯವಾಗಿಯೇ ಉಳಿದಿದೆ. ◆



**ಶಬ್ದಗಳು ಎಲೆಗಳಿದ್ದಂತೆ. ಎಲೆಗಳು ಬಹಳವಿದ್ದಾಗ ವಿವೇಕವೆಂಬ ಹಣ್ಣುಗಳು ಅವುಗಳಲ್ಲೇ ಹುದುಗಿದ್ದುಕೊಂಡು ಅಪರೂಪಕ್ಕೊಮ್ಮೆ ಕಣ್ಣಿಗೆ ಬೀಳುತ್ತವೆ.**

**–ಅಲೆಕ್ಸಾಂಡರ್ ಪೋಪ್**

ಕೆ. ಚಂದ್ರಮೌಳಿ

# ಗಯಾದಲ್ಲಿ ಮದ್ರಾಸಿ ಪಂಡಾ

ಹೋಟೆಲಿಗೆ ಹೋಗಿ, "ಏನಪ್ಪಾ ತಿಂಡಿ?" ಅಂದಾಗ ಮಾಣಿ ಒಂದೇ ಉಸಿರಿನಲ್ಲಿ, ಇಡ್ಲಿ, ವಡೆ, ದೋಸೆ, ಪಕೋಡಾ, ಎನ್ನುತ್ತಾನೆ. "ಇನ್ನೇನು?" ಎಂದಾಗ ಬೇರೆಯ ಒಂದೆರಡು ಹೆಸರು ಹೇಳ್ತಾನೆ. ಇದೇ ರೀತಿ ಯಾವುದೇ ರಾಜ್ಯದ ಪ್ರವಾಸಿ ಸ್ಥಾನಗಳ ಬಗ್ಗೆ ಕೇಳಿದಾಗಲೂ ಹೊದಲು ಬರುವುದು ಒಂದೆರಡು ಮುಖ್ಯಸ್ಥಳಗಳ ಹೆಸರುಗಳು. ನಿಮಗೆ ಇನ್ನೂ ಮರು-ಸೊತ್ತಿದ್ದು ದುಡ್ಡೂ ಇದ್ದರೆ ಬೇರೆಯ ಜಾಗಗಳ ಹೆಸರೂ ಆಮೇಲೆ ಬರುತ್ತವೆ. ಬಿಹಾರ ಬಗ್ಗೆ ಕೇಳಿದಾಗ ಮೊದಲು ಬರುವ ಹೆಸರುಗಳು ಗಯಾ. ರಾಜಗೀರ್, ನಲಂದಾ. ಪಟನಾ ಇನ್ನೂ ಯಾವ ಸ್ಥಳಗಳನ್ನು ನೋಡಬಹುದು. ಅಂದಾಗ ನೇತಾರ ಹಟ್ಸ ಸೂರ್ಯೋದಯ, ಪಾರಸ್‌ನಾಥ ಬೆಟ್ಟದ ತೀರ್ಥಂಕರ ಜಾಗ, ಧನಬಾದಿನ ಕಲ್ಲಿದ್ದಲಿ ಗಣಿಗಳು, ಜಮಶೇಡ್‌ಪುರದ ಉಕ್ಕಿನ ಕಾರಖಾನೆ ರಾಂಚಿಯ ಹತ್ತಿರದ ಜೋನಾ ಹುಂಡ್ರು ಜಲಪಾತಗಳು, ಡೇರಿ ಆನ್ ಸೋನ್‌ನ ಸೋನ್‌ನದಿ ಮತ್ತು ಅದರ ಮೇಲಿನ ಅತಿ ಉದ್ದದ ಸೇತುವೆ, ಹಜಾರಿಬಾಗಿನ ವನ್ಯಮೃಗ ತಾಣ...ಹೀಗೆ ಉದ್ದಕ್ಕೆ ಬೇರೆ ಬೇರೆ ಜಾಗಗಳ ಹೆಸರುಗಳು ಉರುಳಿ ಬರುತ್ತವೆ. ಈ ಅನೇಕವನ್ನು ಬಿಹಾರದಲ್ಲಿ ಅನೇಕ ವರ್ಷ ಕಳೆದಾಗ ನೋಡಲು ಸಾಧ್ಯ. ಸುಂಟರಗಾಳಿಯಂತೆ ದೇಶ ಸುತ್ತಲು ಹೊರಟ ಯಾತ್ರಿಕನಿಗೆ ಗಯಾ, ರಾಜಗೇರ್, ನಲಂದಾ, ಪಟನಾ ಇವೇ ಸಾಕು.

ಗಯಾ ರೇಲ್ವೆ ನಿಲ್ದಾಣದಲ್ಲಿ ಇಳಿದ ತಕ್ಷಣ ನಾಲ್ಕಾರು ಪಂಡಾಗಳು ನನ್ನನ್ನು ಮುತ್ತಿದರು. ಪ್ರತಿಯೊಬ್ಬರಿಗೂ ನನ್ನ ಶ್ರಾದ್ಧ ಮಾಡುವ ಕಾತುರ. ಏನು ನನ್ನ ಶ್ರಾದ್ಧ ಮಾಡ್ತೀರಾ? ಅಂದಾಗ, "ಇಲ್ಲಾ ಇಲ್ಲಾ ಸಾಬ್ ನಿಮ್ಮ..." ಅವರ ಉತ್ತರ ಪೂರ್ತಿ ಆಗುವದರೊಳಗೇ ಬಾಯಿ ಹಾಕಿ, "ನನ್ನ ತಂದೆ ತಾಯಿ ಇನ್ನೂ ಇದ್ದಾರೆ," ಅಂದೆ ಅವರಲ್ಲೊಬ್ಬ ಪಂಡಾ ಗೈಡುಗಳಲ್ಲಿ ಎಲ್ಲರನ್ನು ದೂರ ಓಡಿಸಿ ಒಬ್ಬನೇ ನನ್ನನ್ನು ಹಿಡಿದ. "ಹಾಗಲ್ಲ, ಇಲ್ಲಿ ಪಿತಾಮಹರಿಗೆ ಹಿಂದಿನವರಿಗೆ ಯಾರಿಗೆ ಬೇಕಾದರೂ ಶ್ರಾದ್ಧ ಮಾಡಬಹುದು; ಮಾಡಬೇಕು ಮಾಡಿದರಿಗೆ ಅವರಿಗೆ ಶಾಂತಿ. ನಿಮಗೆ ಪುಣ್ಯ," ಎಂದ. "ವಿಷ್ಣುಪಾದದಲ್ಲಿ– ಆ ದೇವಸ್ಥಾನದಲ್ಲಿ ಶ್ರಾದ್ಧ–ಮಾಡಿದರೆ ಖಂಡಿತಾ ವಿಷ್ಣುಪಾದ ಸೇರುತ್ತಾರೆ," ಎಂದು ಒತ್ತಿಹೇಳಿದ. ರೇಗಿದೆ. ಬೈದೆ. ಎಲಾ ಇವನ ಅನ್ನುವ ಕನ್ನಡ ತಾನೇ ತಾನಾಗಿಯೆ ಬಂತು...ಇದುವರೆಗೂ ಸ್ವಚ್ಛ ಹಿಂದಿಯಲ್ಲಿ ಮಾತಾಡುತ್ತಿದ್ದ ಭೂಪ ನನ್ನ ಕನ್ನಡ ಕೇಳಿದ ತಕ್ಷಣ, "ನೀವು ಮದ್ರಾ

ಸೀನಾ ಸಾರ್?" ಎಂದು ತಮಿಳಿನಲ್ಲಿ ಶುರು ಮಾಡಿದ. ಇನ್ನೂ ರೇಗಿತು. ತೆಲುಂಗುನಾ? ಎಂದು ತೆಲಗು ಮಾತಾಡಿದ. ಅಲ್ಲ ಅಂದೆ ಆದರೆ ಕನ್ನಡ ಮಾತ್ರ ಅವನಿಗೆ ಬರುತ್ತಿರಲಿಲ್ಲ. ಇಲ್ಲೂ ನೋಡಿ ದೂರದ ಗಯೆಯಲ್ಲೂ ಪಕ್ಷಪಾತ. ಹಹ್ಹಾ ನಾನು ಮದ್ರಾಸಿ ಅಂದೆ! ಈ ಪಿಳ್ಳು ಜುಟ್ಟಿರುವ ಪಂಡಾ ಎಂತಹ ಮದ್ರಾಸಿ ಎಂದು ಆಶ್ಚರ್ಯ ಆಯಿತು. "ಇಲ್ಲಾ ಇಲ್ಲಾ ಸಾರ್, ನನ್ನ ಹೆಸರು ದುರ್ಗಾನಂದ ಮದ್ರಾಸಿ ಅಂತ," ಎಂದು ವಿಸಿಟಿಂಗ್ ಕಾರ್ಡ್ ಕೊಟ್ಟ! ಅರೇ ಮದ್ರಾಸಿ ಪಾಪಾ ಅಂಗ್ರೇಜಿ ಎಂದು ಮನಸ್ಸಿನಲ್ಲೆ ಅಂದುಕೊಂಡು ಆ ಮದ್ರಾಸೀ ಎಂಬ ಅಡ್ಡ ಹೆಸರು ಬರುವ ಕಾರಣ ಕೇಳಿದೆ. ಇಷ್ಟು ಹೊತ್ತಿಗೆ ರೇಲ್ವೆ ನಿಲ್ದಾಣದಿಂದ ಹೊರಗೆ ರಿಕ್ಷಾ ನಿಲ್ಲುವೆಡೆ ಬಂದಿದ್ದೆವು." ಸಾರ್, ನಮ್ಮಪ್ಪ ನಮ್ಮ ತಾತ ಎಲ್ಲರೂ ಇಲ್ಲಿಗೆ ಬರುವ ಎಲ್ಲಾ ಮದ್ರಾಸಿಗಳ ಶ್ರಾದ್ಧಾನೂ ಮಾಡ್ತಾ ಬಂದಿದ್ದರು. ಆದ್ದರಿಂದ ಈ ಮದ್ರಾಸಿ ಎನ್ನುವ ಅಡ್ಡಹೆಸರು ಬಂದುಬಿಟ್ಟಿದೆ. ಎಂದು ವಿವರಣೆ ಕೊಟ್ಟಾಗ ನನಗೆ ನಗುವಿನ ಬದಲು ಸ್ವಲ್ಪ ಹೆದರಿಕೆ ಶುರುವಾಯಿತು. ಈ ಕಡೆಯ ಪಂಡಾಗಳು ಯಾತ್ರೆಗೆ ಬಂದವರ ಹಣಕಾಸು ಒಡವೆ ವಸ್ತ್ರ ಎಲ್ಲವನ್ನೂ ದೋಚಿ ಕೊಲೆ ಮಾಡಲೂ ಹೇಸದವರು ಎಂದು ಕೇಳಿದ್ದೆ. ಆದ್ದರಿಂದ ಇವನು, ಇವನ ಹಿಂದಿನವರು ಇಲ್ಲಿಗೆ ಬಂದ ಎಲ್ಲಾ ಮದ್ರಾಸಿಗಳ ತಿಥಿ ಮಾಡಿದಂತೆ ನನ್ನದೂ ಎಲ್ಲಾದರೂ ಮಾಡುತ್ತಾನೆ ಎಂದು ಹೆದರಿಕೆ ಆಯಿತು. "ನೀನು ಮದ್ರಾಸಿ ಇರಬಹುದು ಆದರೆ ನಾ ಮದ್ರಾಸಿ ಅಲ್ಲ. ನಾವು ಕನ್ನಡದವ, ನೀನು ನನ್ನ ಗೈಡ್ ಆಗಿ ಬರಬೇಕಾಗಿಲ್ಲ," ಎಂದು ಜೋರು ಮಾಡಿದೆ. "ತಿಥಿ ಮಾಡದೆ ಹೋದರೆ ಪರವಾಗಿಲ್ಲ ಬುದ್ಧನ ಬೋಧಿ ಮರ. ಬುದ್ಧ ವಿಹಾರಗಳನ್ನು ತೋರಿಸುತ್ತೇನೆ ಬನ್ನಿ ರಿಕ್ಷಾದಲ್ಲಿ ಸುತ್ತಿ ಬರಬಹುದು..." ಹತ್ತು ನಿಮಿಷದ ಕೋಪ ಚರ್ಚೆ, ಬೇಸರ ಎಲ್ಲ ಆದ ಮೇಲೆ ಅವನ ಜತೆ ಸೈಕಲ್ ರಿಕ್ಷಾದಲ್ಲಿ ಕೂತಿದ್ದೆ. ಬೋಧ ಗಯಾ ಸುತ್ತಿಬರಲು ಪಂಡಾಗಳ ಸಹಾಯವೇ ಬೇಡ ಅನ್ನುವ ಅನೇಕ ಯಾತ್ರಿಕರ ಸ್ಥಿತಿಯೇ ಹೀಗೆ. ಇದು ಪಂಡಾಗಳ ಸೇಲ್ಸ್‌ಮನಶಿಪ್‌ನ ಹೆಚ್ಚುಗಾರಿಕೆ. ಎಷ್ಟು ಒದೆತ ತಿಂದರೂ, ಬೈಸಿಕೊಂಡರೂ ಅಂತಿಮ ಜಯ ಅವರಿಗೇ, ಮಕ ಮಲ್ ಟೋಪಿ ಯಾತ್ರಿಕರಿಗೆ.

ಬೈಗುಳ ಬಿರುಸಿನ ಮಾತು, ಕೊಡಬೇಕಾದ ಶುಲ್ಕಕ್ಕಾಗಿ ಚೌಕಾಶಿ, ನನ್ನ ಗೊಣಗಾಟ ಎಲ್ಲಾ ಮುಗಿಯುವರೆಗೂ ಈ ಮದ್ರಾಸಿ ಪಂಡಾ ನನ್ನನ್ನು ಬೇಡುತ್ತಾ ಕಾಡುತ್ತಾ ಇದ್ದ. ಈ ಹಂತಗಳೆಲ್ಲಾ ಮುಗಿದು ಇಬ್ಬರೂ ಸೈಕಲ್ ರಿಕ್ಷಾದ ಮೇಲೆ ಕೂತಾಗ ಅವನ ಬಣ್ಣವೇ ಬದಲಾಯಿತು. ನನ್ನ ಅದೃಷ್ಟಕ್ಕೆ ಒಳ್ಳೆಯ ರೀತಿಯಲ್ಲಿ ಬದಲಾಯಿತು. ನಿನ್ನ ಹತ್ತಿರ ಇರುವುದು ದುಡ್ಡು. ಅದನ್ನು ಬಿಚ್ಚುವುದಕ್ಕೆ ಒದ್ದಾಡಿದೆ ನನ್ನ ಹತ್ತಿರ ಇರುವುದು ಇಲ್ಲಿಯ ಸ್ಥಳಪುರಾಣ, ತಗೋ; ನೀನು ಬೇಜಾರಾಯಿತು ಸಾಕು ಅನ್ನುವವರೆಗೂ ಕೊರಿತೀನಿ ಅನ್ನುವ ರೀತಿಯಲ್ಲಿ ಮದ್ರಾಸೀ ಪಂಡಾ ಲೀಲಾಜಾಲವಾಗಿ ಮಾತನಾಡಲು ಶುರು ಮಾಡಿದ. ಬರೀ ಹಿಂದಿನ ಕಥೆಗಳೇ ಆಗಿದ್ದರೆ ಬೇಜಾರೇ ಆಗುತ್ತಿತ್ತು. ಆದರೆ ಈ ಪಂಡಾನಿಗೆ ಒಂದು ರೀತಿಯ ವಿಚಿತ್ರ ಹಾಸ್ಯದ ಪರಿವೆಯಿತ್ತು. ಮೊದಮೊದಲು ಹಾಸ್ಯಕ್ಕೆ ಹೇಳಿದ್ದು ಕಥೆಯ ಭಾಗವೇ ಅನಿಸಿ ಹೂಂಗುಟ್ಟಿದ್ದರೂ ಅನಂತರ ಹಾಸ್ಯ ಅರ್ಥವಾಗುವಂತಿತ್ತು. ಹೆಚ್ಚು ರಸಮಯವಾಗುತ್ತಿತ್ತು. ಮಹಾಬೋಧಿ ಮಂದಿರ(?)ದಲ್ಲಿ ಬುದ್ಧ ಪ್ರತಿಮೆಯನ್ನು ನೋಡಿದಾಗ ಆ ಮೂರ್ತಿಯ ಮಹತ್ವದ ಹಿನ್ನೆಲೆ, ಬುದ್ಧನಾಗಿ ಎದ್ದ ಅಂತಃಸತ್ವ ಎಲ್ಲವನ್ನೂ ನೆನೆದು ಎರಡು ನಿಮಿಷ ಧ್ಯಾನರತಂತಾಯಿತು. ಏನೋ ಚಳಕದಿಂದ ವ್ಯಾಜವೊಂದು, ಇಲ್ಲಿಗೆ ಬಂದದ್ದೂ ಸಾರ್ಥಕ ಆಯಿತು ಅನಿಸಿ ಅಲ್ಲಿಯ ಪ್ರವಾಸಿಕರ ಪುಸ್ತಕದಲ್ಲಿ ಕನ್ನಡದಲ್ಲೇ ನನ್ನ ಅನಿಸಿಕೆ ಬರೆದಿಟ್ಟು ಬಂದೆ. ಪ್ರಾಯಶಃ ಅದುವರೆಗೂ ಯಾರೂ ಅಲ್ಲಿ ಕನ್ನಡದಲ್ಲಿ ಬರೆದಿರಲಾರರು ಎಂದು ಹೆಮ್ಮೆಯಿಂದ ತಲೆಯೆತ್ತಿದಾಗ ನನ್ನ ಮದ್ರಾಸಿ ಪಂಡಾ ಬಾಯಿ ತೆರೆದ

ಸಿದ್ಧಾರ್ಥಂಗೆ ಮನೇಲಿ ಹೆಂಡತಿ ಕಾಟ ಬಲು ಜೋರಾಗಿದ್ದಿರಬೇಕು ಸಾಬ್, ನನ್ನ ಹೆಂಡ್ತಿ ನನ್ನನ್ನು ಇಷ್ಟು ಸುಖವಾಗಿ ಪ್ರೀತಿಯಿಂದ ನೋಡಿಕೊಳ್ದೆ ಇದ್ದರೆ ಪ್ರಾಯಶಃ ನಾನೂ ಬುದ್ಧ ಆಗಬಹುದಿತ್ತು. ಎಲ್ಲರೂ ಮಾಡೋದೇ ಇಷ್ಟು. ಹೊಟ್ಟೆಗೆ ಚೆನ್ನಾಗಿ ಹಿಟ್ಟು ತುಂಬಿ, ಬುದ್ಧಿ ಮಾತ್ರ ಚಿಗುರದ ಹಾಗೆ ಮಾಡಿ ಬಿಡ್ತಾರೆ ಆದ್ದರಿಂದ ನಾವು ಸಿದ್ಧಾರ್ಥರಾಜನಾಗೇ ಇರುತ್ತೇವೆ. ಬುದ್ಧನಾಗುವ ಯೋಚನೆಯೇ ಇಲ್ಲ" ಎಂದು ತನ್ನ ಹೊಟ್ಟೆ ನೇವಿಕೊಂಡ. ನನ್ನ ಆಧ್ಯಾತ್ಮ ಚಿಂತನೆ ಒಂದೇ ಕ್ಷಣದ ನಗುವಿನಲ್ಲಿಯೇ ತೇಲಿಹೋಯಿತು.

ಮಹಾಬೋಧಿ ಮಂದಿರಕ್ಕೆ ಒತ್ತಿದಹಾಗೆ ಅದರ ಹಿಂಭಾಗದಲ್ಲಿ ಪ್ರಸಿದ್ಧವಾದ ಬೋಧಿ ವೃಕ್ಷವಿದೆ. ಈ ವಟವೃಕ್ಷ ಬುದ್ಧನ ಕಾಲದ್ದು. ಅದರ ಕೆಳಗೇ ಅವನು ತಪಸ್ಸು ಮಾಡಿ ಜ್ಞಾನೋದಯ ಪಡೆದುಕೊಂಡ ಅನ್ನುತ್ತಾರೆ. ಆ ವೃಕ್ಷವಿದ್ದ ಕಡೆಯೇ ಅದರ ಒಂದು ಟೊಂಗೆಯಿಂದ ಹೊಸದಾಗಿ ಚಿಗುರಿ ಬಂದ ವೃಕ್ಷ ಅಂತಾರೆ ಈ ವೃಕ್ಷದಲ್ಲಿ ಅದೇನು ಮಹತ್ವ ಏದೆ? ಎಂದು ಆಶ್ಚರ್ಯಪಡುತ್ತಾ ಅದನ್ನೇ ಎವೆಯಿಕ್ಕದೆ ನೋಡುತ್ತಾ ನಿಂತೆ. "ಏನೋ ನೀವೂ ಏನು ಬುದ್ಧಾನೇ ಆಗ್ಬೇಕಂತ ಹೀಗೆ ಬೋಧಿವೃಕ್ಷಾ ದೃಷ್ಟಿಸಿ ನೋಡ್ತಿರೋ?" ಎಂದ ನಮ್ಮ ಮದ್ರಾಸಿ ಪಂಡಾ ಅವನ ಮಾತು ಅರ್ಥವಾಗಲಿಲ್ಲವಾದ್ದರಿಂದ ಅತನೇ ವಿವರಿಸಿದ. "ಜ್ಞಾನೋದಯವಾದ ವೇಳೆ ಬುದ್ಧ ಒಂದು ವಾರದವರೆಗೂ ಆ ಮರವನ್ನೇ ತದೇಕಚಿತ್ತದಿಂದ ಎವೆಯಿಕ್ಕದೆ ನೋಡ್ತಾ ನಿಂತುಬಿಟ್ಟಿದ್ದನಂತೆ. ಅಷ್ಟೇ ಅಲ್ಲ, ಜೈನರ ಮಹಾವೀರನಿಗೆ ಜ್ಞಾನೋದಯವಾದದ್ದು ಒಂದು ಸಾಲ ಮರದ ಕೆಳಗೆ ಹಜಾರಿಬಾಗ್ ಜಿಲ್ಲೆಯ ದಾಮೋದರಿನ ಹತ್ತಿರದ ಜೃಂಭುಗ್ರಾಮದಲ್ಲಿ. ಇಷ್ಟೇ ಏಕ ಧ್ರುವ ತಪಸ್ಸು ಮಾಡಿದ್ದೂ ಒಂದು ಮರದ ಕೆಳಗೇ. ಹಿಂದಿನ ಕಾಲದ ಎಲ್ಲಾ ಋಷಿಗಳು ತಪಸ್ಸು ಮಾಡುತ್ತಿದ್ದುದು ಮರದ ಕೆಳಗೆ ...ದ ನಮ್ಮ ಪಂಡಾ. "ಅರೆ, ಹಾಗಾದರೆ ಜ್ಞಾನ ತಿಳಿವಿನ ರೇಖೆಗಳು ಮರದಿಂದ ಹೊರ ಹೊಮ್ಮುತ್ತವೇನೋ," ಎಂದು ಬಾಯಿ ಹಾಕಿದೆ. "ಅದೇನೋ ನಿಜ, ಜ್ಞಾನರಶ್ಮಿಗಳೇನೋ ಹೊರಬೀಳುತ್ತವೆ ಆದರೆ ನಮ್ಮ ಒಕ್ಕ ತಲೆಗೆ ಹೊಡೆದು ಮತ್ತೆ ವಾಪಸ್ಸು ಆಗುತ್ತವೆ," ಎಂದು ಮದ್ರಾಸಿ ಪಂಡಾ ತನ್ನ ತಲೆ ಸವರಿಕೊಂಡು ಈಗಿನ ಕಾಲದವರಿಗೆ ಮರಗಳ ಮಹತ್ವವೇ ಗೊತ್ತಿಲ್ಲ. ಸಿಕ್ಕ ಮರಗಳನ್ನೆಲ್ಲಾ ಕಡಿದು ಭೂಮಿಯನ್ನೆಲ್ಲಾ ಮರಳುಗಾಡು ಮಾಡಿ' ನದಿಯ ಪ್ರವಾಹ ಹೆಚ್ಚಿಸಿ, ಊರನ್ನೆಲ್ಲಾ ಕೊಚ್ಚಿಸಿ' ಬರಗಾಲವೂ ಹಿಂಬಾಲಿಸಿ ಬರುವಂತೆ ಮಾಡುತ್ತಿದ್ದಾರೆ. ಎಂದು ಬೈದಾಗ ಈ ಪಂಡಾನ ತಿಳುವಳಿಕೆ ಬುದ್ಧಿಗೆ ಮೆಚ್ಚಿಗೆ ಸೂಚಿಸಲೇ ಬೇಕಾಯಿತು. ಇದೆಲ್ಲಾ ಏನೇ ಇರಲಿ, ಆ ವೃಕ್ಷದ



"ಸರಿ ಚಲೇ... ನಿನ್ನ ಇಷ್ಟದ ಹಾಗೇ ಜೋಗ ಜಲಪಾತ ನೋಡಲಿಕ್ಕೇ ಹೋಗೋಣ..."

ಕೊಂಬೆಗಳ ಮೇಲೆಲ್ಲಾ ಕೆಂಪು ಬಟ್ಟೆಯ ತುಣುಕುಗಳು ಬೇಕಾದಷ್ಟು ಕಟ್ಟಿದ್ದವು. ಧ್ವಜಗಳಂತೆ ಹಾರಾಡುತ್ತಿದ್ದುವು. ಹರಕೆ ಹೊತ್ತ ಜನರು ಇಲ್ಲಿ ಈ ರೀತಿ ಬಟ್ಟೆ ಕಟ್ಟಿ ಹೋಗ್ತಾರೆ ಎಂದು ತಿಳಿಯಿತು. ಇದನ್ನು ನೋಡಿದಾಗ ನಮ್ಮ ಮನಸ್ಸೇ ಬಲು ವಿಚಿತ್ರ, ಅರ್ಥವೇ ಆಗುಲ್ಲ ಅನ್ನಿಸಿತು. ಪ್ರಸಾದ ಹೂವು ಹಲವು, ಎಡದಿಂದ ಬಿತ್ತೊ ಬಲದಿಂದಲೋ ಎಂದು ನೋಡುತ್ತೀವಿ. ಗರ್ಭಗುಡಿಯ ಹಿಂಬಾಗದ ಕಿಂಡಿಯಿಂದ ಇಣುಕಿ ನೋಡಿ ತಲೆ ಹೊಡೆದುಕೊಳ್ಳುತ್ತೀವಿ. ಇದನ್ನೆಲ್ಲಾ ನೋಡಿ ನಾನೇ ಎಷ್ಟೋ ಸಲ ನಕ್ಕಿದ್ದೆ ಆದರೆ ಅವತ್ತು ಆ ಬೋಧಿವೃಕ್ಷದ ಕೆಳಗೆ ನಿಂತಾಗ ನನ್ನ ಹಿಂದೂ ಮನಸ್ಸಿಗೆ ತಕ್ಷಣ ಏನೊ ಹೊಳೆದಂತಾಗಿ ಆ ಮರದ ಒಂದು ಹಸಿರೆಲೆ ಕಿತ್ತು ನನ್ನ ಹತ್ತಿರ ಇಟ್ಟುಕೊಳ್ಳಬಯಸಿದೆ. ಹುಡುಗರು ನವಿಲುಗರಿಯನ್ನು ಪುಸ್ತಕದ ಮಧ್ಯೆ ಇಡುವಂತೆ ಕೈಗೆಟುಕದ ಎಲೆಗಾಗೆ ಹಾರಿದ್ದೇ ಹಾರಿದ್ದು. ಎಲ್ಲಿ ಯಾವ ಕೊಂಬೆಗೆ ಜಗಿದರೂ ಎಲೆ ಮಾತ್ರ ಕೈಗೆ ಸಿಗಲಿಲ್ಲ. ನನ್ನ ಹಾರಾಟ ನೋಡೀ ಮದ್ರಾಸೀ ಪಂಡನಿಗೆ ನಗು ಬಂದಿತು. "ಬಿಡಿ ಸಾಬ್ ದಿನಕ್ಕೊಂದು ಬಾರಿಯಾದರೂ ನಾವು ಈ ಮರದ ಕೆಳಗೆ ಬರ್ತೀವಿ; ಅದರ ಗಾಳಿ ಸೇವಿಸ್ತೀವಿ ಆದ್ರೂ. ನಮಗೆ ಶಾಂತಿ ಸಿಕ್ಕಿಲ್ಲ ಇನ್ನು ಈ ಮರದ ಒಂದು ಎಲೆ ನಿಮ್ಮ ಹತ್ತಿರ ಬಂದಾಕ್ಷಣ ನಿಮಗೆ ಮನಶ್ಯಾಂತಿ ಬರುತ್ತದಯೇ?" ಎಂದಾಗ ಛೀ ಇದೇನು ಹುಚ್ಚುತನ ಎನಿಸಿ ನನ್ನ ಹಾರಾಟ ನಿಲ್ಲಿಸಿದೆ. ಅಲ್ಲಿಂದ ಹೊರಡಬೇಕೆನ್ನುವಷ್ಟರಲ್ಲಿ ಅಲ್ಲಿಗೆ ಯಾತ್ರಿಗಳ ಇನ್ನೊಂದು ಗುಂಪು ಬಂದಿತು. ಅವರ ಜೊತೆಗಿದ್ದ ಗೈಡ್ ಪ್ಯಾಂಟ್ ಶರಟು ಧರಿಸಿದ್ದ ಹೊಸ ಕಾಲದ ಪಂಡಾ–ಅವರಿಗೆ ವಿವರಿಸುತ್ತಿದ್ದ. ಮಾತು ಕಿವಿಗೆ ಬಿದ್ದು ಕಿವಿ ನಿಮಿರಿತು: ಬಂಗಾಳದ ರಾಜ ಸಶಾಂಕ ಬಿಹಾರದಲ್ಲಿನ ಬೌದ್ಧ ಮತೀಯರನ್ನು ಹಿಂಸಿಸಿ ಇಲ್ಲಿ ಮೊದಲಿದ್ದ ಬೋಧಿವೃಕ್ಷವನ್ನು ಕೆಡವಿ, ಇಲ್ಲಿದ್ದ ಬುದ್ಧನ ಪ್ರತಿಮೆ ತೆಗೆದು, ಶಿವನ ಪ್ರತಿಮೆ ಇಟ್ಟನಂತೆ. ಇದು ನಿಜವಾಗಿರಬಹುದು ಎಂದು ಆ ಗುಂಪಿನ ಜೊತೆ ಎರಡು ಹೆಜ್ಜೆ ಹೊರಟೆ. ಗೈಡ್ ಮುಂದುವರಿಸಿದ್ದ: "ಕ್ರಿ. ಶ. ೬೨೫ ರಲ್ಲಿ ಮೌಖರಿ ರಾಜ ಪೂರ್ಣವರ್ಮನ್ ಬೋಧಿ ವೃಕ್ಷವನ್ನು ಉಳಿಸಿ ಇಲ್ಲಿರುವ ಹತ್ತಡಿ ಕಲ್ಲಿನ ಕಟಕಟೆ ಕಟ್ಟಿಸಿದ" ಎಂದಾಗ ಹೊಸ ಸಮಾಚಾರ ತಿಳಿದಿತ್ತು. ಆದರೆ ಈ ಮಹಾಬೋಧಿ ಮಂದಿರ ಎಷ್ಟು ಹಳೆಯದು ಎಂದು ಯಾರೂ ಪ್ರಶ್ನೆ ಕೇಳಿದರೂ ಇಲ್ಲಿ ಕಾಣುವ ಮಂದಿರ ಕ್ರಿ. ಶ. ಒಂದು ಅಥವಾ ಎರಡನೇ ಶತಮಾನದಲ್ಲಿ ಕಟ್ಟಿದ್ದು ಎಂದು ಗೈಡನಿಂದ ಉತ್ತರ ಬಂತು. ನಾನು ಆಧುನಿಕ ಗೈಡನ ಮಾತಿಗೆ ಮರುಳಾಗಿದ್ದು ನನ್ನ ಮದ್ರಾಸಿಗೆ ಹಿಡಿಸಲಿಲ್ಲ. ಪಂಡಾನನ್ನು ಎಳೆದುಕೊಂಡು ಹೊರಟೆ. ಚರಿತ್ರೆಯ ಅಂಶಗಳು ಪುಸ್ತಕ ಓದಿದರೂ ತಿಳಿಯಬಹುದು, ಆದರೆ ಮದ್ರಾಸೀ ಪಂಡಾನ ಚುರುಕು ಚಮಕಿ ಮಾತುಗಳು ಪುಸ್ತಕದಲ್ಲೆಲ್ಲಿ ಸಿಗಬೇಕೆಂದುಕೊಂಡು ಆತನ ಹಿಂದೆಯೇ ಹೊರಟೆ.

ಪ್ರತಿ ತೀರ್ಥ ಸ್ಥಳಗಳಲ್ಲಿ ಹೇಳುವಂತೆ ಇಲ್ಲೂ ಅನೇಕ ಕಥೆಗಳನ್ನು ಕೇಳಬಹುದು. ಬುದ್ಧ ಸ್ನಾನ ಮಾಡಿದ ಕೊಳ, ಜ್ಞಾನೋದಯವಾದ ಮೇಲೆ ಬುದ್ಧ ಏಳು ವಾರಗಳನ್ನು ಕಳೆದ ಏಳು ಜಾಗಗಳು, ಬುದ್ಧ ನಡೆವಲ್ಲಿ ಪದ್ಮದ ಹೂ ಅರಳಿದ ಸ್ಥಳ, ಇವೇ ಮುಂತಾದವನ್ನು ತೋರಿಸುತ್ತಾರೆ. ಆದರೆ ನಮ್ಮ ಕಣ್ಣಿಗೆ ಕಟ್ಟುವುದು ಬೋಧಿ ಮಂದಿರದ ಸುತ್ತಲೂ ಇರುವ ಕಲ್ಲಿನ ಕಟಕಟೆ ಕ್ರಿಸ್ತಪೂರ್ವ ಎರಡನೇ ಶತಮಾನದ್ದು. ಬರ್ಮ, ಚೀನಾ, ಟಿಬೆಟ್ ಮತ್ತು ಥಾಯ್‌ದೇಶದವರು ತಮ್ಮದೇ ವಿಹಾರಗಳನ್ನು ಬುದ್ಧ ಮಂದಿರಗಳನ್ನು ಇಲ್ಲಿ ಕಟ್ಟಿಕೊಂಡಿದ್ದಾರೆ. ಬೌದ್ಧ ಮತ ಇಲ್ಲೇ ಹುಟ್ಟಿ ಬೆಳೆದುಬಂದಿದ್ದರೂ ಈ ಮತ ಅದನ್ನು ಅನುಸರಿಸುವ ಜನ ಎಲ್ಲ ನಮಗೆ ಹೊರಗಿನವಾಗೇ ಕಾಣುತ್ತವೆ. ಹೊರಗಿನಿಂದ ಬಂದು ನೆಲೆಸಿರುವ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರಿಗಿಂತಲೂ ಬೌದ್ಧ ಮತಸ್ಥರು ನಮಗೆ ಹೆಚ್ಚು ಹೊರಗಿನವರಾಗಿ ಕಾಣುವುದು ಆಶ್ಚರ್ಯವೇ ಅನಿಸಿತು. ಆ ವಿಹಾರಗಳಲ್ಲಿರುವ ಬೌದ್ಧ ಸಂನ್ಯಾಸಿ

ಗಳೊಡನೆ ಮಾತಾಡಿ ಏನಾದರೂ ಹೊಸ ವಿಚಾರ ತಿಳಿದುಕೊಳ್ಳೋಣ ಎಂದು ಪ್ರಯತ್ನಪಟ್ಟರೆ ಅವರು ಹೆಚ್ಚು ಬಾಯಿ ಬಿಡದಾದರು. ಯಾತ್ರಿಕರಾಗಿ ಯಾವುದೇ ಜಾಗಕ್ಕೆ ಹೋದರೂ ನಮಗೆ ಸ್ಥಳ ನೋಡಿದ ವಿಚಾರ ತಿಳಿದುಕೊಳ್ಳುವುದಕ್ಕಿಂತಲೂ ಹೆಚ್ಚಾಗಿ ಅಲ್ಲಿನ ಊಟ – ತಿಂಡಿಯ ವ್ಯವಸ್ಥೆ, ಮಾರಾಟ ಮಳಿಗೆಗಳು, ಮುಂದಿನ ಬಸ್ಸು ಅಥವಾ ರೈಲು ಹಿಡಿಯುವ ಅವಸರ. ಅಲ್ಲಿಯ ಪಂಡಾ ಹೇಳುವ ಒಂದೆರಡು ಕಥೆಗಳು ಇವುಗಳಿಗೆ ನಮ್ಮ ಆಸಕ್ತಿ ಸೀಮಿತವಾಗಿರುತ್ತವೆ. ವಿಚಾರ ತಿಳಿಯುವ ತಾಳ್ಮೆ ಇರುವುದಿಲ್ಲ. ಬೌದ್ಧ ವಿಹಾರಗಳ ಭಿಕ್ಷುಗಳ ಬಗ್ಗೆ ಹೆಚ್ಚು ಗೊತ್ತಾಗಲಿಲ್ಲ. ಬುದ್ಧ ತನ್ನ ಭಿಕ್ಷುಗಳ ಸಂಘಗಳನ್ನು ಬಹಳಷ್ಟು ಮುತವರ್ಜಿ ವಹಿಸಿ ಪ್ರಜಾಪ್ರಭುತ್ವದ ರೂಪರೇಷೆಗಳನ್ವಯ ನಿಯಮಗಳನ್ನು ರೂಪಿಸಿದ್ದನಂತೆ. ಸಂಘಗಳಲ್ಲಿ ಭಿಕ್ಷುಗಳು ಕೂರುವ ಕ್ರಮವನ್ನು ಹಿರಿಯ ಭಿಕ್ಷು ನೋಡಿಕೊಳ್ಳಬೇಕು. ಸಭೆಗಳಲ್ಲಿ ಚರ್ಚಿಸಬೇಕಾದ ವಿಚಾರಗಳನ್ನು ಮೊದಲೇ ತಿಳಿಸಿರಬೇಕು. ಕಡೆಯ ಪಕ್ಷ ಹತ್ತು ಭಿಕ್ಷುಗಳಿದ್ದರೆ ಸಭೆಯು ಆ ಎಲ್ಲರಿಗೂ ಬದ್ಧವಾಗಿರುವುದು. ತೀರ್ಮಾನಗಳನ್ನು ಸರಿಯಾಗಿ ಬರೆದಿಡಬೇಕು. ಅನಿಶ್ಚಿತ ಚರ್ಚೆಗಳನ್ನು ಮತಕ್ಕೆ ಹಾಕಿದಾಗ ಮತ ಚಲಾಯಿಸಲು ಯಾರು ಅರ್ಹರು ಮುಂತಾದ ಎಲ್ಲಾ ವಿಚಾರಗಳನ್ನೂ ಬುದ್ಧ ಕೂಲಂಕಷವಾಗಿ ನಿರೂಪಿಸಿದ್ದನಂತೆ. ಇಂದು ಎರಡೂವರೆ ಸಾವಿರ ವರ್ಷಗಳ ನಂತರವೂ ಮುಂದುವರಿದವೆಂದು ಜಂಭ ಕೊಚ್ಚಿಕೊಳ್ಳುವ ನಮ್ಮ ಜನ ಲೋಕಸಭೆಯಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳಬೇಕೆಂದು ತಿಳಿಯದೆ ಹೊಡೆದಾಡುತ್ತಾರೆ ಎಂದು ಹೇಳಿ ನನ್ನ ಮದ್ರಾಸಿ ಪಂಡಾ ನಕ್ಕಾಗ ಬುದ್ಧನ ಕಾಲದ ರೀತಿ ನೀತಿಗಳಿಗೆ ಹೆಚ್ಚು ಮೆಚ್ಚಿಕೆಯಾಯಿತು. "ಆದ್ರೂ ನೀವೇನೆ ಹೇಳಿ, ಮಹಿಳಾ ಭಿಕ್ಷುಗಳನ್ನು ಸಂಘಕ್ಕೆ ಸೇರಿಸಿಕೊಳ್ಳಲು ಬುದ್ಧನಿಗೆ ಸ್ವಲ್ಪವೂ ಇಷ್ಟವಿರಲಿಲ್ಲವಂತೆ. ಬಹಳ ಬಲವಂತದ ಮೇಲೆ ಒಪ್ಪಿದನಂತೆ," ಎಂದಾಗ ಇದೆಷ್ಟು ಸುಳ್ಳು ಅಂದುಕೊಂಡಿದ್ದೆ. ಈ ವಿಚಾರ ನಿಜ ಎಂದು ತಿಳಿದದ್ದು ಇತ್ತೀಚೆಗೆ–ಚರಿತ್ರೆ ಪುಸ್ತಕ ಓದಿದಾಗ.

ಅಲ್ಲಿಂದ ಗಯಾ ಕೊಳಕು ನಗರದಲ್ಲಿ ಸುತ್ತಾಡಿ ಹನ್ನೊಂದನೆಯ ಶತಮಾನದ ದೇವಸ್ಥಾನ ನೋಡಿ ವಿಷ್ಣುಪಾದ ದೇವಸ್ಥಾನಕ್ಕೆ ಬಂದೆವು. ಇಲ್ಲಿಯೇ ಶ್ರಾದ್ಧಗಳು ನಡೆಯುವುದು. ಗಯಾಸುರ ರಾಕ್ಷಸನನ್ನು ಇಲ್ಲಿಂದ ಓಡಿಸಿದನೆಂದು ಪುರಾಣದ ಕಥೆ ಹೇಳಿದ. ಈಗ ಕಥೆ ಅರ್ಧ ಮರೆತೇ ಹೋಗಿದೆ. ಒಟ್ಟಿನಲ್ಲಿ ಅವಕ್ಕೆ ಮೊದಲು ಈ ಸ್ಥಳದಲ್ಲಿ ಆಸುರೀ ಸಂಸ್ಕೃತಿ ಜೋರಾಗಿತ್ತು ಎಂದು ತಿಳಿಯಿತು. ವಿಷ್ಣುಪಾದದ ಮೇಲೆ ಒಂದೂ ಕಾಲು ರೂಪಾಯಿ ಹಾಕಲು ಅಲ್ಲಿಯ ಪಂಡಾಗಳು ಮುತ್ತಿದರು. ಅವಕ್ಕೆ ಬೇಸತ್ತು "ಸರಿ ಈಗ ತಾನೇ ಇಲ್ಲಿ ಆಸುರೀ ಸಂಸ್ಕೃತಿ ಏನು ಕಡಿಮೆಯಾಗಿದೆ?" ಎಂದೆ. ಅಲ್ಲಿಯ ಪಂಡಾಗಳು ಬೈದುಕೊಂಡು ವಾಪಸ್ಸು ಹೊದರು. ಆದರೆ ನನ್ನ ಮದ್ರಾಸಿ ಪಂಡಾ ಸುಮ್ಮನಿರಲಿಲ್ಲ. "ಹೌದು ಆಸುರೀ ಸಂಸ್ಕೃತಿ ಈಗಲೂ ಜೋರಾಗಿಯೇ ಇದೆ. ಆದರೆ ಆ ಮಹಾವಿಷ್ಣು ಇಲ್ಲಿ ತನ್ನ ಪಾದದ ಚಿಹ್ನೆ ಬಿಟ್ಟು ಹೋದವನು ವಾಪಸ್ಸು ಬರುವ ಸೂಚನೆಯೇ ಇಲ್ಲ," ಅಂದ. ಹೌದೌದು, ವಿಷ್ಣುವಿನ ಇನ್ನೊಂದು ಅವತಾರಕ್ಕೆ ಈಗ ಸಮಯ ಸರಿಯಾಗಿದೆ, ಅಂದೆ. "ಇಲ್ಲಾ ಸಾಬ್" ಆ ವಿಷ್ಣು ಇನ್ನು ಬರೋಲ್ಲ" ಎಂದು ದುಃಖಪಟ್ಟವನಂತೆ ಅಂದಾಗ ನನಗೆ ಆಶ್ಚರ್ಯವೇ ಆಯಿತು. ಅವನೇ ಮುಂದುವರಿಸಿದ: "ಅವನು ಬಿಟ್ಟುಹೋದ ಅವನ ಪಾದಕ್ಕೆ–ಪಾದದ ಚಿಹ್ನೆಗೆ–ಇಂಥ ಅವಮಾನ ಆಗ್ತಾ ಇರಬೇಕಾದರೆ ನಿಮ್ಮಂತೆ ತಿಳಿದವರು ಗೌರವ ಸೂಚನೆಗೆ ನಾಲ್ಕು ಬಿಡಿಗಾಸು ಹಾಕಲೂ ಜಿಪುಣತನ ಮಾಡುತ್ತಿರುವಾಗ ಇನ್ನು ವಿಷ್ಣುವೇ ಎದುರಿಗೆ ಬಂದರೆ ಅವನಿಗೆ ಅವಮಾನವೇ ಖಚಿತ. ಆದ್ದರಿಂದ ವಿಷ್ಣು ಇನ್ನು ಬರೊದಿಲ್ಲ.–ಅಂದಾಗ ನನಗೆ ಏನು ಉತ್ತರ ಕೊಡಬೇಕೋ ತಿಳಿಯಲಿಲ್ಲ. ವಾಪಸ್ಸು ಹೋಗಿ ಎರಡು ರೂಪಾಯಿ ವಿಷ್ಣುಪಾದಕ್ಕೆ ಹಾಕಿ ಓಡಿಬಂದೆ. ಗಯಾಕ್ಕೆ ಹೋದಾಗ ಏನು ನೋಡದಲಿ ಬಿಡಲಿ, ಮದ್ರಾಸಿ ಪಂಡಾನನ್ನು ನೋಡಿ ಮಾತಾಡಿಸಿ ಬರಲು ಮರೆಯಬೇಡಿ.

✦

# ಡೇವಿಡ್ಡನ ಏಡ್ಸ್ ದುರಂತ

ಎಂ. ಶಿವರಾಮು ಆಚಾರ್

ಡೇವಿಡ್ ಎಂಬ ಬಾಲಕ ಹುಟ್ಟಿನಿಂದಲೇ ಏಡ್ಸ್* ರೋಗಿ. ಹುಟ್ಟಿನಿಂದಲೇ ಅವನ ರಕ್ತದಲ್ಲಿ 'ಟಿ' ಮತ್ತು 'ಬಿ' ಕಣಗಳ ಅಭಾವ. ಈ ಕಣಗಳ ಅಭಾವವಿರುವ ಯಾವ ಶಿಶುವೂ ಹೆಚ್ಚು ಕಾಲ ಜೀವಿಸಲಾರದು. ಇಂತಹ ಶಿಶುಗಳ ಜನನವೇ ವಿರಳ. ಜನಿಸಿದ ಒಂದೇ ವರ್ಷದಲ್ಲಿ ಮರಣಕ್ಕೀಡಾಗಬೇಕಾಗಿದ್ದ ಡೇವಿಡ್ಡನನ್ನು ಹೇಗಾದರೂ ಮಾಡಿ ಬದುಕಿಸಲು ಅಮೇರಿಕದಲ್ಲಿ ವೈದ್ಯರು ಕಂಕಣಬದ್ಧರಾದರು. ಮೊದಲೇ ಏಡ್ಸ್ ರೋಗಿ. ಆಮೇಲೆ ಕೇಳಬೇಕೆ. ಸ್ವಲ್ಪ ಸೋಂಕು ತಗಲಿದರೂ ಶಿಶುವಿಗೆ ಅಪಾಯ ಕಾದೇ ಇದೆ. ಹಾಗಾಗಿ ಶಿಶುವಿಗೆ ಯಾವ ರೋಗದ ಸೋಂಕೂ ತಗಲದಂತೆ ಆತನನ್ನು ಪ್ಲಾಸ್ಟಿಕ್‌ನ ಒಂದು ಗುಳ್ಳೆಯಂತಹ ಹೊದಿಕೆಯೊಳಗೆ ಇರಿಸಿ ಕಾಪಾಡತೊಡಗಿದರು. ಶಿಶುವು ಬೆಳೆದಂತೆ ಬಾಹ್ಯ ಪ್ರಪಂಚದ ನೇರ ಸ್ಪರ್ಶ ಯಾವ ರೀತಿಯಲ್ಲೂ ಉಂಟಾಗದಂತೆ ಜಾಗ್ರತೆ ವಹಿಸಿದರು. ಅವರ ಆಹಾರ ಪಾನೀಯಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಿಗೊಳಪಡಿಸಿ ಯಾವ ತರದ ರೋಗಬಾಧೆಯ ಸೋಂಕೂ ತಗಲದಂತೆ ಜಾಗ್ರತೆಯಾಗಿ ಪೋಷಿಸಿದರು. ಬಂಧುಗಳಾಗಲೀ ಸಂಬಂಧಿಕರಾಗಲೀ ದಾದಿಯರಾಗಲಿ ಶಿಶುವಿನ ದೈಹಿಕ ಸಂಪರ್ಕ ಮಾಡದಂತೆ ಅತಿ ಜಾಗ್ರತೆ ವಹಿಸಿ ಬೆಳೆಸಿದರು. ಕಾರಣ ಏಡ್ಸ್ ರೋಗಿ ಶಿಶುವಿಗೆ ಯಾವ ತರಹದ ನೈಸರ್ಗಿಕ ರೋಗ ನಿರೋಧಕ ಶಕ್ತಿಯೂ ಇರುವುದಿಲ್ಲ. ಎಲ್ಲವೂ ಔಷಧಗಳ ಮೂಲಕವೇ ಜರುಗಬೇಕು. ಶಿಶುವು ಸತತವೂ ಪ್ಲಾಸ್ಟಿಕ್ ಗುಳ್ಳೆಯೊಳಗೆ ಇರುವಂತೆ ಪೋಷಣೆ ಶಿಶು ಬೆಳೆದಂತೆಲ್ಲಾ ಪ್ಲಾಸ್ಟಿಕ್ ಹೊರಪದರವೂ ಬದಲಾಗುವಂತಹ ವ್ಯವಸ್ಥೆ. ಹೀಗೆ ಎಡೆಬಿಡದೆ ಹನ್ನೆರಡು ವರ್ಷಗಳ ಕಾಲ ಯಾವ ತೊಂದರೆಯೂ ಇಲ್ಲದೆ ಬೆಳೆಯುವಂತೆ ಸಾಕಿದರು.

ಅದಕ್ಕಾಗಿ ವೈದ್ಯರು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ತಮ್ಮ ಪ್ರಯತ್ನ ಯಶಸ್ವಿಯಾಗುವುದೊಂದೇ ಈ ವೈದ್ಯರ ಹಾರೈಕೆ. ಡೇವಿಡ್ಡನ ರಕ್ತದಲ್ಲಿ 'ಟಿ' ಮತ್ತು 'ಬಿ' ಕಣಗಳ ಕೊರತೆಯನ್ನು ನಿವಾರಿಸಲು ಹೊಸ ವಿಧಾನ ಯೋಚಿಸಿದರು. ಸಾಮಾನ್ಯವಾಗಿ ನಮ್ಮ ರಕ್ತದಲ್ಲಿರುವ ಕೆಲವು ಮತ್ತು ಬಿಳಿ ಕಣಗಳೂ ಟಿ ಮತ್ತು ಬಿ ಕಣಗಳೂ ಉಂಟಾಗುವುದು ನಮ್ಮ ಎಲುಬಿನ ಒಳಭಾಗದ ಮೃದು ಅಸ್ಥಿ (bone marrow) ಇರುವಲ್ಲಿ. ಈ ಎಲ್ಲಾ ಕಣಗಳೂ ಮಾನವನ ದೇಹದ ಆರೋಗ್ಯಕ್ಕೆ ಅನಿವಾರ್ಯ, ದೇಹದ ಬೆಳವಣಿಗೆಗೆ ಅಗತ್ಯ. 'ಬಿ' ಕಣಗಳು ಎಲುಬಿನ ಒಳಪದರದಲ್ಲಿ ಉಂಟಾಗಿ ಬೆಳೆದು ರಕ್ತದಲ್ಲಿ ಸೇರಿ ಶ್ವೇತಗೋಲಕಗಳು ಎನ್ನಿಸಿಕೊಳ್ಳುತ್ತವೆ. ಹಾಗೆಯೇ 'ಟಿ' ಕಣಗಳು ಉಂಟಾಗಿ ಥೈಮಸ್ ಎಂಬ ಅಂಗವನ್ನು ಸೇರಿ ಟಿ ಶ್ವೇತಗೋಲಕಗಳಾಗುತ್ತವೆ. ಈ 'ಟಿ' ಮತ್ತು 'ಬಿ' ಶ್ವೇತಗೋಲಕಗಳು ನಮ್ಮ ದೇಹವನ್ನು

---

* ನೋಡಿರಿ-ಏಡ್ಸ್: ಡಾಕ್ಟರಿಗೊಂದು ತಲೆ ನೋವು, ಕಸ್ತೂರಿ ಏಪ್ರಿಲ್ ೧೯೮೪.

ಪ್ರವೇಶಿಸುವ ಹಲವು ರೋಗಾಣುಗಳನ್ನು ವಿರೋಧಿಸಿ ನಾಶಪಡಿಸುವ ಚೈತನ್ಯ ಪಡೆದಿರುತ್ತನೆ. ಅಂದರೆ ರೋಗಾಣುಗಳನ್ನು ನಾಶಪಡಿಸಲು ಅಗತ್ಯವಿರುವ ಪ್ರತಿವಿಷವನ್ನು ಈ ಟಿ ಮತ್ತು ಬಿ ಕಣಗಳು ತಯಾರಿಸಿ ಅವುಗಳ ನಾಶಕ್ಕೆ ಕಾರಣವಾಗುತ್ತವೆ. ಈ ಟಿ ಮತ್ತು ಬಿ ಕಣಗಳೇ ನಮ್ಮನ್ನು ರೋಗಗಳಿಂದ ರಕ್ಷಿಸುವ ರಕ್ಷಕ ಭಟರು. ಇವುಗಳ ಪ್ರಮಾಣ ದೇಹದಲ್ಲಿ ಸಾಕಷ್ಟು ಇಲ್ಲದಿದ್ದರೂ ದೇಹಕ್ಕೆ ಅಪಾಯ ಕಟ್ಟಿಟ್ಟ ಗಂಟು. ಡೇವಿಡ್ಡನ ರಕ್ತದಲ್ಲಿರುವ ಈ ಟಿ ಮತ್ತು ಬಿ ಕಣಗಳ ಅಭಾವವನ್ನು ನೀಗಲು ಆ ಕಣಗಳು ಆತನ ದೇಹದಲ್ಲೇ ಉಂಟಾಗುವಂತೆ ಮಾಡುವುದೇ ಅವರ ಉಪಾಯ. ಅದಕ್ಕಾಗಿ ಶಿಶುವಿನ ಹತ್ತಿರದ ರಕ್ತಸಂಬಂಧಿ ಹಾಗೂ ಸಹೋದರಿಯ ರಕ್ತವು ಹೊಂದಿಕೊಳ್ಳುವುದರಿಂದ ಆಕೆಯ ಎಲುಬಿನ ನೆಣದ (bone marrow) ದ ಒಂದು ತುಂಡನ್ನು ತೆಗೆದು ಡೇವಿಡ್ಡನ ಎಲುಬಿಗೆ ಕಸಿಮಾಡಿದರು. ಇದರಿಂದ ಡೇವಿಡ್ಡನ ದೇಹದಲ್ಲೇ ಈ ಅಸ್ಥಿಭಾಗವು ಸೇರಿದ ಬಳಿಕ ಅಲ್ಲಿ ಟಿ ಮತ್ತು ಬಿ ಕಣಗಳನ್ನು ಉತ್ಪಾದಿಸಿ ಆತನ ಆ ಕೊರತೆ ನೀಗೀತೆಂಬ ಭಾವನೆ ವೈದ್ಯರದು. ಇದರಿಂದಾಗಿ ಆತನ ಏಡ್ಸ್ ರೋಗವನ್ನೇ ಮೂಲೋಚ್ಚಾಟನೆ ಮಾಡಿಯೇವೆಂಬ ನಂಬಿಕೆ. ಇದಕ್ಕಾಗಿ ಡೇವಿಡ್ಡನ ರಕ್ತವೂ ಆತನ ಸಹೋದರಿಯ ರಕ್ತವೂ ಒಂದೇ ಗುಂಪಿಗೆ ಸೇರಿರುವದಾಗಬೇಕೆಂಬ ಜಾಗ್ರತೆ ವಹಿಸಿದ್ದರು. ಹಾಗೆಯೇ ಡೇವಿಡ್ಡನ ಎಲುಬಿನ ಕಣಗಳೂ ಆತನ ದಾನಿಯಾದ ಸಹೋದರಿಯ ಎಲುಬಿನ ಕಣಗಳೂ ಸಜಾತೀಯವಾಗಬೇಕೆಂದೂ ನಿರ್ಧರಿಸಿದ್ದರು. ಏಕೆಂದರೆ ಅವು ಪರಸ್ಪರ ವಿಜಾತೀಯವಾಗಿದ್ದಲ್ಲಿ ದಾನಿಯ ಎಲುಬನ್ನು ಡೇವಿಡ್ಡನ ಎಲುಬು ಸ್ವೀಕರಿಸದೆ ವರ್ಜ್ಯ ಪ್ರತಿಕ್ರಿಯೆ ತೋರಿಸಬಲ್ಲುದಾಗಿತ್ತು. ಈ ಪ್ರಮೇಯ ಡೇವಿಡ್ಡನಿಗೆ ಉಂಟಾಗದಂತೆ ಜಾಗ್ರತೆ ತಳೆದರು. ಡೇವಿಡ್ಡನ ರಕ್ತದಲ್ಲಿ ಟಿ ಮತ್ತು ಬಿ ಕಣಗಳು ಇಲ್ಲದ್ದರಿಂದ ದಾನಿಯ ಎಲುಬನ್ನು ಕಸಿ ಮಾಡಿದಾಗ ವರ್ಜ್ಯ ಪ್ರತಿಕ್ರಿಯೆ ಉಂಟಾಗಲಿಲ್ಲ. ಆದರೂ ವರ್ಜ್ಯ ಪ್ರತಿಕ್ರಿಯೆಯನ್ನು ತಪ್ಪಿಸಲು ದಾನಿಯ ಎಲುಬನ್ನು ಡೇವಿಡ್ಡನಿಗೆ ಕಸಿ ಮಾಡುವ ಮೊದಲು ಅದರಲ್ಲಿರಬಹುದಾದ ಟಿ ಕಣಗಳನ್ನು ಕೆಲವು ವೈಜ್ಞಾನಿಕ ಕ್ರಿಯೆಗೊಳಪಡಿಸಿ ಅದರಲ್ಲಿ ವರ್ಜ್ಯ ಪ್ರತಿಕ್ರಿಯೆಗೆ ಅನುಕೂಲವಾಡದಂತೆ ಜಾಗ್ರತೆ ವಹಿಸಿದ್ದರು. ಡೇವಿಡ್ಡನ ರಕ್ಷಣೆಗೆ ಸಹಾಯಕವಾಗಬಲ್ಲ ಟಿ ಕಣಗಳು ಮಾತ್ರ ಉಳಿದು ಇತರ ವಿರೋಧಿ ಟಿ ಕಣಗಳು ನಿಷ್ಕ್ರಿಯವಾಗುವಂತೆಯೂ ಮಾಡಿದ್ದರು. ಈ ಎಲುಬಿನ ಕಸಿಯಿಂದ ಡೇವಿಡ್ಡನ ಶರೀರದಲ್ಲಿ ಆತನ ರಕ್ಷಣೆಗೆ ಅನುಕೂಲವಾದ ಟಿ ಕಣಗಳು ಉಂಟಾಗುವಂತೆ ಸಹಾಯ ಮಾಡಿದರು. ಕೆಲವು ತಿಂಗಳ ವರೆಗೆ ವೈದ್ಯರು ಅಪೇಕ್ಷಿಸಿದಂತೆ ಎಲ್ಲ ಪ್ರತಿಕ್ರಿಯೆಗಳು ತೋರಿಬಂದವು. ಡೇವಿಡ್ಡನಲ್ಲಿರುವ ರಕ್ತದ ಕಣಗಳು ದಾನಿಯ ಎಲುಬಿನ ಕಣಗಳೊಡನೆ ಹೋರಾಟ ನಡೆಸಿದವು. ಅದನ್ನು ತಕ್ಕ ಚಿಕಿತ್ಸೆ ಮೂಲಕ ನಿವಾರಿಸಿದರು. ಆದರೆ ಅವರ ನಿರೀಕ್ಷೆಯಂತೆ ಡೇವಿಡ್ಡನು ಆರೋಗ್ಯವಂತನಾಗುವ ಬದಲು ದಿನೇ ದಿನೇ ಆತನ ಆ ಆರೋಗ್ಯವು ಕೆಟ್ಟು ಅತ್ಯಾಧುನಿಕ ವೈದ್ಯಕೀಯ ಶಾಸ್ತ್ರದ ನೆರವು ದೊರೆತರೂ ಯಶಸ್ವಿಯಾಗದೆ ಕೊನೆಯುಸಿರೆಳೆದ. ಹನ್ನೆರಡು ವರ್ಷಗಳ ವರೆಗೆ ಎಡಬಿಡದೆ ನಡೆಸಿದ ವೈದ್ಯಕೀಯ ಪ್ರಯತ್ನ ನಿಷ್ಪ್ರಯೋಜಕವಾಯಿತು. ಹೃದಯಾಘಾತದಿಂದ ಡೇವಿಡ್ಡನ ಮರಣ ಸಂಭವಿಸಿತು.

ಆದರೂ ವೈದ್ಯರು ಆತನ ಮರಣದ ಕಾರಣ ತಿಳಿಯಲು ದೇಹವನ್ನು ಮರಣೋತ್ತರ ಶಸ್ತ್ರ ಕ್ರಿಯೆಗೊಳಪಡಿಸಿದರು. ಅದರಿಂದ ತಿಳಿದು ಬಂದುದೇನೆಂದರೆ ಡೇವಿಡ್ಡನ ಮರಣವು ಆತನ ರಕ್ತದ ಕಣಗಳು ದಾನಿಯ ಎಲುಬಿನ 'ಟಿ' ಕಣಗಳನ್ನು ವಿರೋಧಿಸಿ ಉಂಟಾಗಿರಲಿಲ್ಲ. ಬದಲು ವೈದ್ಯರಿಗೆ ನಿಲುಕದ ಕೆಲವು ಕಾರಣಗಳಿಂದ ಆತನ ರಕ್ತದಲ್ಲಿ ಸೇರಿದ ಬಿ ಶ್ವೇತಗೋಲಕಗಳು ಅಧಿಕ ಸಂಖ್ಯೆಗಳಲ್ಲಿ ವೃದ್ಧಿಗೊಂಡು ಆತನ ಅಂಗಾಂಗಗಳಲ್ಲಿ ಪ್ರವೇಶಿಸಿ ಕ್ಯಾನ್ಸರಿನಂತೆ ಬೆಳೆದು ಆತನ ಹೃದಯಾಘಾತಕ್ಕೆ ಕಾರಣವಾಗಿದ್ದವು.

ಪ್ಯಾರಿಸ್ಸಿನಲ್ಲಿರುವ ಪಾಶ್ಚರ್ ಸಂಸ್ಥೆಯವರೂ ಅಮೇರಿಕದ ವಿಜ್ಞಾನಿಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಏಡ್ಸ್ ರೋಗದ ಕಾರಣಗಳನ್ನು ಕಂಡು ಹಿಡಿದಿರುವರು. ಫ್ರೆಂಚ್ ವೈದ್ಯ ವಿಜ್ಞಾನಿಗಳೂ ಸಂಶೋಧನೆ ಮಾಡಿ ಏಡ್ಸ್ ರೋಗಿಗಳಲ್ಲಿ ಬೆಳೆಯುವ ಒಂದು ತರಹದ ವೈರಸನ್ನು ಪ್ರತ್ಯೇಕಿಸಿ ಕಂಡುಹಿಡಿದರು. ಇದನ್ನವರು ಲಿಂಪ್ ಏಡೆನ್ನೋಪತಿ ವೈರಸ್ ಎಂದು ಕರೆದರು. ಚುಟುಕಾಗಿ LAV ಎಂದು ಹೇಳಬಹುದು. ಅವರೆಣಿಕೆಯಂತೆ ಏಡ್ಸ್ ರೋಗ ತಗುಲಿದಾಗ ಸಾಮಾನ್ಯವಾಗಿ ಬರುವ ಜ್ವರ ದೇಹದಲ್ಲಿ ನೋವು ಇರುವದಲ್ಲದೆ ಲಿಂಪ್ ಗ್ರಂಥಿಗಳ ಊತ ಮುಂಗಿದ ಲಕ್ಷಣಗಳು ಕಂಡುಬರುತ್ತವೆ. ಏಡ್ಸ್ ರೋಗ ಬೆಳೆದು ಬಳಿಕ ಆ ರೋಗಿಯಲ್ಲಿ ಬೆಳೆದ ಗ್ರಂಥಿಗಳಿಂದ ಈ ಎಲ್.ಎ. ವಿ. ವೈರಸನ್ನು ಪ್ರತ್ಯೇಕಿಸಿ ಕಂಡುಹಿಡಿದುದಾಗಿದೆ. ಅಮೇರಿಕದ ವಿಜ್ಞಾನಿಗಳು ಕೂಡಾ ಏಡ್ಸ್ ರೋಗಿಗಳಲ್ಲಿ ರಕ್ತದ ಟಿ ಕಣಗಳನ್ನು ವಿರೋಧಿಸುವ ಒಂದು ತರದ ವಿಷ ಉಂಟಾಗುತ್ತದೆ ಎಂದೂ ಅದೇ ಏಡ್ಸ್ ರೋಗಕ್ಕೆ ಕಾರಣವೆಂದೂ ಕಂಡುಹಿಡಿದರು. ಅವರು ಆ ವಿಷವನ್ನು ಹ್ಯೂಮನ್ ಟಿ ಸೆಲ್ ಲಿಂಪೋಮಾ ಲ್ಯುಕೇಮಿಯ ವೈರಸ್ ಎಂದು ಕರೆದರು. ಸಂಕ್ಷೇಪವಾಗಿ ಅದು ಎಚ್. ಟಿ. ಎಲ್. ವಿ–೩ ಎಂದಾಗಿದೆ. ರೋಗ ಬೆಳೆದ ನಂತರವೇ ಈ ವಿಷ ರಕ್ತದಲ್ಲಿ ಉಂಟಾಗುತ್ತದೆಂದು ತಿಳಿದರು. ಯಾರಲ್ಲಿ ಈ ಎಚ್. ಟಿ. ಎಲ್.ವಿ. –೩ ವಿಷವು ದೇಹದಲ್ಲಿ ಕ್ಯಾನ್ಸರಿನಂತಹ ಗ್ರಂಥಿಗಳನ್ನು ಉಂಟುಮಾಡುವದರಿಂದ ಲ್ಯುಕೆಮಿಯಾ ಎಂಬ ರೋಗ ಉಟಾಗುತ್ತದೆ. ಇದೇ ಏಡ್ಸ್ ರೋಗ ಹರಡುವಂತೆ ಮಾಡಲು ಮೂಲ ಕಾರಣವಾಗಿದೆ ಎಂದು ಅವರ ಮತ. ಈ ಎಚ್.ಟಿ. ಎಲ್. ವಿ.–೩ ವೈರಸ್ಸು ನಮ್ಮ ಜೀವಕೋಶವು ವಿಭಾಗ ಹೊಂದಿ ವೃದ್ಧಿಯಾಗುವಂತೆ ವೃದ್ಧಿಗೊಳ್ಳುತ್ತದೆ. ಒಂದು ಜೀವಕೋಶದಲ್ಲಿ ಡಿ ಎನ್ ಎ ಮತ್ತು ಆರ್.ಎನ್.ಎ.ಎಂಬ ಎರಡು ತರಹದ ರಾಸಾಯನಿಕ ವಸ್ತುಗಳಿರುತ್ತವೆ. ಡಿ ಎನ್ ಎ ಎಂದರೆ ಡಿಯೊಕ್ಸಿರಿ ಬೋಸ್ ನ್ಯೂಕ್ಲೆಕ್ ಎಸಿಡ್ ಎಂದೂ ಆರ್. ಎನ್. ಎ. ಅಂದರೆ ರಿಬೋಸ್ ನ್ಯೂಕ್ಲಿಸ್ ಎಸಿಡ್ ಎಂದೂ ವಿವರವಾಗಿ ತಿಳಿಯಲ್ಪಡುತ್ತದೆ. ಸಾಮಾನ್ಯವಾಗಿ ಒಂದು ಜೀವ ಕೋಶವು ವೃದ್ಧಿಹೊಂದುವದು ಹೀಗೆ. ಡಿಎನ್ ಎ ಎಂಬ ರಾಸಾಯನಿಕವು ಆರ್ ಎನ್ ಎ ಎಂಬ ರಾಸಾಯನಿಕವನ್ನು ಉತ್ತೇಜಿಸಿ ಹೊಸ ಡಿ ಎನ್ ಎ ಒಂದನ್ನು ಉತ್ಪಾದಿಸುತ್ತದೆ. ಆಗ ಒಂದು ಜೀವಕೋಶವು ಒಡೆದು ಇಬ್ಭಾಗವಾಗಿ ಎರಡೂ ಸ್ವತಂತ್ರ ಜೀವಕೋಶಗಳಾಗಿ ಬೆಳೆಯುತ್ತವೆ. ಹೀಗೆಯೇ ಜೀವಕೋಶಗಳ ಬೆಳವಣಿಗೆಯಾಗುತ್ತದೆ. ಎಚ್ ಟಿ ಎಲ್ ವಿ–೩ ವೈರಸ್ಸಿನಲ್ಲಿ ಡಿ ಎನ್ ಎ ಗೆ ವಿರುದ್ಧವಾದ ಒಂದು ರಾಸಾಯನಿಕವಿರುತ್ತದೆ. ಅದು ಒಂದು ಆರ್.ಎನ್.ಎ.ಯನ್ನು ತನ್ನ ವಶಪಡಿಸಿಕೊಂಡು ಅದನ್ನು ಉತ್ತೇಜಿಸಿ ತನ್ನದೇ ಆದ ಒಂದು ಹೊಸ ಡಿಎನ್ಎಯನ್ನು ಸೃಜಿಸುತ್ತದೆ. ಈ ರೀತಿ ಎಚ್ ಟಿ ಎಲ್–೩ ರಿಂದ ಉತ್ಪತ್ತಿ ಹೊಂದಿದ ಹೊಸ ಡಿ ಎನ್ ಎ ಕ್ಯಾನ್ಸರಿನಂತಹ ಗ್ರಂಥಿಗಳನ್ನು ಬೆಳೆಸುವಂತೆ ಮಾಡುತ್ತದೆ. ಇಲ್ಲವೇ ರಕ್ತದಲ್ಲಿರುವ ಕ್ಯಾನ್ಸರಿನಂತಹ ಗ್ರಂಥಿಗಳನ್ನು ಬೆಳೆಸುವಂತೆ ಮಾಡುತ್ತದೆ ಇಲ್ಲವೆ ರಕ್ತದಲ್ಲಿರುವ ಟಿ ಕಣಗಳನ್ನು ನಾಶಗೊಳಿಸುತ್ತವೆ. ಆಗ ರಕ್ತದ ಟಿ ಕಣಗಳ ಬದಲು ಎಚ್.ಟಿ.ಎಲ್.ವಿ.–೩ ರಿಂದ ಉಂಟಾದ ಹೊಸ ಕಣಗಳು ತುಂಬಿ ಹೋಗಿ ಏಡ್ಸ್‌ರೋಗ ಉಂಟಾಗುತ್ತದೆ ಎಂದು ಅಮೇರಿಕದ ವೈದ್ಯ ವಿಜ್ಞಾನಿಗಳು ಸಂಶೋಧಿಸಿದರು. ಹಾಗಾಗಿ ಏಡ್ಸ್ ರೋಗಿಯಲ್ಲಿ ನೈಸರ್ಗಿಕವಾಗಿ ಉಂಟಾದ ರೋಗ ನಿರೋಧಕ ಶಕ್ತಿಯು ಇಲ್ಲವಾಗುತ್ತದೆ. ಫ್ರೆಂಚ್ ತಜ್ಞರು ತಮ್ಮ ಎಲ್ ಎ ವಿ ವೈರಸ್‌ನ ಕುರಿತಾದ ಸಂಶೋಧನೆಗಳನ್ನು ಮುಂದುವರಿಸುತ್ತಿದ್ದಾರೆ. ಈ ಕುರಿತಾದ ಅಂತಿಮ ನಿರ್ಣಯವು ತಿಳಿದಲ್ಲಿ ಏಡ್ಸ್ ರೋಗವನ್ನು ಹತೋಟಿಗೆ ತರಲು ಸುಲಭ ಸಾಧ್ಯವಾಗಲೂಬಹುದು. ◆



ರಾಷ್ಟ್ರದ ಉತ್ಪಾದನಾ ಶಕ್ತಿಯ ಮೇಲೆ ಅದು ಪರಿಣಾಮ ಬೀರುತ್ತದೆ

# ಸೊಂಟ ನೋವು ಪರಿಹಾರವೇನು?

**ಬಿ. ಪಾಂಡುರಂಗಯ್ಯ**

ಆಧುನಿಕ ಯುಗದಲ್ಲಿ ಮಾನವ ವೈಜ್ಞಾನಿಕ ಸಂಶೋಧನೆಗಳ ನೆರವಿನಿಂದ ಅನೇಕ ರೋಗಗಳ ಹುಟ್ಟಡಗಿಸಿದ್ದಾನೆ. ಆದರೆ ಆಧುನಿಕ ಯುಗದ ಕೊಡುಗೆಯಾಗಿ ಅನೇಕ ರೋಗಗಳು ಉಲ್ಬಣಿಸುತ್ತಿವೆ. ಕ್ಯಾನ್ಸರ್, ರಕ್ತದೊತ್ತಡ, ಹೃದಯಾಘಾತ, ತಲೆನೋವು ಮತ್ತು ಸೊಂಟ ನೋವು ಮುಂತಾದುವುಗಳು ಈ ಗುಂಪಿಗೆ ಸೇರುತ್ತವೆ.

ಅಮೇರಿಕದಲ್ಲಿ ಕ್ಯಾನ್ಸರ್ ಮತ್ತು ಹೃದಯಾಘಾತದಿಂದ ಅತಿ ಹೆಚ್ಚು ಜನ ಸಾಯುತ್ತಾರೆ, ಆದರೆ ಅಮೇರಿಕದ ಒಟ್ಟು ಜನಸಂಖ್ಯೆಯ ಮೂರನೆಯ ಒಂದು ಭಾಗದಷ್ಟು ಜನ ವಿವಿಧ ಬಗೆಯ ಸೊಂಟದ ನೋವಿನಿಂದ ಬಳಲುತ್ತಿರುವ ಸಂಗತಿ ಬಹು ಮಂದಿಗೆ ತಿಳಿಯದು. ಇಷ್ಟೇ ಅಲ್ಲ, ಪ್ರತಿ ವರ್ಷ ಸುಮಾರು ೭೦ ಲಕ್ಷ ಜನರು ಹೊಸದಾಗಿ ಸೊಂಟದ ನೋವಿನಿಂದ ಅಸಹನೀಯ ವೇದನೆಯನ್ನನುಭವಿಸುತ್ತಿದ್ದಾರೆ. ಇವರಲ್ಲಿ ೫೦ ಲಕ್ಷ ಜನರು ಆಂಶಿಕ ರೂಪದಲ್ಲಿ ಕೆಲಸ ಮಾಡಲು ಅರ್ಹರಾದರೆ, ಉಳಿದ ೭೦ ಲಕ್ಷ ಜನರು ಸಂಪೂರ್ಣವಾಗಿ ಕೆಲಸ ಮಾಡಲು ಅನರ್ಹರು ಎಂದು ಘೋಷಿಸಲ್ಪಡುತ್ತಾರೆ.

ಥಾಮಸ್ ಜೆಫರ್‌ಸನ್, ಜಾನ್ ಕೆನೆಡಿ, ಅರ್ನೆಸ್ಟ್ ಹೆಮಿಂಗ್ವೇ, ಎಲಿಜಬೆತ್ ಟೇಲರ್, ಮುಂತಾದ ಪ್ರಖ್ಯಾತ ವ್ಯಕ್ತಿಗಳೂ ಸೊಂಟದ ನೋವಿನಿಂದ ಬಳಲುತ್ತಿದ್ದರು. ಅಮೇರಿಕದ ವಿದೇಶಾಂಗ ಮಂತ್ರಿ ಸೈರಸ್ ವಾನ್ಸ್ ಮತ್ತು ಎಡ್ಮಂಡ್ ಮಸ್ಕಿ ಹಾಗೂ ಅನೇಕ ಪ್ರಸಿದ್ಧ ಕ್ರೀಡಾಪಟುಗಳೂ ಈ ಕಾಯಿಲೆಯಿಂದ ನರಳುತ್ತಿದ್ದಾರೆ.

ಸೊಂಟದ ನೋವಿನಿಂದ ವ್ಯಕ್ತಿಗತ ದುಃಖವಾಗುವುದು ಸರಿಯೇ ಸರಿ. ಆದರೆ ರಾಷ್ಟ್ರದ ಉತ್ಪಾದನಾ ಶಕ್ತಿಗೂ ಇದರಿಂದ ಕೊಡಲಿ ಪೆಟ್ಟು ಬೀಳುತ್ತದೆ. ಅಮೇರಿಕದಲ್ಲಿ ಪ್ರತಿ ವರ್ಷ ಸೊಂಟದ ನೋವಿನ ಕಾರಣದಿಂದ ೯.೩೦ ಕೋಟಿ ಮಾನವ ದಿನಗಳ ಹಾನಿಯಾಗುತ್ತಿದೆ. ಸ್ವೀಡನ್ನಿನಲ್ಲಿ ಸೊಂಟದ ನೋವಿನ ದೆಸೆಯಿಂದ ಅಲ್ಲಿನ ಸರ್ಕಾರಿ ನೌಕರರು ಅತಿ ಹೆಚ್ಚು ರಜೆಯನ್ನು ತೆಗೆದುಕೊಳ್ಳುತ್ತಾರೆ.

ಉತ್ಪಾದನೆಯಲ್ಲಿ ಭಾರೀ ನಷ್ಟದ ಜೊತೆಗೇ ಈ ರೋಗದ ಚಿಕಿತ್ಸೆಗಾಗಿ ಅಮೇರಿಕದಲ್ಲಿ ಪ್ರತಿ ವರ್ಷ ೫೦ ದಶಕೋಟಿ ಡಾಲರುಗಳನ್ನು ಖರ್ಚು ಮಾಡಲಾಗುತ್ತದೆ! ಇದಲ್ಲದೆ ಕೆಲಸ ಮಾಡಲು ಅನರ್ಹರು ಎಂದು ಘೋಷಿಸಲಾದವರಿಗೆ ವಿಮಾ ಕಂಪೆನಿಗಳು ಕೋಟ್ಯಂತರ ಡಾಲರುಗಳ ಪರಿಹಾರಧನವನ್ನೂ ನೀಡಬೇಕಾಗುತ್ತದೆ.

ಸೊಂಟದ ನೋವು ಯಾವುದೇ ವ್ಯಕ್ತಿಗೆ, ಯಾವುದೇ ವಯಸ್ಸಿನಲ್ಲಿ ಬರಬಹುದು. ಗಂಡಸ

(ಸಾಧಾರ)

ರಿರಲಿ–ಹೆಂಗಸರಿರಲಿ, ಮಕ್ಕಳಿರಲಿ, ಮುದುಕರಿರಲಿ ಈ ರೋಗ ಯಾರನ್ನೂ ಬಿಡುವುದಿಲ್ಲ.

ಈ ಸೊಂಟದ ನೋವು ಏತರಿಂದ ಬರುತ್ತದೆ? ಈ ಬಗ್ಗೆ ಪುರಾಣಗಳಲ್ಲಿ ಒಂದು ಕಥೆ ಇದೆ. ಆಗ ಮನುಷ್ಯ ಮಂಗನಂತೆ ಚತುಷ್ಪಾದಿಯಾಗಿ ಮರ–ಗಿಡಗಳ ಮೇಲೆ ವಾಸಿಸುತ್ತಿದ್ದ. ಒಂದು ದಿನ ಅವನು ಅರಣ್ಯದಲ್ಲಿ ಹೋಗುತ್ತಿದ್ದಾಗ ಅವನಿಗೆ ಹುಲಿಯೊಂದು ಎದುರಾಯಿತು. ಅವನು ಭಯದಿಂದ ತನ್ನ ಮುಂಗಾಲುಗಳನ್ನು ಮೇಲೆತ್ತಿ ಹಿಂಗಾಲುಗಳ ಮೇಲೆ ನಿಂತುಕೊಂಡ. ಆದಿ ಮಾನವನ ಈ ಅದ್ಭುತ ರೂಪವನ್ನು ಕಂಡು ಹುಲಿ ಹೆದರಿ ಓಡಿ ಹೋಯಿತು. ಆಗ ತನ್ನ ಹಿಂಗಾಲುಗಳ ಮೇಲೆ ನಡೆಯುವ ಮಹತ್ವದ ಅರಿವು ಅವನಿಗುಂಟಾಯಿತು. ಕಾಡು ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಅದನ್ನೇ ಅಭ್ಯಾಸ ಮಾಡಿಕೊಂಡ.

ಮನುಷ್ಯನ ಶರೀರದ ಸ್ವಾಭಾವಿಕ ರಚನೆ ಒಂದು ಚತುಷ್ಪಾದಿ ಪ್ರಾಣಿಯ ರೂಪದಲ್ಲಿ ಮೊದಲಿತ್ತು. ಅವನು ಈ ಸ್ವಾಭಾವಿಕ ಸ್ಥಿತಿಯಿಂದ ಮುಕ್ತನಾಗಿ ದ್ವಿಪಾದಿಯಾದಾಗಲೇ ಈ ಸೊಂಟದ ನೋವೂ ಪ್ರಾರಂಭವಾಯಿತು

ವೈಜ್ಞಾನಿಕವಾಗಿ ಚರ್ಚಿಸುವಾಗ ಸೊಂಟದ ನೋವಿಗೆ ಕಾರಣವನ್ನು ತಿಳಿಯುವ ಮೊದಲು ಸೊಂಟದ ರಚನೆಯ ಬಗ್ಗೆ ತಿಳಿದುಕೊಳ್ಳುವುದು ಅಪೇಕ್ಷಣೀಯ. ನಮ್ಮ ಸೊಂಟದ ಆಧಾರ ಬೆನ್ನಹುರಿ ಅಥವಾ ಮೇರುದಂಡ. ಈ ಬೆನ್ನುಹುರಿಯು ಮೂಳೆ ೩ ಸಣ್ಣ ಸಣ್ಣ ಮೂಳೆಗಳಿಂದ (ವರ್ಟಿಬ್ರಾ) ಕೂಡಿ ರಚಿಸಲ್ಪಟ್ಟಿದೆ. ಬೆನ್ನಹುರಿ ಕೇಂದ್ರದಲ್ಲಿ ಟೊಳ್ಳಾಗಿರುತ್ತದೆ ಮತ್ತು ಮಿದುಳಿನಿಂದ ಹೊರಟ ಮೇರುದಂಡ (ಸ್ಪೈನಲ್ ಕಾರ್ಡ್) ಇದರಲ್ಲಿ ಸುರಕ್ಷಿತವಾಗಿರುತ್ತದೆ. ಮೇರುದಂಡದಿಂದ ಅನೇಕ ಸೂಕ್ಷ್ಮ ನರತಂತುಗಳು ತಮ್ಮ ಬಾಲವನ್ನು ಹರಡಿಕೊಂಡಿರುತ್ತವೆ ಮತ್ತು ಬೆನ್ನೆಲುಬಿನ ಸಂದಿನಿಂದ ಹೊರಟು ಇವು ಶರೀರದ ಅನೇಕ ಅಂಗಗಳನ್ನೂ ತಲಪಿ, ಆ ಅಂಗಗಳ ಸಂಚಾಲನೆಯನ್ನು ಮಾಡುತ್ತಿರುತ್ತವೆ.

ಬೆನ್ನೆಲುಬಿನ ಮೂಳೆಗಳ ಮಧ್ಯೆ ಪ್ಲೇಟನುಮಾ ಡಿಸ್ಕ್‌ಗಳಿರುತ್ತವೆ. ಇವು ಮೂಳೆಗಳಲ್ಲಿ ಘರ್ಷಣೆಯುಂಟಾಗುವುದನ್ನು ತಪ್ಪಿಸ



ತ್ತವೆ. ಅನೇಕ ಬಾರಿ ಅಚಾನಕವಾಗಿ ಅಥವಾ ಭಾರೀ ಬಾಹ್ಯ ಒತ್ತಡದ ಕಾರಣದಿಂದ ಈ ಡಿಸ್ಕ್‌ಗಳು ಮುರಿದು ಹೋಗುತ್ತವೆ. ಸ್ಥಾನಪಲ್ಲಟಗೊಳ್ಳುತ್ತವೆ. ಈ ರೀತಿಯಾಗಿ ಮೂಳೆಗಳು ಜಾರುವುದನ್ನು ವೈದ್ಯಕೀಯ ಪರಿಭಾಷೆಯಲ್ಲಿ 'ಹಾರ್‌ನಿಯೇಟೆಡ್' ಅಥವಾ 'ಸ್ಲಿಪ್ಡ್ ಡಿಸ್ಕ್' ಎಂದು ಕರೆಯಲಾಗುತ್ತದೆ. ಇದರ ಫಲವಾಗಿ ಮುರಿದು ಹೋದ ಅಥವಾ ಜಾರಿದ ಡಿಸ್ಕನ್ನು ಆ ತುಂಡು ಮೇರುದಂಡ ಹಾಗೂ ಮೇರು ನಾಡಿಗಳ ಮೇಲೆ ಒತ್ತಡ ವನ್ನುಂಟುಮಾಡುತ್ತದೆ. ಇದೇ ಸೊಂಟದ ನೋವಿನ ರೂಪದಲ್ಲಿ ವ್ಯಕ್ತವಾಗುತ್ತದೆ.

ಇದಲ್ಲದೆ ಕೆಲವು ವ್ಯಕ್ತಿಗಳ ಶರೀರದ ಪ್ರಕೃತಿಯಂತೆ, ಅವರ ಶರೀರದಲ್ಲಿ ಕ್ಯಾಲ್ಸಿಯಂನ ಒಂದು ದೊಡ್ಡ ಭಾಗ ಬೆನ್ನೆಲುಬಿನ ಸಣ್ಣ ಸಣ್ಣ ಮೂಳೆಗಳ ಸಂದಿನಲ್ಲಿ ಶೇಖರವಾಗುತ್ತದೆ. ಇದರಿಂದ ಈ ಮೂಳೆಗಳ ಸ್ವಾಭಾವಿಕ ಸ್ವತಂತ್ರ ಸಂಚಾಲನೆ ನಿಂತುಹೋಗುತ್ತದೆ ಇದರೊಂದಿಗೇ ಸೊಂಟದ ಬಳಕುವಿಕೆ ಕ್ರಮೇಣ ಕಡಿಮೆಯಾಗುತ್ತಾ ಹೋಗುತ್ತದೆ. ಸೊಂಟದ ಮಾಂಸಖಂಡಗಳು ದುರ್ಬಲವಾಗುತ್ತವೆ. ಮೊದಲು ಈ ಸುಪುಷ್ಟ ಮಾಂಸ ಖಂಡಗಳ ಮೇಲೆ ಬೀಳುತ್ತಿದ್ದ ಶರೀರದ ಪೂರ್ಣ ಭಾರ ಈಗ ನೇರವಾಗಿ ಬೆನ್ನೆಲುಬಿನ ಮೇಲೆ ಬೀಳುತ್ತದೆ. ಸೊಂಟದ ಎಲುಬುಗಳ ಸಂದಿನಿಂದ ಹಾದು ಹೋಗುವ ನರತಂತುಗಳು ಇದರಿಂದ ಸಂಕುಚಿತಗೊಳ್ಳುತ್ತವೆ. ಅಕ್ಕ ಪಕ್ಕದ ನರತಂತುಗಳು ಕೂಡಲೇ ಉತ್ತೇಜಿತ ವಾಗುತ್ತವೆ. ಆಗ ನಮಗೆ ಸೊಂಟದ ನೋವಿನ ಅರಿವುಂಟಾಗುತ್ತದೆ. ಈ ಪ್ರಕಾರದ ಸೊಂಟದ ನೋವಿಗೆ ವೈದ್ಯಕೀಯ ಭಾಷೆಯಲ್ಲಿ 'ಎನ್‌ಕೋಲೈಜಿಂಗ್ ಸ್ಪಾಂಡೆಲೈಟಿಸ್' ಎಂದು ಕರೆಯಲಾಗುತ್ತದೆ.

ಸೊಂಟದ ನೋವಿಗೆ ವೈದ್ಯರು ಅನೇಕ ಚಿಕಿತ್ಸೆಗಳನ್ನು ನೀಡುತ್ತಾರೆ. ಅವುಗಳಲ್ಲಿ ಪ್ರಮುಖವಾದುವೆಂದರೆ — ಸಂಪೂರ್ಣವಾಗಿ ಹಾಸಿಗೆಯಲ್ಲಿ ವಿಶ್ರಾಂತಿ ಪಡೆಯುವುದು, ವ್ಯಾಯಾಮ, ಶಸ್ತ್ರಚಿಕಿತ್ಸೆ, ವಿಶೇಷ ಪ್ರಕಾರದ ಪಲ್ಲಂಗದ ಮೇಲೆ ರೋಗಿಯ ಶರೀರವನ್ನು ಎಳೆದು ಇಡುವುದು (ಟ್ರ್ಯಾಕ್ಷನ್) ಹಾಗೂ ಆಕ್ಯುಪಂಕ್ಚರ್.

ಇದಲ್ಲದೆ ಅಧಿಕ ನೋವನ್ನು ಶಮನಗೊಳಿಸಲು ಅನೇಕ ಪ್ರಕಾರದ ಗುಳಿಗೆಗಳನ್ನು, ಕ್ಯಾಪ್ಸೂಲ್‌ಗಳನ್ನು ವೈದ್ಯರು ಸೂಚಿಸುತ್ತಾರೆ. ಈ ಎಲ್ಲ ಔಷಧಗಳ ಮೂಲ ಆಸ್ಪಿರಿನ್. ಈ ಔಷಧಿಗಳಿಂದ ನೋವು ಸ್ವಲ್ಪ ಕಡಿಮೆಯಾಗುತ್ತದೆ. ರೋಗಿ ಸರಿಯಾಗಿ ವ್ಯಾಯಾಮ ಮಾಡಲು ಸಮರ್ಥನಾಗುತ್ತಾನೆ. ವ್ಯಾಯಾಮದಿಂದ ಸೊಂಟದ ಮಾಂಸಖಂಡಗಳು ಬಲಯುತಗೊಳ್ಳುತ್ತವೆ. ಶರೀರದ ಭಾರ ನೇರವಾಗಿ ಬೆನ್ನೆಲುಬಿನ ಮೇಲೆ ಬೀಳುವುದಿಲ್ಲ.

ಯೋಗಾಸನಗಳಿಂದಲೂ ಸೊಂಟದ ನೋವನ್ನು ನಿವಾರಿಸಿಕೊಳ್ಳಬಹುದು. ಈ ದಿಸೆಯಲ್ಲಿ ಅನುಭವಿಗಳ ಮಾರ್ಗದರ್ಶನ ಅತ್ಯಗತ್ಯ.

ಈಗೀಗ ಮೂಳೆರೋಗತಜ್ಞರು ಸೊಂಟದ ನೋವಿಗೆ ಶಾರೀರಿಕ ವಿಕಾರಗಳಿಂದಲೂ ಮಾನಸಿಕ ಚಿಂತೆ ಮತ್ತು ಅಶಾಂತಿಯೇ ಮೂಲ ಕಾರಣ ಎಂದು ಪತ್ತೆ ಹಚ್ಚಿದ್ದಾರೆ. ಮಾನಸಿಕ ಅಸ್ವಾಸ್ಥ್ಯದಿಂದ ಶರೀರವನ್ನು ಸ್ವಸ್ಥವಾಗಿಡಲು ಕಾರಣವಾಗಿರುವ ಕೆಲ ರಾಸಾಯನಿಕ ವಸ್ತುಗಳ ಉತ್ಪಾದನೆ ನಿಂತು ಹೋಗುತ್ತದೆ. ಮಾನಸಿಕ ಅಸ್ವಾಸ್ಥ್ಯವನ್ನೂ ಕೆಲ ಯೋಗಾಸನಗಳಿಂದ ಮತ್ತು ಧ್ಯಾನದಿಂದ ದೂರ ಮಾಡಿಕೊಳ್ಳಬಹುದು ಎಂಬುದು ವೈಜ್ಞಾನಿಕ ಪ್ರಯೋಗಗಳಿಂದ ದೃಢೀಕರಿಸಲ್ಪಟ್ಟಿದೆ. ಧ್ಯಾನದಿಂದ ಮನುಷ್ಯನಿಗೆ ಮಾನಸಿಕ ಶಾಂತಿ ಪ್ರಾಪ್ತವಾಗುತ್ತದೆ. ಇದರಿಂದ ಶರೀರವನ್ನು ಸ್ವಸ್ಥವಾಗಿಡಲು ಸಹಕಾರಿಯಾಗುವ ರಾಸಾಯನಿಕಗಳ ಉತ್ಪಾದನೆ ಪುನಃ ಪ್ರಾರಂಭವಾಗುತ್ತದೆ. ಆಕ್ಯುಪಂಕ್ಚರ್‌ನಿಂದಲೂ ಗಮನಾರ್ಹ ಪರಿಣಾಮವಾಗುತ್ತದೆ.

# ಸ್ವಪ್ನ

ನೇತ್ರಾವತಿ ಅಭಿರಾಮಮೂರ್ತಿ

ಮೇಜಿನ ಮೇಲೆ ಅಂದಿನ ಅಂಚೆಯಲ್ಲಿ ಬಂದಿದ್ದ ಕಾಗದ ಪತ್ರಗಳು ಒಂದೆಡೆ ಟ್ರೇಯಲ್ಲಿ ರಾಶಿಯಾಗಿ ಬಿದ್ದಿದ್ದವು. ಮತ್ತೊಂದೆಡೆ ಆ ದಿನ ನೋಡಬೇಕಾಗಿದ್ದ ಫೈಲುಗಳು. ಆದರೆ ಮಧುವಿನ ಗಮನ, ಅವುಗಳ ಮೇಲೆ ಹೋಗಲು ಹಿಂದೇಟು ಹೊಡೆಯುತ್ತಿತ್ತು; ಹೊಸ ರಸ್ತೆಗೆ ಬಂದ ಜಟಕಾಗಾಡಿಯ ಕುದುರೆಯಂತೆ. ಪ್ರತಿ ದಿನ ಸರಸರನೆ ಕಣ್ಣಾಡಿಸಿ ಸರಸರನೆ ಸಹಿ ಹಾಕಿ ಕಾಗದಗಳನ್ನು ಔಟ್ ಟ್ರೇಗೆ ಹಾಕುತ್ತಿದ್ದ ಮಧು ಆಲೋಚನಾಮಗ್ನನಾಗಿ ಕುಳಿತುಬಿಟ್ಟಿದ್ದ.

ಕೊಠಡಿಯ ಒಂದು ಮೂಲೆಯ ಮೇಲ್ಭಾಗದಲ್ಲಿ ಸೋಮಯ್ಯನ ಅಶ್ರದ್ಧೆಯ ಫಲವಾಗಿ ಜೇಡ ಉದರನಿಮಿತ್ತ ಬಲೆನೇಯುತ್ತಿತ್ತು. ಜೇಡ ಅದೆಷ್ಟು ಏಕಾಗ್ರತೆಯಿಂದ ಶ್ರದ್ಧೆಯಿಂದ ಕೆಲಸ ಮಾಡುತ್ತಿದೆ! ಅದರ ಶ್ರದ್ಧೆಯಲ್ಲಿ ಹತ್ತರಲ್ಲೊಂದು ಅಂಶವಾದರೂ ನಮ್ಮ ಕಚೇರಿಯ ಸಿಬ್ಬಂದಿಗಿರಬಾರದೆ ? ಹಾಗೇನಾದರೂ ಇದ್ದಿದ್ದರೆ ನಮ್ಮ ಕಂಪೆನಿ ಈ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಎಷ್ಟೊ ಮುಂದೆ ಸಾಗಿರುತ್ತಿತ್ತು.

ನಮ್ಮ ಸಿಬ್ಬಂದಿಯಲ್ಲಿ ಒಬ್ಬೊಬ್ಬರದೂ ಒಂದೊಂದು ರೀತಿ. ರಾಮದಾಸಪ್ಪನಿಗೆ ವಯಸ್ಸು ಹೆಚ್ಚುತ್ತಾ ಹೋದಂತೆ ಇನ್ನೊಬ್ಬರನ್ನು ಆಡಿಕೊಳ್ಳುವ ಗುಣವೂ ಹೆಚ್ಚುತ್ತಿದೆಯೇನೋ ಎನಿಸುತ್ತದೆ. ಮಂಜುನಾಥನಿಗೆ ಇನ್ನೊಬ್ಬರ ವಿಚಾರ ಕೇಳುವುದರಲ್ಲಿ ತಿಳಿದುಕೊಳ್ಳುವದಲ್ಲಿ ಬಹಳ ಆಸಕ್ತಿ. ಆಲಮೇಲಮ್ಮನಿಗೆ ತಾನು ಮಾಡುವ ಕೆಲಸಕ್ಕಿಂತ ಉಳಿದವರೆಷ್ಟು ಮಾಡಿದರು ಎಂಬುದು ಮುಖ್ಯ. ಸುನೀತಿಯಂತೂ ಇಲ್ಲಿ ಕೆಲಸ ಹಿಡಿಯುವ ಬದಲು ಯಾವುದಾದರೂ ಟೆಕ್ಸ್‌ಟೈಲ್ ಕಂಪನಿಯಲ್ಲಿ ಫ್ಯಾಷನ್ ಮಾಡಲ್ ಆಗಿದ್ದರೆ ಆ ಕಂಪನಿಗಿಂತ ನಮ್ಮ ಕಂಪನಿ ಎಷ್ಟೋ ಉದ್ಧಾರವಾಗುತ್ತಿತ್ತು. ಅವಳ ಅಲಂಕಾರ ಶೃಂಗಾರಗಳಿಗೇ ದಿನಕ್ಕೆ ಇಪ್ಪತ್ನಾಲ್ಕು ಗಂಟೆಗಳು ಸಾಲವು. ಇನ್ನು ಕಚೇರಿ? ಅದರ ಕೆಲಸ?

ಇನ್ನು ಹೊಸದಾಗಿ ಬಂದಿರುವ ಜಯಂತಿ.—ತನಗೆ ಪತ್ರ ಬರೆದಿರುವ ಜಯಂತಿ?

ಅವಳೊಬ್ಬಳು ಈ ಉಳಿದವರ ಜಾಡನ್ನ ತುಳಿಯಲಾರಳು ಎಂದುಕೊಂಡಿದ್ದೆ. ಅವಳು ಬಂದು ಇನ್ನೂ ಒಂದು ತಿಂಗಳಾಯಿತಷ್ಟೇ. ಇನ್ನೊಂದು ತಿಂಗಳಲ್ಲಿ ಇವರೆಲ್ಲರೂ ಸೇರಿ ಅವಳ ಕಿವಿಯನ್ನು ಹಿಡಿಬಿಟ್ಟಿರುತ್ತಾರೆ. ಅನಂತರ ಅವಳೂ ಈ ಹತ್ತು ಜನರಲ್ಲಿ ಒಬ್ಬಳಾಗಿ ಹೋಗುತ್ತಾಳೆ.

ಆ ಪತ್ರ !

ಆ ಪತ್ರ ನೋಡಿದರೆ ಹಾಗೆ ಎನಿಸುತ್ತದೆ ಆ ಪತ್ರ ಆ ನಿಟ್ಟಿನತ್ತ ಮೊದಲ ಮೆಟ್ಟಲೇನೋ?

ಓಹ್ ಹೀಗೇ ಆಲೋಚಿಸುತ್ತ ಕುಳಿತು ಬಿಟ್ಟರೆ ಆ ಜೇಡ ತನ್ನ ತಲೆಯ ಮೇಲೂ ಬಲೆನೇಯತೊಡಗಬಹುದು!

ಫಟ್ಟನೆ ಎದ್ದ ಮಧು. ಅನತಿದ್ದ ರ್‍ಯಾಕ್ಕೆ ಕೈ ತಗುಲಿ ಮೇಜಿನ ಮೇಲಿದ್ದ ಮ್ಯಾನೇಜರ್ ಎಂಬ ಫಲಕ ಕೆಳಗೆ ಬಿತ್ತು. ತಾನೇ ಎತ್ತಲು ಬಗ್ಗಿದ್ದ. ಇಲ್ಲಿ ಕಸ ತೆಗೆದು ಎಷ್ಟು ಯುಗವಾಯಿತೋ, ಎಂಬಷ್ಟು ಧೂಳಿನರಾಶಿ. ಸೋಮಯ್ಯನನ್ನು ಕರೆದು ಕೇಳಿದರೆ ಮಾಮೂಲು ಉತ್ತರವೇ ದೊರೆಯುತ್ತದೆ. "ಮಾಡೀ ಪ್ಯಾಗಳ ರೂಮು ಬುದ್ಧಿ ಎಷ್ಟದಪ ಗುಡಿಸಿದ್ರೂ ಕಸ ಬರ್‍ತೈತೆ." ಅದ್ದರಿಂದ ಕಸ ಯಾಕೆ ಗುಡಿಸಬೇಕು ಎಂಬುದೇ ಅವನ ವಾದ. ತನಗೆ ಇಲ್ಲಿಂದ ಇಂದೋ ನಾಳೆಯೋ ಎತ್ತಂಗಡಿ ಎಂಬುದು ಮೊದಲಿನಿಂದಲೇ ನಿರೀಕ್ಷಿಸಿದ್ದ ಸಂಗತಿ. ಆದ್ದರಿಂದ ಎಲ್ಲ ಸುಧಾರಣೆಗಳನ್ನು ತಾನು ಮೊದಲು ಮಾಡಬಹುದು ಅಷ್ಟೇ. ಕೊನೆ ಹೀಗಾದೀತೆಂದು ನೋಡಲು ತಾನು ಖಂಡಿತ ಇರುವುದಿಲ್ಲ.

ಬಾಗಿಲು ಕಿರ್‍ರೆಂದಿತು. ಸೋಮಯ್ಯ ಒಂದು ವಿಸಿಟಿಂಗ್ ಕಾರ್ಡ್ ತಂದುಕೊಟ್ಟ. ಮಧುವಿನ ಆದೇಶದಂತೆ ಯಾವುದೋ ಬ್ಯಾಂಕಿನ ಆಫೀಸರ್ ಒಳ ಬಂದರು. ಮಾತಾಡಿ ಹೋದರು.

ಮಧು ಮತ್ತೆ ತನ್ನ ಚಿಂತೆಯ ಸುಳಿಯೊಳಗೇ ಲೀನವಾಗಿ ಹೋದ.

ಆ ಪತ್ರವನ್ನು ಜೇಬಿನಿಂದ ಹೊರತೆಗೆದ. ವಿಳಾಸ ತನ್ನದು ಹೌದೋ ಅಲ್ಲವೋ ತಾನು ಬೇರೆಯವರ ಪತ್ರವನ್ನು ಒಡೆದು ಓದಿದನೇ ಎಂದು ಅನುಮಾನವಾಯಿತು. ಆದರೆ ಸರಿಯಾದ ವಿಳಾಸ ಸರಿಯಾದ ಹೆಸರು ಅವನ ಅನುಮಾನ ವನ್ನು ತಳ್ಳಿ ಹಾಕಿತು.

ಪತ್ರ ಬರೆದವರು ತನಗೆಷ್ಟರ ಮಟ್ಟಿಗೆ ಪರಿ ಚಿತರು?

ಜಯಂತಿ!

ಈ ಹೆಸರಿನವರು ತನ್ನ ಪರಿಚಿತರಲ್ಲಿ ಯಾರಿದ್ದಾರೆ? ಎಷ್ಟೆಷ್ಟು ತಲೆ ಕೆರೆದರೂ ಆ ಹೆಸರಿನವರು ಯಾರೂ ನೆನಪಿಗೆ ಬರುತ್ತಿಲ್ಲ. ಹಾಗಾದರೆ ಆ ಪತ್ರ ಬರೆದ ಜಯಂತಿ ಈ ಕಚೇರಿಗೆ ಹೊಸದಾಗಿ ಸೇರಿದ ಜಯಂತಿಯೇ ಇರಬೇಕು.

ಆದರೆ, ಅವಳಂತೂ ಸದಾ ಒಂಟಿಯಾಗಿಯೇ ಇರುತ್ತಾಳಲ್ಲ ! ಅವಳನ್ನು ನೋಡಿದರೆ, ಪುಸ್ತಕಕ್ಕಿಂತ ಬೇರೆ ಸಂಗತಿಯೇ ಅವಳಿಗೆ ಜೀವ ಮೇಲು ಕಾಣುತ್ತದೆ. ಯಾರೊಂದಿಗೂ ಅವಳು ಮಾತಾಡಿದ್ದನ್ನು ನಾನಿದುವರೆಗೆ ನೋಡಿದ್ದೇ ಇಲ್ಲ. ಅಥವಾ ನಾನು ಅಲ್ಲಿ ಓಡಾಡುವಾಗ ಅಷ್ಟು ಸಭ್ಯಳಂತೆ ನಟಿಸುತ್ತಾಳೊ? ನನ್ನ ಬಳಿಯಂತೂ ಅವಳಿಗೆ ನಾಚಿಕೆಯೋ ಹೆದರಿಕೆಯೋ ಆ ದೇವರೇ ಬಲ್ಲ ನಾನೇನಾದರೂ ಸೂಚನೆ ಕೊಟ್ಟರೆ ಹೂಂ ಸರಿ ಆಗಲಿ ಇಲ್ಲ ಇಷ್ಟು ಬಿಟ್ಟರೆ ಬೇರೇನೂ ಅವಳೆಂದದ್ದನ್ನು ನಾನು ಕೇಳಿಯೇ ಇಲ್ಲ. ಎಲ್ಲರಂತೆ ಅವಳು ನಾಲ್ಕು ಮಾತಾಡಿದ್ದನ್ನು ನಾನು ನೋಡಿಯೇ ಇಲ್ಲ. ಅಂಥವಳಿಗೆ–ನನಗೆ ಕಾಗದ ಬರೆಯಲು ಧೈರ್ಯ ಬಂತೇ? ಹಾಗೆ ಧೈರ್ಯ ಬಂದರೆ, ಆಫೀಸಿನಲ್ಲಿ ನನ್ನೊಡನೆ ಮಾತಾಡುವಷ್ಟು ಧೈರ್ಯ ಬರಬಹುದೇನೋ ಅಷ್ಟೆ. ಏನಾದರೂ ವಿಚಾರ ಹೇಳುವದಿದ್ದರೆ ಆಫೀಸಿನಲ್ಲಿ ಹೇಳಬಹುದು. ಕಾಗದವನ್ನೇಕೆ ಬರೆದಾಳು? ಖಂಡಿತ ಅವಳಲ್ಲ ಎನಿಸುತ್ತದೆ. ಆದರೆ ಸಹಿ ಮಾತ್ರ ಲಕ್ಷಣವಾಗಿ ಜಯಂತಿ ಎಂದೇ ಇದೆಯಲ್ಲ!

ಕಚೇರಿಯಲ್ಲಿ ಅವಳ ಇಂಗ್ಲೀಷ್ ಸಹಿ ನೋಡಿದ್ದೇನೆ. ಇದರಲ್ಲಿ ಕನ್ನಡದಲ್ಲಿ ಕಾಗದ ಬರೆದಿದ್ದಾಳೆ. ಕನ್ನಡದಲ್ಲಿ ಸಹಿ ಮಾಡಿದ್ದಾಳೆ. ಮೇಲ್ನೋಟಕ್ಕೆ ಹೋಲಿಸುತ್ತಿದ್ದರೂ ಬರೇ ಹೆಸರಿನಿಂದ ಮಾತ್ರ ನನೆ ಸಿರುವಂತಿದೆಯಲ್ಲ. ಅಂತೂ ಕಾಗದ ಬರೆದವಳು ಅವಳೇ ಇರಬೇಕು. ಅದ ಹಾಗೆ ಅವಳಿಗೆ ನನ್ನ ವಿಳಾಸ ಎಲ್ಲಿ ಸಿಕ್ಕಿತು?

ಈ ಕಾಗದ ಬೆಳಿಗ್ಗೆ ನನಗೂ ಅಮ್ಮನಿಗೂ ಮಧ್ಯೆ ಬಂದು ನಿಂತಿತಲ್ಲ! ನಾನು ಊಟ ಮಾಡುತ್ತಿದ್ದೆ, ಅಮ್ಮ ಬಡಿಸುತ್ತಿದ್ದಳು. ಅದೇನೋ "ಮಧು ಪೋಸ್ಟ್ ಬಂದ ಹಾಗಿತ್ತು ಎಂದಳು." ಅಮ್ಮನಿಂದ

ನನ್ನನ್ನು ಮುಚ್ಚಿಡದ ನಾನು ಈ ಪತ್ರದ ಬಗ್ಗೆ ಸುಳ್ಳಾಡಬೇಕಾಗಿ ಬಂದಿತ್ತು. ಉತ್ತರ ತಕ್ಷಣ ಹೊಳೆಯದೆ ನಾನು ನೆತ್ತಿ ಹತ್ತಿದಂತೆ ನಾಟಕ ಮಾಡಿ ಜೋರಾಗಿ ಕೆಮ್ಮಿದ್ದೆ: "ಅಯ್ಯೋ ನೆತ್ತಿಗೆ ಹತ್ತಿತೇನೋ ಮಗು ಪಾಪ ಅಮ್ಮ ನನ್ನ ಬಂದು ಬೆನ್ನ ತಟ್ಟಿ ಬಹಳ ಸಮಾಧಾನದ ಮಾತಾಡಿದಳು. ಆದರೂ ಮತ್ತೆ ಜ್ಞಾಪಿಸಿಕೊಂಡು ಕೇಳಿಯೇ ಕೇಳಿದಳು. ಮುಂಬಯಿಯಲ್ಲಿದ್ದ ಅಪ್ಪ ಪತ್ರ ಬರೆದರೇನೋ ಎಂಬ ಕುತೂಹಲ ಅಮ್ಮನಿಗೆ. ಆದರೆ ಅಪ್ಪನ ಪತ್ರ ಬಂದರೆ ಅಮ್ಮನಿಗೆ ಹೇಳದಿರುತ್ತೇನೆಯೇ ನಾನು? ಇದೇನು ಹುಚ್ಚುತನ ಅಮ್ಮನದು ಎನಿಸಿತು. ಕೊನೆಗೆ ನಾನು "ಅದು ನಮ್ಮ ಪತ್ರ ಅಲ್ಲ, ಪಕ್ಕದ ಮನೆ ಗುಂಡೂರಾಯರದು, ಹೊಸ ಪೋಸ್ಟ್‌ಮನ್ ಗೊತ್ತಿಲ್ಲದೆ ನಮಗೆ ಕೊಟ್ಟ" ಎಂದು ಸುಳ್ಳಾಡಿದೆ. ಅಮ್ಮ ಸುಮ್ಮನಾದಳು. ಸರಿ, ಆದರೆ ಪಕ್ಕದ ಮನೆಗೆ ಹೋದಾಗ ಯಾವುದೋ ಮಾತಿಗೆ ಬಂದು "ಬೆಳಿಗ್ಗೆ ನಿಮಗೊಂದು ಪತ್ರ ಬಂದಿತ್ತು" ಎಂದುಬಿಟ್ಟರೆ? ಆಗ ಅವರು ನನ್ನ ಬಗ್ಗೆ ಎಷ್ಟೊಂದು ತಪ್ಪಾಗಿ ಯೋಚಿಸುತ್ತಾರೆ! ದೇವರೇ ಸಧ್ಯ ಹಾಗಾಗದಿರಲಪ್ಪ ಅಮ್ಮ ಆ ಪತ್ರದ ಬಗ್ಗೆ ಅವರ ಮನೆಯಲ್ಲಿ ವಿಚಾರವೆತ್ತದಿರಲಿ.

ಅಂತೂ ಎಲ್ಲ ಈ ಹಾಳು ಪತ್ರದಿಂದ! ಅದನ್ನು ಜೇಬಿನಿಂದ ತೆಗೆದು ಹರಿಯ ಹೊರಟ ಮಧು. ಆದರೆ ಅವನ ವಿವೇಚನೆ ಅವನನ್ನೆಚ್ಚರಿಸಿತು. ಅವಳನ್ನು ಕರೆದು ಕೇಳುವವರೆಗಾದರೂ ಈ ಪತ್ರ ಇರುವುದು ಬೇಡವೇ? ಅದಕ್ಕಾಗಿ ಇದು ನನ್ನಲ್ಲಿರಲಿ, ಅಂದುಕೊಂಡ.



ಬೆಳಿಗ್ಗೆ ಆಫೀಸಿಗೆ ಬಂದಾಗ ಈ ಜಯಂತಿ ಯಥಾ ಪ್ರಕಾರ ತನ್ನ ಟೈಪ್‌ರೈಟರ್ ಮುಂದೆ ಆಸೀನಳಾಗಿದ್ದಳು. ನಾನು ಬಂದದ್ದನ್ನು ಗಮನಿಸಲೇ ಇಲ್ಲ. ಹೀಗೆಲ್ಲ ಪತ್ರ ಬರೆದು ಎದುರಿಗೆ ಬಂದಾಗ ಕಂಡೂ ಕಾಣದಂತಿರುವುದೆ? ಅವಳು ಸೇರಿದ ಹೊಸತರಲ್ಲಿ ನನಗೆ ಒಂದೆರಡು ದಿನ ಅವಳನ್ನೇ ನೋಡುವಾಸೆಯಾಗಿತ್ತು. ಆದರೆ ನಾನು ನನ್ನ ಮನಸ್ಸಿಗೆ ಬಲವಾದ ಕಡಿವಾಣ ಹಾಕಿದ್ದೆ.

ಜಯಂತಿಗೆ ನನ್ನ ಬಗ್ಗೆಯೇ ಏಕೆ ಯಾರ ಮೇಲೂ ಆಸಕ್ತಿಯಿರುವಂತೆ ಕಾಣಲಿಲ್ಲ! ಯಾರೊಂದಿಗೂ ಮಾತಿಲ್ಲ, ಕತೆಯಿಲ್ಲ. ಕಾಫಿಗೆ ಕೂಡ ಅವಳು ಹೊರಗೆ ಹೋಗುವದಿಲ್ಲ.

ಇಷ್ಟಕ್ಕೂ ಮೀರಿ ಯಾವ ಹುತ್ತದಲ್ಲಿ ಯಾವ ಹಾವೊ ಯಾರ್ಯಾರ ಕಥೆ ಏನಿದೆಯೋ ನನಗೇಕೆ? ಆದರೆ ಅವಳೇನಾದರೂ ಗಮನಿಸಿದ್ದಿರಬಹುದೇ ನನ್ನಾಸೆಯನ್ನು? ಛೀ ಇಂತಹ ಹೆಂಗಸಿನೊಂದಿಗೆ ಮಾತುಕತೆ. ಒಡನಾಟ, ಛಿ ಛಿ ಖಂಡಿತ ಬೇಡಪ್ಪ, ನಾನು ಅವಿವಾಹಿತ ಎಂದು ಏನೋ ಬಲೆ ಬೀಸ




"ಹೈಜಂಪ್ ಪ್ರಥಮ ಬಹುಮಾನ..."

ಹೊರಟಿರಬೇಕು! ಆ ಚೆಲುವಿನ ಹಿಂದೆ ಒಳ್ಳೆಯ ನಡತೆಯಿದೆ. ಸೌಜನ್ಯ ಇದೆ ಎಂದು ನಾನು ಭಾವಿಸಿದ್ದೇ ತಪ್ಪಾಯಿತು. ಈ ಕಾಗದ ನನ್ನ ಭಾವನೆಗಳನ್ನೆಲ್ಲ ಒದ್ದು ಬಿಸಾಡಿದೆ.

ಆ ವೈಯಾರಿ ಸುನೀತಿಯೇ ಇವಳಿಗೀತ ವಾಸಿ ಎಂದು ತೋರುತ್ತದೆ. ಚೆಲ್ಲು ಚೆಲ್ಲಾಗಿ ಆಡಿದರೂ ಹೀಗೆ ಪತ್ರ ಬರೆದು ನನ್ನನ್ನು ಇಕ್ಕಟ್ಟಿಗೆ ಸಿಕ್ಕಿಸುವುದಿಲ್ಲ! ಬೇರೆ ಕಾಗದ ಬೇರೆಯವರ ಕೈಗೆ ಸಿಕ್ಕಿದ್ದರೆ ನನ್ನ ಗತಿಯೇನಾಗುತ್ತಿತ್ತು? ನನ್ನ ಮರ್ಯಾದೆ ಏನಾಗುತ್ತಿತ್ತು? ಇಷ್ಟೆಲ್ಲ ಅನಾಹುತ ಮಾಡಿದ ಆ ಪತ್ರವನ್ನು ಬರೆದವಳಿಗೆ ತಕ್ಕ ಶಾಸ್ತಿ ಮಾಡಿಸಲೇಬೇಕು. ಜಯಂತಿ ಬರುತ್ತಿದ್ದ ಹಾಗೆ ಬಲೆ ಬೀಸುತ್ತಿರುವಂತಿದೆ. ಇದಕ್ಕೆಲ್ಲ ಹೆದರುವವನೇ ನಾನು? ಜಯಂತಿಗೆ ಇಂಥ ಬುದ್ಧಿ ಇರುವ ಹೊತ್ತಿಗೆ ಸುನೀತಿ ಅನೇಕ ಬಾರಿ ಅವಳ ಮೇಲೆ ದೂರು ಹೇಳುತ್ತಾಳೆಂದು ತೋರುತ್ತದೆ.

ಮಧ್ಯಾಹ್ನ ಲಂಚ್ ಟೈಮಿನಲ್ಲಿ ಕಾಫಿ ಕುಡಿಯಲು ಹೋದಾಗ ನೋಡಿದೆ. ಜಯಂತಿ ಯಾವುದೋ ಪುಸ್ತಕ ಓದುತ್ತಾ ಕುಳಿತಿದ್ದಳು. ಉಳಿದೆಲ್ಲ ಸೀಟುಗಳು ಖಾಲಿ. ಪ್ರಾಯಶಃ ಯಾರೂ ಇಲ್ಲದಾಗ ನನ್ನೊಡನೆ ಮಾತನಾಡಬೇಕೆಂದು ಯೋಚನೆ ಮಾಡಿದ್ದಾಳೋ? ಅದಕ್ಕೆ ನಾನೇಕೆ ಅವಕಾಶಕೊಡಬೇಕು? ನನ್ನಷ್ಟಕ್ಕೆ ನಾನು ಸರಸರನೆ ನಡೆದೆ. ಕಾಫಿ ಕುಡಿದು ಬಂದಾಗಲೂ ಅವಳು ಹಾಗೆಯೇ ಕುಳಿತಿದ್ದಳು. ಉಳಿದವರು ಒಬ್ಬೊಬ್ಬರಾಗಿ ಬರತೊಡಗಿದ್ದರು. ಸುನೀತಿ ಜಯಂತಿಯನ್ನು ಕೇಳುತ್ತಿದ್ದಳು.

"ಏನು ಜಯಂತಿ, ಇನ್ನೂ ಕಾಫಿಗೆ ಹೋಗದೆ ಕೂತಿದೀಯಾ? ಯಾರ ಜೊತೆಗೋಸ್ಕರ ಕಾಯ್ತಾ ಇದೀಯಾ?" ಅವಳ ಪ್ರಶ್ನೆಗೆ ನಾನು ಉತ್ತರಿಸಿ ಬೆಚ್ಚಿಬಿದ್ದೆ. "ಕಾದರೆ ಬಂದು ಬಿಡ್ತಾರೇಂತ ಅಂದ್ಕೊಂಡಿದೀನೋ" ಮೂಕವಿಸ್ಮಿತಳಾಗಿ ನೋಡುತ್ತಿದ್ದ ಜಯಂತಿಯ ಕಣ್ಣುಗಳು ಹನಿಗೂಡಿದವು. ಸುನೀತಿ ಗೆಲುವಿನ ನಗೆ ನಕ್ಕಳು.

ಅಬ್ಬ ಜಯಂತಿಯದು ಎಂಥ ನಾಟಕ! ತನಗೇನೂ ಗೊತ್ತಿಲ್ಲದಂತೆ ಆಡುತ್ತಾಳೆ? ಬರಿ ಬೂಟಾಟಿಕೆ.

ಜಯಂತಿ ಈ ಮಧ್ಯಾಹ್ನ ಟೈಪ್ ಮಾಡಿದ

ಕಾಗದದಲ್ಲಿ ಎರಡು ಮೂರು ತಪ್ಪುಗಳಿದ್ದವು. ಯಾವತ್ತೂ ತಪ್ಪು ಮಾಡದ ಅವಳು ಇಂದೇಕೆ ತಪ್ಪು ಮಾಡಬೇಕು? ಫೇತ್‌ಫುಲಿಗೆ ತಪ್ಪು ಸ್ಪೆಲಿಂಗ್ ಹಾಕಿದ್ದಳು. ನನಗೆ ತಡೆಯಲಾರದೆ ರೇಗಿದ್ದೆ. "ಸ್ಪೆಲಿಂಗ್ ಮಿಸ್ಟೇಕ್ ನೀವು ಮಾಡೋದು ಅದು ಅರ್ಥ ಬದಲಾಯಿಸಿ ನನ್ನ ತಲೆಗೆ ಬರುತ್ತೆ. ಅಂತೂ ಬಹಳ ಚೆನ್ನಾಗಿ ಲೆಟರ್ ಬರೀತೀರಿ."

ಅವರೆ ಜಯಂತಿ ತುಟಿ ಪಿಟಕ್ಕೆನ್ನದೆ ನಿಂತಿದ್ದವಳು ತಲೆ ಕೆಳಗೆ ಹಾಕಿದಳು. ಮತ್ತೊಂದು ಹನಿ ಕೆಳಗೆ ಜಾರಿದ್ದು ನನ್ನ ಕಣ್ಣಿಗೆ ಬೀಳದೇ ಇರಲಿಲ್ಲ. ಹಾಗೇಕೆ ನಿಂತಳು? ಇನ್ನೂ ಸ್ವಲ್ಪ ಬೈಯಲಿ ಎಂದೋ? ಹಾಗಾದರೂ ನನ್ನನ್ನು ನೋಡುತ್ತ ನಿಂತಿರಬಹುದೆಂದೊ?

ನನಗೇಕೋ ಸಹಿಸಲಾಗಲಿಲ್ಲ. "ನೀವು ಹೋಗ ಬಹುದು" ಎಂದಾಗ ಅವಳು ವಿಧಿಯಿಲ್ಲದೆ ಹೊಗಲೇ ಬೇಕಾಯಿತು.

ಅದರೆ ಸುನೀತಿ ಏನೋ ಹೊಸದಾಗಿ ಕಾಣು ತ್ತಿದ್ದಳಲ್ಲ. ಇವತ್ತು! ಅವಳ ಹೊಸ ಹೇರ್–ಡು ಅವಳಿಗೆ ಚೆನ್ನಾಗೆ ಒಪ್ಪುತ್ತಿತ್ತು. ಅವಳು ಮುಡಿದಿದ್ದ ಎಡ್ವರ್ಡ್ ರೋಸಂತೂ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ಅವಳ ಸೆಂಟ್ ಮೂಗಿಗೇ ಬಡಿಯುತ್ತಿತ್ತು. ಇವತ್ತು ಯಾವ ಪಾರ್ಟಿ ಇದೆ, ಇವಳಿಷ್ಟು ಸೊಗಸಾಗಿ ಬಂದಿದ್ದಾಳಲ್ಲ! ಎನ್ನಿಸದೇ ಇರಲಿಲ್ಲ ನನಗೆ.

ಅಂತೂ ನಾಳೆ ಎರಡನೆಯ ಶನಿವಾರ ಈ ಪತ್ರದ ಗುಟ್ಟು ರಟ್ಟಾಗುತ್ತದೆ. ಅಲಂಕಾರ ಹತ್ತಿರ ನಾಳೆ ಬೆಳಿಗ್ಗೆ ೧೦ ಗಂಟೆಗೆ ಬರಬೇಕಂತೆ ಮಾತಾಡುವುದು ಬಹಳ ಇದೆಯಂತೆ.

ಗುರುವಾರ ಐದು ಗಂಟೆ ಹೊಡೆದಾಗ ಮಧು ಎಚ್ಚೆತ್ತ. ಮನೆಗೆ ಹೊರಡಲು ಸನ್ನಾಹ ನಡೆಸಿದ. ಅವನು ಮೆಟ್ಟಿಲಿಳಿದು ಕೆಳಗೆ ಬಂದಾಗ ಜಯಂತಿ ಮನೆಗೆ ಹೊರಟಿದ್ದಳು.

ನಾಳೆ ಇದೆ, ನಿನಗೆ ಗ್ರಹಚಾರ ಎಂದು ಮನಸ್ಸಿನಲ್ಲೇ ಶಪಿಸಿ ಕೆಳಗಿಳಿದ ಮಧು. ಎಲ್ಲರೂ ಹೊರಟು ಹೋಗಿದ್ದರು. ಸುನೀತಿ ಮಾತ್ರ ಮೆಟ್ಟಿಲ ಬಳಿ ಕಣ್ಣು ಮಿಂಚಿಸುತ್ತಾ ವೈಯ್ಯಾರವಾಗಿ ನಿಂತಿದ್ದಳು.

"ನಾಳೆ ಹತ್ತು ಗಂಟೆಗೆ ಅಲಂಕಾರ ಹತ್ತಿರ ಬರ್‍ತೀರಿ ತಾನೇ ಸರ್?"

"ಅಂ?" ಬೆಚ್ಚಿ ಬಿದ್ದು ಅವಳೆಡೆಗೆ ತಿರುಗಿದ ಮಧುಕರ.

"ಯಾಕೆ ಸರ್ ನಾನು ಜಯಂತಿ ಹೆಸರಿನಲ್ಲಿ ಬರೆದ ಪತ್ರ ತಲುಪಲಿಲ್ಲವೆ? ಹೀಗೆ ನಿಮ್ಮ ಹತ್ತಿರ ಮಾತಾಡೋಕೆ ಆಗುತ್ತೋ ಇಲ್ವೊ ಅಂತ ನಾನು ಪತ್ರ ಬರೆದು ಹಾಕಿದ್ದೆ ಅಷ್ಟೇ. ಹೀಗೆ ನೀವು ಒಬ್ಬರೆ ಸಿಗ್ತೀರಿಂತ ಗೊತ್ತಿದ್ದಿದ್ರೆ ನಾನು ಬರೀತಾನೇ ಇರಲಿಲ್ಲ. ನಾಳೆ ಬರ್‍ತೀರಿ ತಾನೇ ಸರ್?"

ಮಧು ಅವಳನ್ನೊಮ್ಮೆ ನುಂಗುವಂತೆ ನೋಡಿ ಮಾತಾಡದೆ ಹೊರಬಂದ. ಅವನ ತಿರಸ್ಕಾರ ಪೂರ್ಣ ಮೌನವೇ ಅವಳಿಗೆ ಉತ್ತರ ನೀಡಿತ್ತು. ಆ ಪತ್ರವನ್ನು ಜೇಬಿನಿಂದ ತೆಗೆದು ಹರಿದು ಚಿಂದಿ ಚಿಂದಿ ಮಾಡಿ ಗಾಳಿಗೆ ತೂರಿದ. ಬೀಸಿ ಬಂದ ಗಾಳಿ ಕೇವಲ ಆ ಚೂರುಗಳನ್ನು ಮಾತ್ರವಲ್ಲ ಸುನೀತಿ ಮತ್ತು ಜಯಂತಿಯರ ಬಗ್ಗೆ ಅವನಿಟ್ಟು ಕೊಂಡಿದ್ದ ಭಾವನೆಗಳನ್ನೂ ಹೊಡೆದುಕೊಂಡು ಹೋಯಿತು.

ಎರಡು ಹೆಜ್ಜೆ ಮುಂದಿಟ್ಟ. ಮಧ್ಯಾಹ್ನ ನೋಡಿದ ಜಯಂತಿಯ ಹನಿಗೂಡಿದ ಕಣ್ಣುಗಳು ಅವನ ಸ್ಮೃತಿಪಟಲದ ಮೇಲೆ ತೇಲಿಬಂದವು. ಪಕ್ಕದ ಹೋಟೆಲಿನ ಟ್ರಾನ್ಸಿಸ್ಟರಿನಲ್ಲಿ ಲತಾಳ ಕಂಠ ಮೊರೆಯಿತು. "ಕೈದ್ ಮೇ ಹೈ ಬುಲ್ ಬುಲ್ ಸಯಾದ ಮುಸ್ಕುರಾಯೇ ಕಹಾ ಭೀ ನ ಜಾಯೆ ಚುಪ್ ರಹಾ ಭೀ ನ ಜಾಯೆ."

ಮಧು ಮನಸ್ಸಿನಲ್ಲೇ ಮತ್ತೊಮ್ಮೆ ಮಗ ದೊಮ್ಮೆ ಅದನ್ನು ಹೇಳಿಕೊಂಡ "ಕಹಾ ಭೀ ನ ಜಾಯೇ ಚುಪ್ ರಹಾಭೀ ನ ಜಾಯೆ."

ಹೌದು. ಈಗ ಪರಿಸ್ಥಿತಿ ಈಗ ನನಗೂ ಅಷ್ಟೇ ಜಯಂತಿಗೂ ಅಷ್ಟೇ.

ಮಧು ಮುನ್ನಡೆದ. ಮುಂದೆ ಸಾಲುಮರಗಳ ಕೆಳಗೆ ಜಯಂತಿಯೊಬ್ಬಳೇ ತಲೆ ಬಗ್ಗಿಸಿ ನಡೆಯು ತ್ತಿದ್ದಳು ನಿಧಾನವಾಗಿ.



# ಕೋಳಿ ಮೊಟ್ಟೆಯ ಆದ್ಯಂತ

**ಪ್ರೊ. ವಿ. ಎ. ಕುಲಕರ್ಣಿ**

ಸಸ್ಯಜನ್ಯವಾದ ತೆಂಗು ಹಾಗೂ ಪ್ರಾಣಿಜನ್ಯವಾದ ಕೋಳಿಮೊಟ್ಟೆ ಇವೆರಡೂ ಪ್ರಕೃತಿ ನೀಡಿದ ಪವಿತ್ರ ಕೊಡುಗೆಗಳು. ಏಕೆಂದರೆ ಭೂಮಿಯಿಂದ ಎತ್ತರದಲ್ಲಿ ಫಲವಾಗುವ ತೆಂಗು, ಕೋಳಿಯ ಉದರವಾಹಿನಿಯಲ್ಲಿ ರೂಪುಗೊಳ್ಳುವ ಮೊಟ್ಟೆ ಅಭೇದ್ಯವಾದ ಚಿಪ್ಪಿನಲ್ಲಿ ಅಡಗಿ ಮಾನವನ ಕಲುಷಿತ ಬೆರಳುಗಳಿಗೆ ಎಟುಕದಂತೆ ತಮ್ಮ ಪಾವಿತ್ರ್ಯವನ್ನು ಕಾಪಾಡಿಕೊಂಡು ಬಂದಿವೆ. ಇಷ್ಟೇ ಅಲ್ಲ ತತ್ವಜ್ಞಾನದ ಹಿನ್ನೆಲೆಯಲ್ಲಿ ಜೀವ ಜೀವಾತ್ಮರನ್ನು ಕುರಿತು ಯೋಚಿಸಿದಾಗಲೂ ಫಾರ್ಮ್ (ಸುಧಾರಿಸಿದ) ಮೊಟ್ಟೆ ಇನ್ನೂ ಪವಿತ್ರವಾಗಿ ಕಾಣುತ್ತದೆ. ತೆಂಗಿನಕಾಯಿಯನ್ನು ನೆಲದಲ್ಲಿ ಹೂಳಿದಾಗ ಅದು ತೆಂಗಿನ ಸಸಿಗೆ ಏಕೆ ಜನ್ಮ ಕೊಡುತ್ತದೆ? ಅದೇ ಫಾರ್ಮ್ ಮೊಟ್ಟೆಗೆ ಕಾವು ಕೊಟ್ಟಾಗ ಅದರಿಂದ ಕೋಳಿ ಮರಿ ಏಕೆ ಹುಟ್ಟುವುದಿಲ್ಲ? ತೆಂಗಿನಕಾಯಿಯಲ್ಲಿ ಸಜೀವವಾದ ಭ್ರೂಣ ಇರುವುದರಿಂದಲೇ ಅದು ಹೊಸ ಸಸಿಗೆ ಜನ್ಮ ಕೊಡುತ್ತದೆ. ಫಾರ್ಮ್ ಮೊಟ್ಟೆಯಲ್ಲಿ ಭ್ರೂಣ ಇಲ್ಲದಿರುವುದರಿಂದ ಕೋಳಿ ಮರಿ ಹುಟ್ಟಲಾರದು.

ಆದ್ದರಿಂದ ಕೋಳಿ ಮೊಟ್ಟೆಯನ್ನು ಆಹಾರವಾಗಿ ಸೇವಿಸಲು ಯಾವ ತರ್ಕಶಾಸ್ತ್ರವಾಗಲೀ ನೀತಿಶಾಸ್ತ್ರವಾಗಲಿ ಕಿಂಚಿತ್ತೂ ಅಡ್ಡಿಯನ್ನುಂಟುಮಾಡಬಾರದು. ಧರ್ಮಶಾಸ್ತ್ರವು ಆಹಾರವನ್ನು ಸಾತ್ವಿಕ ರಾಜಸ ತಾಮಸ ಎಂದು ವರ್ಗೀಕರಿಸಿರುವುದೇನೋ ನಿಜ. ಆದರೆ ಮೊಟ್ಟೆಯೊಳಗಿನ ಆಹಾರದಲ್ಲಿ ತಾಮಸ ಘಟಕವಿರುವ ಅಂಶ ಯಾರಿಗೂ ಕಂಡು ಬಂದಿಲ್ಲವಲ್ಲ. ಹಾಗಾದಲ್ಲಿ, ಎಂಥ ಧರ್ಮಿಷ್ಠನೂ ಅಹಿಂಸಾವಾದಿಯೂ ಮೊಟ್ಟೆಯನ್ನು ನಿಃಸಂಕೋಚವಾಗಿ ಸೇವಿಸಬಹುದಲ್ಲದೇ?

ಮೊಟ್ಟೆಯಿಂದಲೇ ವಿಶ್ವದ ಆದಿ ಎಂದು ನಮ್ಮ

**ಕೋಳಿ ಕುರಿತಾದ ಕೆಲವು ಅಂಕಿ ಸಂಖ್ಯೆಗಳು**

೧ ಮರಿ ಕೊಡುವ ಮೊಟ್ಟೆಯು ೧೦೪° ಫೆರೆನ್‌ಹೀಟ್ ಕಾವು ಅವಶ್ಯ.

೨ ಮರಿ ಹೊರಬಂದ ಮೇಲೆ ಮೊಟ್ಟೆಯನ್ನಿಡುವ ಪ್ರಬುದ್ಧ ಕೋಳಿಯಾಗಲು ಬೇಕಾಗುವ ಸಮಯ ೨೦–೨೨ ವಾರಗಳು.

೩ ತಳಿ ಪ್ರಭೇದಗಳು ಒಂದು ವರುಷದ ವರೆಗೆ ಮೊಟ್ಟೆಗಳನ್ನಿಡುತ್ತವೆ. ಆಮೇಲೆ ಮಾಂಸಕ್ಕಾಗಿ ಮಾರಲ್ಪಡುತ್ತವೆ.

ಪುರಾಣಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿದೆ. ಸ್ವರ್ಗದಿಂದ ಮೊಟ್ಟೆಯೊಂದು ಭೂಮಿಗೆ ಬಿದ್ದಿತೆಂದೂ ಕಾಲಕ್ರಮದಲ್ಲಿ ಅದರಿಂದ ಮಾನವ ಹುಟ್ಟಿದನೆಂದೂ ಚೀನೀಯರ ನಂಬಿಕೆ. ಇದೆಲ್ಲ ಪ್ರಾಚೀನ ಕಥೆ. ಆದರೆ ಮನುಷ್ಯ ಕೋಳಿಯನ್ನು ಪಳಗಿಸಲು ಆರಂಭಿಸಿ ಎಷ್ಟು ಕಾಲವಾಯಿತು? ಪ್ರಾಯಶಃ ಕ್ರಿ. ಪೂ. ೩೦೦೦ ದಲ್ಲಿ ಸಿಂಧೂ ನದಿಯ ಕಣಿವೆ ಪ್ರದೇಶದಲ್ಲಿ ಮೊದಲ ಬಾರಿಗೆ ಕೋಳಿಯನ್ನು ಸಾಕುಪ್ರಾಣಿಯನ್ನಾಗಿ ಮಾಡಲಾಯಿತು ಎಂದು ಚರಿತ್ರಕಾರರು ಹೇಳುತ್ತಾರೆ. ಅಲ್ಲಿಂದ ಸಾಕು ಕೋಳಿಗಳನ್ನು ಕ್ರಿ. ಪೂ. ನಾಲ್ಕನೇ ಶತಮಾನದಲ್ಲಿ ಪರ್ಶಿಯ ಈಜಿಪ್ತ್ ಹಾಗೂ ಯುರೋಪಗಳಿಗೆ ತರಲಾಯಿತಂತೆ. ಆ ನಂತರ ಕೋಳಿಗಳು ಎಲ್ಲೆಡೆಗೂ ಪಸರಿಸಿದವು ಎಂದು ಇತಿಹಾಸ ಹೇಳುತ್ತದೆ.

ಅನೇಕ ಆಹಾರ ಸಂಶೋಧಕರ ಅಭಿಪ್ರಾಯದಂತೆ ಕೋಳಿಮೊಟ್ಟೆಯು ಅತ್ಯುನ್ನತ ಪೋಷಕಾಂಶಗಳನ್ನು ಒಳಗೊಂಡ ಸತ್ವಪೂರ್ಣ ಆಹಾರವೆನಿಸಿದೆ. ಸರಾಸರಿ ತೂಕದ ಒಂದು ಮೊಟ್ಟೆಯಲ್ಲಿ ಶೇಕಡ ೧೫ರಷ್ಟು ಸಸಾರಜನಕ ೧೦ರಷ್ಟು ಲವಣಗಳು, ೧೦ರಷ್ಟು ಮೇದಸ್ಸು ಹಾಗೂ ೬೫ರಷ್ಟು ನೀರು ಇರುತ್ತವೆ. ಸರಾಸರಿ ಗಾತ್ರದ ಮೊಟ್ಟೆಯಲ್ಲಿ ಪರಿಮಾಣಕ್ಕನುಸಾರವಾಗಿ ಚಿಪ್ಪಿನ* ಭಾಗ ಶೇಕಡ ೧೦, ಹಳದಿ (ಮೇದಸ್ಸು) ೩೨, ಲೋಳೆ ಸಸಾರಜನಕ) ೫೮ ಇರುತ್ತವೆ. ಕಬ್ಬಿಣ, ರಂಜಕ, ಮ್ಯಾಗ್ನಿಸಿಯಂ, ಕ್ಯಾಲ್ಸಿಯಂ ಮುಂತಾದ ೧೩ ಖನಿಜಗಳಿವೆ. ಸಿ ಜೀವನಸತ್ವವನ್ನು ಹೊರತುಪಡಿಸಿ ಉಳಿದೆಲ್ಲ ಜೀವನಸತ್ವಗಳಿವೆ. ಎ ಜೀವನಸತ್ವ ಹೇರಳವಾಗಿದೆ. ಸಕ್ಕರೆಯ ಅಂಶ ಊಹಿಸಲಾರದಷ್ಟು ಅತ್ಯಲ್ಪ– 0.೫ ಗ್ರಾಮಿನಷ್ಟು ಮಾತ್ರ. ಆದುದರಿಂದ ಇದು ಮಧುಮೇಹ ರೋಗಿಗಳಿಗೆ ಉತ್ತಮ ಆಹಾರ. ಮೊಟ್ಟೆಯ ಬಿಳಿ ಲೋಳೆಯು ಶ್ರೇಷ್ಠ ಮಟ್ಟದ ಅಮೈನೊ ಆಮ್ಲಗಳನ್ನೊಳಗೊಂಡ ಸಸಾರಜನಕವಾಗಿದೆ.

ಅಲ್ಪ ವೇಳೆಯಲ್ಲಿ ಹಾಗೂ ಸುಲಭವಾಗಿ ಪಚನವಾಗಬಲ್ಲ ಭ್ರೂಣ ಆಹಾರ ಮೊಟ್ಟೆಯಲ್ಲಿರುವುದರಿಂದ ಇದು ಬೆಳೆಯುತ್ತಿರುವ ಮಕ್ಕಳಿಗೂ ತಾರುಣ್ಯದ ಮೆಟ್ಟಲಿಗೆ ಕಾಲಿಡುತ್ತಿರುವ ಯುವಕ ಯುವತಿಯರಿಗೂ ವೃದ್ಧರಿಗೂ ಕಾಯಿಲೆಯಿಂದ ಮುಕ್ತರಾಗಿ ಚೇತರಿಸಿಕೊಳ್ಳುತ್ತಿರುವವರಿಗೂ ಆದರ್ಶ ಆಹಾರವೆನಿಸಿದೆ. ಪಥ್ಯ ಮಾಡುವವರಿಗಂತೂ ಇದು ಸಮತೂಕ ಆಹಾರದ ಸಿದ್ಧೌಷಧಿಯಂತೆ. ೧೦೦ ಗ್ರಾಂ ತೂಕದ ಮೊಟ್ಟೆಯ ಸಸಾರಜನಕವನ್ನು ಜೀರ್ಣಿಸಲು ೧೬೦ ಕೆಲೊರಿ ಶಕ್ತಿ ಸಾಕು. ಇಷ್ಟೇ ತೂಕದ ಮಾಂಸದ ಸಸಾರಜನಕವನ್ನಾಗಲೀ ಬೇಳೆಯ ಸಸಾರಜನಕವನ್ನಾಗಲೀ ಜೀರ್ಣಿಸಲು ಅನುಕ್ರಮವಾಗಿ ೧೯೪ ಹಾಗೂ ೩೫೦ ಕೆಲೊರಿ ಉಷ್ಣಶಕ್ತಿ ಬಿಡುಗಡೆಯಾಗಬೇಕಾಗುತ್ತದೆ. ಇದರ ಮೇದಸ್ಸಿನಲ್ಲಿ ಕೊಲೆಸ್ಟರಾಲ್ ಇರುವುದರಿಂದ ಹೃದಯ ರೋಗಿಗಳು ಮೊಟ್ಟೆಯನ್ನು ಸೇವಿಸುವುದು ಕ್ಷೇಮವೇ ಎಂದು ಕೆಲವರು ಕೇಳಬಹುದು. ಕೊಲೆಸ್ಟರಾಲ್ ಅತ್ಯಲ್ಪ ಪ್ರಮಾಣದಲ್ಲಿ ಇರುವುದರಿಂದ ಪ್ರತಿದಿನ ಒಂದು ಮೊಟ್ಟೆಯನ್ನು ಸೇವಿಸಿದಲ್ಲಿ ಯಾವ ಅಪಾಯವೂ ಇಲ್ಲವೆಂಬುದು ಪ್ರಯೋಗಗಳಿಂದ ಕಂಡುಬಂದಿದೆ.

ಇತ್ತಿತ್ತಲಾಗಿ ಕೋಳಿಸಾಕಾಣಿಕೆ ಲಾಭದಾಯಕ ಉದ್ಯಮವಾಗಿದೆ. ಇದಕ್ಕೆ ಪೌಲ್ಟ್ರಿ ವಿಜ್ಞಾನಿಗಳ ಅವಿರತ ಪ್ರಯತ್ನವೇ ಕಾರಣ ವಿದೇಶಿ ಮೂಲದ ಶುದ್ಧ ಪ್ರಭೇದ ಹಾಗೂ ನಮ್ಮ ದೇಶದ ಸಾಮಾನ್ಯ ಪ್ರಭೇದ ಇವುಗಳ ತಳಿ ಮಿಶ್ರಣದಿಂದ ಹುಟ್ಟಿದ ಹೊಸತಳಿಗಳು ಮೊಟ್ಟೆಗಳನ್ನು ಉತ್ಪಾದಿಸುವ ಯಂತ್ರಗಳಂತಾಗಿವೆ. ಬಿಳೀ ಲೆಗ್ ಹಾರ್ನ್ ಕೋಳಿ ಇಟಲಿ ಮೂಲದ್ದು. ಈ ತಳಿ ಮೊಟ್ಟೆಗೆ ಪ್ರಸಿದ್ಧ, ಮಾಂಸಕ್ಕಲ್ಲ. ರ್ಹೋಡ್ ತಳಿಯ ತೂಕ ಹೆಚ್ಚು, ಮೊಟ್ಟೆ ಮಾಂಸಕ್ಕೆರಡೂ ಹೆಸರಾಗಿದೆ. ವ್ಯಾನ್‌ಡಾಟ್ ಹಾಗೂ ವೈಟ್ ಸಸೆಕ್ಸ್ ತಳಿಗಳೂ

---

*** ಒಂದು ಚಮಚದಷ್ಟು ಮೊಟ್ಟೆಯ ಚಿಪ್ಪಿನ ಪುಡಿಯನ್ನು ಒಂದು ಚಮಚ ಲಿಂಬೆ ಹಣ್ಣಿನ ರಸದಲ್ಲಿ ರಾತ್ರಿಯಿಡೀ ನೆನೆಯಿರಿ. ಬೆಳಗ್ಗೆ ಎದ್ದು ಮೊಟ್ಟೆಯ ಹಳದಿಯಲ್ಲಿ ಅದನ್ನು ಬೆರಸಿ ತಲೆಗೆ ತಿಕ್ಕಿಕೊಂಡು ಉಗುರು ಬೆಚ್ಚಗಿನ ನೀರಿನಲ್ಲಿ ತಲೆ ಸ್ನಾನ ಮಾಡಿದರೆ ಕೂದಲು ಉದುರುವುದು ನಿಲ್ಲುವದಲ್ಲದೆ ನೀಳವಾಗಿಯೂ ಬೆಳೆಯುವವು.**

ಜನಪ್ರಿಯವಾಗಿವೆ. ಈ ಎಲ್ಲ ಹೊಸ ತಳಿಗಳು ತಾವು ತೆಗೆದುಕೊಳ್ಳುವ ಆಹಾರ ಪ್ರಮಾಣದಲ್ಲಿಯೂ ವಿಕ್ರಮ ಸಾಧಿಸಿವೆ. ಭಾರತೀಯ ಮೂಲದ ಕೋಳಿಗಳು ಶೇಕಡ ೭೦ರಷ್ಟು ಪ್ರಮಾಣದ ಆಹಾರವನ್ನು ಕಬಳಿಸಿ ಕೇವಲ ೫೦ ಮೊಟ್ಟೆಗಳನ್ನು ಕೊಡುತ್ತಿದ್ದವು. ತಳಿ ಪ್ರಯೋಗದಿಂದ ಹುಟ್ಟಿದ ಕೋಳಿಗಳು ಅಷ್ಟೇ ಪ್ರಮಾಣದ ಆಹಾರ ಸೇವಿಸಿ ಇನ್ನೂರರವರೆಗೆ ಮೊಟ್ಟೆಗಳನ್ನು ಇಡುತ್ತವೆ.

ಈ ಮಿಶ್ರ ತಳಿಗಳು ಹುಂಜದ ಸಂಪರ್ಕವಿಲ್ಲದೆ ಮೊಟ್ಟೆಗಳನ್ನು ಕೊಡುತ್ತವೆ. ಆದರೆ ಇವು ಫಲಿತವಾದ ಮೊಟ್ಟೆಗಳಲ್ಲ. ಇವುಗಳಲ್ಲಿ ಭ್ರೂಣ ಇರುವುದಿಲ್ಲ. ಕಾರಣ ಇವುಗಳನ್ನು ಸೇವಿಸಿದವರಿಗೆ ಹಿಂಸೆಯ ಪ್ರಶ್ನೆಯೇ ಉದ್ಭವಿಸುವದಿಲ್ಲ. ಇವುಗಳನ್ನು ಕೆಲವರು ಶಾಕಾಹಾರಿ ಮೊಟ್ಟೆಗಳೆಂದು ಕರೆಯುತ್ತಾರೆ. ಇದಕ್ಕೆ ನನ್ನ ವೈಯಕ್ತಿಕ ವಿರೋಧವಿದೆ. ಏಕೆಂದರೆ ಶಾಕಾಹಾರಿಯಾದವನು ಜೋಳದ ರೊಟ್ಟಿಯನ್ನೋ ಗೋದಿಯ ರೊಟ್ಟಿಯನ್ನೊ ತಿನ್ನಬೇಕಾದಾಗ ಭ್ರೂಣಗಳನ್ನು ಹಿಂಸಿಸದೆ ತಿನ್ನಲಾರ. ಉಗ್ರಾಣದಲ್ಲಿದ್ದ ಧಾನ್ಯದಲ್ಲಿ ಸಜೀವವಾದ ಭ್ರೂಣವಿರುತ್ತದೆ. ಆದುದರಿಂದಲೇ ಧಾನ್ಯವನ್ನು ಭೂಮಿಯಲ್ಲಿ ಬಿತ್ತಿದಾಗ ಅದು ಸಸಿಯಾಗಿ ಹುಟ್ಟುತ್ತದೆ.

ಕೋಳಿ ಮೊಟ್ಟೆ ಕುರಿತು ಇನ್ನೂ ಹಲವಾರು ತಪ್ಪುಕಲ್ಪನೆಗಳಿವೆ. ಭ್ರೂಣವಿರುವ ದೇಶೀ ಮೊಟ್ಟೆ ಹೆಚ್ಚು ಸ್ವಾದಿಷ್ಟ, ಹೆಚ್ಚು ಪುಷ್ಟಿದಾಯಕವೆಂಬ ಭಾವನೆ ಕೆಲವರಲ್ಲಿದೆ. ನಿಜವಾಗಿಯೆಂದರೆ ಫಾರ್ಮ್ ಮೊಟ್ಟೆ ದೇಶೀ ಮೊಟ್ಟೆಗಿಂತಲೂ ಹೆಚ್ಚು ಬಲವರ್ಧಕವಾದುದು. ತಳಿ ಪ್ರಭೇದಗಳಿಗೆ ಸಮತೂಕದ ಹಾಗೂ ಜೀವನಸತ್ವಗಳನ್ನೊಳಗೊಂಡ ಆಹಾರವನ್ನು ಕೊಡುವುದರಿಂದ ಅವು ಇಡುವ ಮೊಟ್ಟೆಗಳೂ ಹೆಚ್ಚು ಪೌಷ್ಟಿಕವಾಗಿರುತ್ತವೆ. ದೇಶೀ ಮೊಟ್ಟೆ ಸರಾಸರಿ ೪೫ ಗ್ರಾಂ ತೂಗಿದರೆ ಫಾರ್ಮ್ ಮೊಟ್ಟೆ ೬೦ ಗ್ರಾಂ ತೂಗುತ್ತದೆ ಕೋಳಿಯು ಸೇವಿಸುವ ಆಹಾರದ ಮೇಲಿಂದ ಗಾತ್ರದಲ್ಲಿಯೋ ಒಳ ಸಾಮಗ್ರಿಗಳ ಬಣ್ಣದಲ್ಲಿಯೋ ಅಲ್ಪ ಸ್ವಲ್ಪ ಬದಲಾವಣೆಗಳಾಗಬಹುದು. ಉದಾಹರಣೆಗೆ, ಅವು ತಿನ್ನುವ ಆಹಾರದಲ್ಲಿ ರಝೋಫೋಫಿಲ್ ಪ್ರಮಾಣ ಹೆಚ್ಚಿದ್ದರೆ ಮೊಟ್ಟೆಯೊಳಗಿನ ಹಳದಿ ಬಂಗಾರ ಬಣ್ಣಕ್ಕೆ ತಿರುಗುತ್ತದೆ. ಮೊಟ್ಟೆಯ ಗಾತ್ರವು ಸಾಮಾನ್ಯವಾಗಿ ಕೋಳಿಯ ಗಾತ್ರಕ್ಕನುಸಾರವಾಗಿರುತ್ತದೆ. ತಳಿ ಪ್ರಯೋಗಗಳಿಂದಲೂ ಮೊಟ್ಟೆಯ ಗಾತ್ರವನ್ನು ಹೆಚ್ಚಿಸಬಹುದು. ಮೊಟ್ಟೆಯ ಕವಚದ ಬಣ್ಣಕೂ ಅದರೊಳಗಿನ ಸತ್ವಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಆದರೂ ಕೆಲವರು ಕಂದು ಬಣ್ಣದ, ಇನ್ನು ಕೆಲವರು ಅಪ್ಪಟ ಬಿಳಿ ಬಣ್ಣದ ಮೊಟ್ಟೆಗಳನ್ನು ಇಷ್ಟಪಡುತ್ತಾರೆ. ಇಂಥ ಮಾನಸಿಕ ಹಿನ್ನೆಲೆಯ ದುರ್ಲಾಭವನ್ನು ಪಡೆಯುವವರು ಮೊಟ್ಟೆಯ ವ್ಯಾಪಾರಿಗಳು. ಕಂದು ಬಣ್ಣವನ್ನು ಮೆಚ್ಚುವ ಜನಗಳಿಗೆ ಬಿಳಿ ಮೊಟ್ಟೆಗಳನ್ನು ಚಹದ ಕಷಾಯದಲ್ಲೊ ದುರ್ಬಲ ಪೊಟ್ಯಾಸಿಯಂ ಪರಮಾಂಗನೇಟಿನಲ್ಲೊ ಅದ್ದಿ ಒಣಗಿಸಿ ಕಂದು ಬಣ್ಣದ ಲೇಪನ ಸೃಷ್ಟಿಸಿ ಮಾರುತ್ತಾರೆ. ಇಷ್ಟೇ ಅಲ್ಲ, ಅವುಗಳನ್ನು ದೇಶೀ ಮೊಟ್ಟೆಗಳೆಂದು ಹೇಳಿ ಜನರನ್ನು ಮೋಸ ಮಾಡುತ್ತಾರೆ. ಸುಶಿಕ್ಷಿತರು ಕೂಡ ದೇಶೀ ಮೊಟ್ಟೆಗಳ ಗುಣಮಟ್ಟ ಹೆಚ್ಚೆಂದು ಕಲ್ಪಿಸಿ ಹೆಚ್ಚು ಬೆಲೆಯನ್ನು ಕೊಡುವುದುಂಟು.

ಮೊಟ್ಟೆ ತಾಜಾ ಎಂದು ಹೇಗೆ ಗುರುತಿಸುವುದು? ಅದನ್ನು ನೀರಿನಲ್ಲಿ ಇಟ್ಟಾಗ ಮುಳುಗಿದರೆ, ಇಲ್ಲವೆ ಬೆರಳು ಮಧ್ಯೆ ಹಿಡಿದು ಅಲುಗಿಸಿದಾಗ ಸಪ್ಪಳ ಕೇಳದಿದ್ದರೆ ಮೊಟ್ಟೆ ತಾಜಾ ಎಂದು ತಿಳಿಯಬೇಕು. ಈ ಎರಡೂ ವಿಧಾನಗಳು ವೈಜ್ಞಾನಿಕವಾಗಿವೆ. ಮೊಟ್ಟೆಯ ಚಿಪ್ಪಿನ ಒಳಗಡೆ ಎರಡು ಪೊರೆಗಳಿವೆ. ತಾಜಾ ಮೊಟ್ಟೆಯಲ್ಲಿ ಪೊರೆಗಳ ಮಧ್ಯೆ ನಿರ್ವಾತವಿರುವುದರಿಂದ ಮೊಟ್ಟೆ ಜಡವಾಗಿ ನೀರಿನಲ್ಲಿ ಮುಳುಗುತ್ತದೆ. ದಿನಗಳು ಸರಿದಂತೆ ಮೊಟ್ಟೆಯ ಅಗಲ ಭಾಗದ ಪೊರೆಗಳ ನಡುವೆ ಹವೆ ಸೇರಿ ಮೊಟ್ಟೆ ಹಗುರಾಗಿ ತೇಲತೊಡಗುತ್ತದೆ. ಅದು ತಂಗಳು ಮೊಟ್ಟೆ. ಕೆಲೆರಝೊ ಎಂದು ಕರೆಯಲ್ಪಡುವ ಸಾಂದ್ರ ಲೋಳೆ ಹುರಿಯಂತೆ ಹೊಸೆದು ಮೊಟ್ಟೆ ಮಧ್ಯದ ಹಳದಿಯನ್ನು ಸ್ಥಿರವಾಗಿ ನಿಲ್ಲಿಸಲು ನೆರವಾಗಿದೆ. ಕೆಲೆರಝೊ

ಇದ್ದರೆ ಮೊಟ್ಟೆಯನ್ನು ಅಲುಗಿಸಿದಾಗಲೂ ಸಪ್ಪಳ ಕೇಳದು, ಅದು ತಾಜಾ ಮೊಟ್ಟೆ. ದಿನಗಳೆದಂತೆ ಕೆಲೆರಖೂ ಮಾಡಿಯಾದಾಗ ಹಳದಿಗೆ ಯಾಂತ್ರಿಕ ಆಧಾರ ಇಲ್ಲದಂತಾಗಿ ಅಲುಗಾಡಿಸಿದಾಗ ಸಪ್ಪಳ ವಾಗುತ್ತದೆ. ಅದು ತಂಗಳ ಮೊಟ್ಟೆ.

ಸೀಳಿದ ಮೊಟ್ಟೆಗಳನ್ನು ಕೊಳ್ಳಬೇಡಿ. ಅವರಲ್ಲಿ ಬ್ಯಾಕ್ಟೀರಿಯಗಳು ಇರುವ ಸಂಭವ ಹೆಚ್ಚು. ಅದರಿಂದ ಆಹಾರ ದೂಷಿತವಾಗಬಹುದು. ಮೊಟ್ಟೆಗಳನ್ನು ರೆಫ್ರಿಜರೇಟರಿನ ಬಾಗಿಲಿನ ಒಳಬದಿಗೆ ಇಡುವುದು ಯುಕ್ತವಲ್ಲ. ಬಾಗಿಲು ತೆರೆದಾಗೊಮ್ಮೆ ಮೊಟ್ಟೆಯೊಳಕ್ಕೆ ಹವೆ ಸೇರಲು ಅನುವು ಮಾಡಿದಂತಾಗುತ್ತದೆ. ಕಾರಣ ಮೊಟ್ಟೆಗಳನ್ನು ಅತಿ ಶೀತ ಅಂಕಣದಲ್ಲಿ ಇಡುವುದು ಒಳ್ಳೆಯದು. ಅಲ್ಲಿ ಅವು ಬಹು ದಿನಗಳ ವರೆಗೆ ತಾಳುವವು.

ಅಡುಗೆಯಲ್ಲಂತೂ ಮೊಟ್ಟೆ ಒಂದು ವರದಾನ. ಚಿಕನ್ ಗ್ರೇವಿಯಲ್ಲಿ ಉಪ್ಪು ಹೆಚ್ಚಾಯಿತೆ? ಫ್ಲವರ ಪಲ್ಲೆಯಲ್ಲಿ ಖಾರ ಜಾಸ್ತಿಯಾಯಿತೇ? ಬೇಳೆಯ ಸಾರು ತುಂಬಾ ನೀರಾಗಿಬಿಟ್ಟಿತೇ? ಕೋಳಿ ಮೊಟ್ಟೆಗೆ ಶರಣೆನ್ನಿ. ಅದು ಎಲ್ಲ ತಪ್ಪುಗಳನ್ನೂ ಸರಿಪಡಿಸಿಬಿಡುತ್ತದೆ. ಇತ್ತೀಚಿನ ದಿನಗಳಲ್ಲಿಯಂತೂ ಮೊಟ್ಟೆ ಸರ್ವಾಂತರ್ಯಾಮಿಯಾಗಿಬಿಟ್ಟಿದೆ. ಕೇಕ್, ಕಸ್ಟರ್ಡ್ ಪೌಡರ್, ಸಾಸ್ ಸೂಪ ಮೊಟ್ಟೆಯಿಲ್ಲದೆ ತಯಾರಾಗುವಂತಿಲ್ಲ. ಯಾವುದೇ ಆಹಾರ ಪದಾರ್ಥವಿರಲಿ ಅದರೊಂದಿಗೆ ಹೊಂದಿಕೊಳ್ಳುವದು ಮೊಟ್ಟೆಯ ಸರ್ವಶ್ರೇಷ್ಠ ಗುಣ. ಮೊಟ್ಟೆಯ ರೂಪ ಬದಲಾವಣೆಗೂ ಹೆಸರಾಗಿದೆ. ಕೊಚ್ಚಿದರೆ ಪಲ್ಲೆ, ಮಥಿಸಿ ಕರಿದರೆ ಅಮ್ಲೆಟ್, ತವೆಯಲ್ಲಿ ಸುರಿದು ಕೂಡಲೇ ಹೊರತೆಗೆದರೆ ಬುಲ್ಸ್‌ಆಯ್, ಹಾಗೆಯೇ ಕುದಿಸಿದರೆ ಬ್ಯಾಲ್ಡ್ ಎಗ್. ಖಾದ್ಯಗಳ ವೈವಿಧ್ಯ ಹೆಚ್ಚಿದಂತೆ ಮೊಟ್ಟೆ ಇನ್ನೂ ಜನಪ್ರಿಯವಾಗುತ್ತಲಿದೆ. ಅಕೂರಿ, ಬಾರ ಚಾಕಲೇಟ್ ಹಲ್ವ ಮುಂತಾದವುಗಳು ಮೊಟ್ಟೆ ಮಸಾಲಾಗಳು ಮಿಶ್ರ ತಯಾರಿಕೆಗಳು.

ಇಂದಿನ ಜೆಟ್ ಯುಗಕ್ಕೆ ತಕ್ಕುದಾದ ದಿಢೀರ್ ಆಹಾರವಾಗಿದೆ. ಎರಡರಿಂದ ಎರಡೂವರೆ ಔನ್ಸ್ ತೂಗುವ ಕೋಳಿ ಮೊಟ್ಟೆ. ಎರಡೇ ನಿಮಿಷಗಳಲ್ಲಿ ನಿಮ್ಮ ಬ್ರೆಡ್ಡಿಗೆ ಪಲ್ಲೆ ಬೇಕೇ? ಕೊಚ್ಚಿ ಕರಿದ ಮೊಟ್ಟೆ ಪಲ್ಲೆ ಸಿದ್ಧ. ಇನ್ನೂ ಒಂದು ನಿಮಿಷದ ಅವಕಾಶವಿದೆಯೇ? ಬುಲ್ಸ್‌ಆಯ್ ರೆಡಿ. ನಿಮ್ಮ ಡ್ರೆಸಿಂಗ್ ಟೇಬಲ್ ಮೇಲೆ ನಾಲ್ಕು ನಿಮಿಷ ತವೆಯು ಬಲ್ಲಿರಾ? ಸ್ವಾದಿಷ್ಟ ಆಮ್ಲೆಟ್ ತಯಾರು. ಎರಡು ಮೂರು ದಿನಗಳ ನಿರಂತರ ಪ್ರವಾಸ ಕೈಕೊಳ್ಳುವುದಿದೆಯೇ? ಬುಟ್ಟಿ ತುಂಬ ಮೊಟ್ಟೆಗಳನ್ನು ಕುದಿಸಿ ಬದಿಯಲ್ಲಿಟ್ಟುಕೊಳ್ಳಿ. ತಿನ್ನುವ ವೇಳೆಯಲ್ಲಿ ಮಾತ್ರ ಚಿಪ್ಪು ಸುಲಿಯಿರಿ.

ಬಹುಸಂಖ್ಯ ಶಾಕಾಹಾರಿಗಳಿರುವ ನಮ್ಮ ನಾಡಿನಲ್ಲಿ ೧೯೬೦ರಲ್ಲಿದ್ದ ಮೂರುವರೆ ಕೋಟಿ ಕೋಳಿಗಳ ಸಂಖ್ಯೆ ಕಳೆದ ವರುಷದಷ್ಟೊತ್ತಿಗೆ ಎಂಟು ಕೋಟಿಗೆ ಏರಿರುವದನ್ನು ಗಮನಿಸಿದರೆ ಮೊಟ್ಟೆಗಳ ಲೋಕಪ್ರಿಯತೆ ಗೊತ್ತಾಗುತ್ತದೆ. ಸದ್ಯ ಇವು ಕೊಡುವ ಮೊಟ್ಟೆಗಳ ಸಂಖ್ಯೆ ವರುಷ ಒಂದಕ್ಕೆ ೧೪೦೦ ಕೋಟಿಯನ್ನೂ ಮಿಕ್ಕುತ್ತದೆ. ಇವುಗಳಲ್ಲಿ ಪೌಲ್ಟ್ರಿಯಿಂದ ಸರಬರಾಯಿ ಆಗುವ ಮೊಟ್ಟೆಗಳು ಶೇಕಡಾ ೮೫. ಉಳಿದವು ಗ್ರಾಮೀಣ ಹಾಗೂ ಮನೆ ಮೂಲದವು.

ಸುಮಾರು ೧೫ ವರುಷಗಳ ಹಿಂದೆ ಭಾರತೀಯ ಮೂಲದ ಕೋಳಿ ವರುಷ ಒಂದಕ್ಕೆ ಹೆಚ್ಚೆಂದರೆ ೧೮೦ ಮೊಟ್ಟೆಗಳನ್ನು ಕೊಡುತ್ತಿತ್ತು. ಇಂದಿನ ಫಾರ್ಮ್ ತಳಿಗಳು ೨೮೦ ರಿಂದ ೩೦೦ರ ವರೆಗೆ ಮೊಟ್ಟೆಗಳನ್ನು ಕೊಡುತ್ತಿವೆ. ಆದರೂ ಪೌಲ್ಟ್ರಿ ವಿಜ್ಞಾನಿಗೆ ಮಾತ್ರ ಇನ್ನೂ ಸಮಾಧಾನವಾಗಿಲ್ಲ. ಪೌಲ್ಟ್ರಿಯಲ್ಲಿಯ ಪ್ರತಿ ಕೋಳಿಯು ದಿನಂಪ್ರತಿ ಒಂದು ಮೊಟ್ಟೆಯಂತೆ ವರುಷಕ್ಕೆ ೩೬೦ ರ ಸರಾಸರಿ ಮುಟ್ಟಬೇಕೆಂಬುದು ಅವನ ಕನಸು. ಅವನ ಕನಸನ್ನು ವ್ಯಾಪಾರಿಯ ಮನಸನ್ನು ನಾವು ನೆನೆಸಿಕೊಂಡಾಗ ಬಹುದಿನಗಳಿಂದ ಪ್ರಚಲಿತವಿದ್ದ "ಮೊಟ್ಟೆ ಮೊದಲೊ? ಕೋಳಿ ಮೊದಲೊ?" ಎಂಬ ಕುತೂಹಲಕಾರಕ ಪ್ರಶ್ನೆಗೆ ಇಂದು ಉತ್ತರ ದೊರೆತಿದೆ. ವಿಜ್ಞಾನಿಗೆ ಕೋಳಿ ಮೊದಲು, ಉದ್ಯಮಿಗೆ ಮೊಟ್ಟೆ ಮೊದಲು ಅಲ್ಲವೆ? ♦



# ಬರಲಿದೆ ಎಪಿಟಾಕ್ಸಿನ್ ಚಿಕಿತ್ಸೆ!

ನರಸಿಂಹ ಮೋಟೆನ್ಸರ

ಎಲ್ಲವೂ ವಿಷವೇ, ವಿಷರಹಿತ ಯಾವುದೂ ಇಲ್ಲ. ಎಲ್ಲವೂ ಔಷಧಿಯೇ. ಸ್ವಲ್ಪ ಹೆಚ್ಚು ಕಡಿಮೆಯಾದರೆ ಔಷಧಿ ವಿಷವಾಗಬಲ್ಲದು ಮತ್ತು ವಿಷ ಔಷಧಿಯಾಗಬಲ್ಲದು, ಎಂಬ ಒಂದು ಹೇಳಿಕೆ ಪಾಶ್ಚಾತ್ಯರಲ್ಲಿದೆ. ಎಷ್ಟೋ ಆಧುನಿಕ ಔಷಧಗಳಿಗೆ ಮೂಲ ಅಳಲೇಕಾಯಿ ಪಾಂಡಿತ್ಯವಾಗಿರುತ್ತದೆ. ಅಂತೆಯೇ ಜೇನುಹುಳುವಿನ ಅಂಬಿನ ವಿಷ ಕೂಡಾ ಒಂದು ಅದ್ಭುತ ವೈದ್ಯಕೀಯ ಅಂಶ ಹೊಂದಿದೆ ಎಂಬುದು ಎಷ್ಟು ಜನರಿಗೆ ಗೊತ್ತು! ಅವರಿಂದ ಅನೇಕ ಕಾಯಿಲೆಗಳನ್ನು ಗುಣಪಡಿಸಬಹುದೆಂದು ಕಂಡುಬಂದಿದೆ. ಚೀನದಲ್ಲಿ ಕೆಲವು ಸೂಜಿಗಳಿಂದ ಆಕ್ಯುಪಂಕ್ಚರ್ ಚಿಕಿತ್ಸೆ ಪ್ರಾರಂಭವಾಗಿ ಜಗತ್ತಿನಾದ್ಯಂತ ಜನಪ್ರಿಯವಾದಂತೆ, ಜೇನುಹುಳುಗಳ ಮುಳ್ಳಿನಿಂದ ಪ್ರತಿವಿಷವನ್ನು ತಯಾರಿಸಿ ಕೆಲವು ರೋಗಗಳನ್ನು ಗುಣಪಡಿಸಬಹುದೆಂದು ೧೯೫೬ರಲ್ಲಿ ಪ್ರಾರಂಭವಾದ ರಶಿಯಾದ ಎಪಿಟಾಕ್ಸಿನ್ ಚಿಕಿತ್ಸೆ ಈಗ ಪ್ರಪಂಚದ ಎಲ್ಲೆಡೆ ಪಸರಿಸುತ್ತ ಜನಪ್ರಿಯವಾಗುತ್ತ ನಡೆದಿದೆ. ನೂರಾರು ವರ್ಷಗಳ ಹಿಂದೆಯೇ ಅನೇಕ ಶಾಸ್ತ್ರಜ್ಞರು, ವಿಜ್ಞಾನಿಗಳು ಸತತ ಪ್ರಯೋಗಗಳಿಂದ ಅನೇಕ ರೋಗಿಗಳ ಮೇಲೆ ಚಿಕಿತ್ಸೆ ನಡೆಸಿ ಈ ಪದ್ಧತಿಯಿಂದ ಅನೇಕ ರೋಗಗಳನ್ನು ಆಶ್ಚರ್ಯಕಾರಕವಾಗಿ ಗುಣಪಡಿಸಿದ್ದಾರೆ. ಜೇನು ಸಾಕಾಣಿಕೆಗಾರರ ಅನುಭವ ಪ್ರಕಾರ ಇದು ಬರೀ ಔಷಧಿಯು ಒಂದೇ ಅಲ್ಲದೇ ಆರೋಗ್ಯದಾಯಕವೂ ಹೌದು.

ಜೇನು ಅಂಬಿನ ವಿಷ ಪಾರದರ್ಶಕ, ಕಟುವಾಸನೆಯಿರುವ, ಜೇನುತುಪ್ಪವನ್ನು ಹೋಲುವ, ರುಚಿಯಲ್ಲಿ ಕಹಿಯುಳ್ಳ ಆಮ್ಲಯುಕ್ತ ವಸ್ತು. ಫಾರ್ಮಿಕ್ ಹೈಡ್ರೊಕ್ಲೋರಿಕ್ ಆರ್ಥೋ ಫಾಸ್ಫೋರಿಕ್ ಆಮ್ಲಗಳು ಹಿಸ್ಟಾಮೈನ್ ಟ್ರಿಪ್ಟೋಫಸ್ ಗಂಧಕಗಳನ್ನು ಇದು ಹೊಂದಿರುತ್ತದೆ. ಹೆಚ್ಚಿನಂಶ ಇರುವ ಮ್ಯಾಗ್ನೆಸಿಯಂ ಫಾಸ್ಫೇಟ್‌ಗಳಿಂದ ಜೇನು ವಿಷಕ್ಕೆ ಗುಣಕಾರಿಯಾದ ಸ್ವರೂಪ ಬಂದಿದೆ.

ತಾಮ್ರ ಕ್ಯಾಲ್ಸಿಯಂ ಮತ್ತು ಪ್ರೊಟೀನುಗಳು ಸಹ ಇದರ ಘಟಕವೇ. ಕೆಲವು ತೈಲಗಳಿಂದ ಈ ವಸ್ತು ಒಣಗಿದ ತಕ್ಷಣ ಬಾಷ್ಪವಾಗಬಲ್ಲದು. ಆದ್ದರಿಂದ ಈ ತೈಲಗಳಿಂದಲೇ ಜೇನು ವಿಷಕ್ಕೆ ಕಟುತ್ವ ಬಂದಿರುತ್ತದೆ. ಸಾದಾ ಉಷ್ಣತಾಮಾನದಲ್ಲೂ ಜೇನು ವಿಷ ಒಣಗಿ ಬಾಷ್ಪವಾಗಿ ಶೇಕಡಾ ೩೦ ರಿಂದ ೭೦ರ ವರೆಗೆ ತೂಕವನ್ನು ಕಳೆದುಕೊಳ್ಳುತ್ತದೆ. ಒಣಗಿದ ವಿಷ ಅಂಟಿನಂತೆ ಜಿಗು

ಟಾಗಿರುತ್ತದೆ. ಆಮ್ಲ ಮತ್ತು ನೀರಿನಲ್ಲಿ ಸುಲಭವಾಗಿ ಕರಗಬಲ್ಲದ್ದು. ಇದನ್ನು ಹೈಡ್ರೊಕ್ಲೋರಿಕ್ ಆಮ್ಲದೊಡನೆ ಕುದಿಸಿದಾಗ ಬದಲಾಗಬಲ್ಲದು. ಜೇನು ವಿಷ ಅತ್ಯಂತ ಉಷ್ಣ ನಿರೋಧಕ. ೧೦೦° ಸಿ ಉಷ್ಣತಾಮಾನದ ವರೆಗೆ ಒಣಗಿದ ರೂಪದಲ್ಲಿ ಹತ್ತು ದಿನಗಳ ವರೆಗೆ ಕಾಯಿಸಿದರೂ ಗಮನಾರ್ಹ ಬದಲಾವಣೆ ಕಂಡುಬಾರದು. ಶೈತ್ಯೀಕರಣ ಸಹ ಇದರ ಗುಣಾಂಶವನ್ನು ಬದಲಿಸದು. ಈ ವಸ್ತು ಇದರ ವಿಷಾರಿ ಅಂಶವನ್ನು ಎಷ್ಟೋ ವರ್ಷಗಳ ವರೆಗೆ ಕಾಯ್ದುಕೊಳ್ಳಬಲ್ಲದು. ಇದರ ಸಂಪೂರ್ಣ ರಚನೆ ತಿಳಿಯದೆ ಇದರ ಬದಲಾಗಿ ಇಂಥದೇ ಕೃತಕ ವಸ್ತುವನ್ನು ತಯಾರಿಸುವದು ವಿಜ್ಞಾನಿಗಳಿಗೆ ಇನ್ನೂ ಸಾಧ್ಯವಾಗಲಿಲ್ಲ. ಏನೇ ಆದರೂ ವಿಜ್ಞಾನಿಯೊಬ್ಬರ ಪ್ರಕಾರ ಇದು ಅತಿ ಪ್ರಬಲ ಪ್ರತಿವಿಷ. ಹಾವಿನ ವಿಷದಂತೆ ಇದನ್ನು ಸಹ ಪ್ರತಿವಿಷವನ್ನಾಗಿ ಬಳಸಬಹುದು. ಜೇನು ಹುಳ ಕಚ್ಚಿದಾಗ ಒಂದು ಹನಿ ವಿಷವನ್ನು ಮನುಷ್ಯನ ಚರ್ಮದಲ್ಲಿಂದ ರಕ್ತದಲ್ಲಿ ಬಿಡುತ್ತದೆ. ಈ ವಿಷಕ್ಕೆ ಔಷಧಿಯ ಅಂಶಗಳು ಇವೆ. ಅಂದರೆ ಇದನ್ನು ವಿಷಕರವಾಗಿ ಮಾಡಬೇಕಾದರೆ ಈ ಹನಿ ವಿಷದ ಹತ್ತು ಪಟ್ಟು ಬೇಕು. ಒಂದು ವೇಳೆ ಈ ವಿಷವು ನೂರು ಪಟ್ಟು ಆದರೆ ಮನುಷ್ಯನಿಗೆ ಮಾರಣಾಂತಿಕವಾಗುತ್ತದೆ. ಈ ವಿಷಕ್ಕೆ ಮನುಷ್ಯನ ಪ್ರತಿಕ್ರಿಯೆ ಬೇರೆ ಬೇರೆ ರೀತಿಯವಾಗಿವೆ. ಹೆಂಗಸರು, ಮಕ್ಕಳು ಮತ್ತು ಮುದುಕರು ಬೇಗ ತುತ್ತಾಗುತ್ತಾರೆ. ಆರೋಗ್ಯವಂತ ಮನುಷ್ಯನಿಗೆ ಒಂದರಿಂದ ಹತ್ತರ ವರೆಗೂ ಜೇನ್ನೊಣಗಳಿಂದ ಕಡಿಸಿಕೊಳ್ಳಬಲ್ಲ ಸಾಮರ್ಥ್ಯ ಇದೆ. ಕಡಿದ ಸ್ಥಳದಲ್ಲಿ ಸ್ಥಾನಿಕ ಪ್ರತಿಕ್ರಿಯೆ ಉಂಟಾಗುತ್ತದೆ. (ಚರ್ಮ ಕೆಂಪಾಗುವುದು, ಬಾತುಕೊಳ್ಳುವುದು, ಉರಿತ ಇತ್ಯಾದಿ) ಆದರೆ ೨೦೦–೩೦೦ ಜೇನ್ನೊಣಗಳ ಕಡಿತದಿಂದ ಉಂಟಾಂದ ವಿಷದ ತೀವ್ರ ಪರಿಣಾಮ ಮನುಷ್ಯನ ಮೇಲಾಗುವದು. ಮುಖ್ಯವಾಗಿ ನರಗಳ ಮತ್ತು ರಕ್ತ ಸಂಚಲನದ ಮೇಲೆ ಉಸಿರು ಸಣ್ಣಗಾಗುವದು, ನಾಡಿ ಬಡಿತ ತೀವ್ರವಾಗುವಂತೆ ಅನಿಸಿಕೆ, ಸ್ಮೃತಿ ತಪ್ಪುವುದು, ಅರ್ಧಾಂಗಿ ಇವೆಲ್ಲ ಲಕ್ಷಣಗಳು. ಐದುನೂರಕ್ಕಿಂತ ಹೆಚ್ಚು ಜೇನ್ನೊಣಗಳ ವಿಷದಿಂದ ಮರಣ ಸಂಭವಿಸುವದು. ಮುಖ್ಯವಾಗಿ ಮಿದುಳು ಲಕ್ವ ಹೊಡೆದು ಶ್ವಾಸೋಚ್ಛ್ವಾಸ ಬಂದಾಗುವದು. ಆದರೂ ಕೆಲವು ಮನುಷ್ಯರು ಅಸಾಮಾನ್ಯವಾದ ಸೂಕ್ಷ್ಮತೆಯನ್ನು ವ್ಯಕ್ತಪಡಿಸುವದುಂಟು. ಒಂದೇ ಒಂದು ಜೇನ್ನೊಣವೂ ತೀವ್ರ ಪರಿಣಾಮವನ್ನು ಮಾಡಬಲ್ಲದು. ಆದರೆ ಅಭ್ಯಾಸವಾದ ಹಾಗೆ ಜನರು ಜೇನ್ನೊಣಗಳ ಅಂಚಿನ ವಿಷಕ್ಕೆ ನಿರೋಧಕ ಶಕ್ತಿ ಹೊಂದಿರುವದು ನಿರೀಕ್ಷಣೆಯಿಂದ ವ್ಯಕ್ತಪಟ್ಟಿದೆ. ಅನೇಕಾನೇಕ ವರ್ಷಗಳ ವರೆಗೆ ಜೇನ್ನೊಣಗಳ ವ್ಯವಸಾಯದಲ್ಲಿ ನಿರತರಾದ ವ್ಯಕ್ತಿಗಳು ಸಾವಿರಾರು ನೊಣಗಳಿಂದ ಕಚ್ಚಿಸಿಕೊಂಡರೂ ಏನೂ ಆಘಾತವಾಗದ ನಿದರ್ಶನಗಳಿವೆ.

ಒಂದು ಬಾರಿ ಒಂದು ವರ್ಷದ ಮಗುವಿಗೆ ೨೦೦ ಕ್ಕೂ ಹೆಚ್ಚಿನ ಜೇನ್ನೊಣಗಳು ಕಚ್ಚಿದಾಗ ಆ ಮಗು ಕೆಲವೆ ಗಂಟೆಗಳಲ್ಲಿ ಸಾಯುತ್ತದೆ ಎಂದೆನಿಸಿತು. ಆಶ್ಚರ್ಯವೆಂದರೆ ಆ ಮಗು ಒಂದು ವಾರದಲ್ಲಿಯೇ ಗುಣಪಡಿಸಲ್ಪಟ್ಟಿತು. ನಂತರ ವಿಚಾರಿಸಲಾಗಿ ಅದು ಜೇನು ಸಾಕಾಣಿಕೆದಾರನ ಮಗುವೆಂದೂ ಸಾಕಾಣಿಕೆದಾರನ ಪತ್ನಿ ಗರ್ಭಿಣಿಯಿದ್ದಾಗ ಜೇನ್ನೊಣಗಳು ಕಡಿದಿದ್ದವೆಂದೂ ಗೊತ್ತಾಯಿತು. ಆಗ ಉಂಟಾದ ಪ್ರತಿರೋಧ ಶಕ್ತಿಯು ವಂಶವಾಹಿನಿಯಾಗಿ ಮಗುವಿಗೆ ಕೂಡ ಬಂದು ಆ ಮಗು ಬದುಕಿಕೊಂಡಿತು. ಅಲ್ಲದೆ ಆ ಮಗು ನಂತರದ ಬೆಳವಣಿಗೆಯ ಹಂತದಲ್ಲಿ ಆರೋಗ್ಯಕರವಾಗಿ ರೋಗ ರುಜಿನುಗಳಿಲ್ಲದೇ ಬೆಳೆಯಿತು.

ಸಂಶೋಧನೆಗಳ ಪ್ರಕಾರ ನರಗಳ ಮೇಲೆ ಜೇನು ವಿಷದ ಪ್ರಭಾವ ಪರಿಣಾಮಕರವಾಗಿದೆ. ಕ್ಲಿಯೊಪಾತ್ರ ರಾಣಿಯು ವಿಷಗಳ ಪರಿಣಾಮದ ಬಗ್ಗೆ ತುಂಬ ಆಸಕ್ತಿಯುಳ್ಳವಳಾಗಿದ್ದಳು. ಅತಿ ಕಡಿಮೆ ನೋವಿನಿಂದ ಕೊಲ್ಲಬಲ್ಲ ವಿಷಕ್ಕಾಗಿ ಆಕೆ ಶೋಧ ನಡೆಸಿದ್ದಳು. ಪ್ರತಿಯೊಂದು ವಿಷಕರ ವಸ್ತುಗಳನ್ನು ಸಂಗ್ರಹಿಸಿ ಅವುಗಳನ್ನು ಶಿಕ್ಷೆಗೊಳಪಟ್ಟ ಬಂದಿಗಳ ಮೇಲೆ ಪ್ರಯೋಗಿಸುತ್ತಿದ್ದಳು. ಕೊನೆಗೆ ಅವಳು ಜೇನುವಿಷವೇ ಅತಿ ಕಡಿಮೆ ನೋವಿನಿಂದ ಕೊಲ್ಲಬಲ್ಲ ವಿಷವೆಂದು

ತೀರ್ಮಾನಿಸಿದಳು.

ಜೇನು ಅಂಬಿನಿಂದ ತೆಗೆದ ವಿಷದಲ್ಲಿಯ ಅಂಶವಾದ ಪ್ರೊಟೀನ್‌ಯುಕ್ತ ಮೆಲಟಿನ್ ವಸ್ತುವು ರಕ್ತದೊತ್ತಡವನ್ನು ಕಡಿಮೆ ಮಾಡುತ್ತದೆ, ಎಂದು ೧೯೫೪ರಲ್ಲಿ ವಿಜ್ಞಾನಿಯೊಬ್ಬರು ಕಂಡುಹಿಡಿದಿದ್ದಾರೆ. ಹೈಲ್ಯುರೋನೈಡೇಸ್ ಎಂದು ರೀತಿಯ ಎನ್‌ಜೈಮು ರಕ್ತನಾಳಗಳಲ್ಲಿ ರಕ್ತ ಸಂಚಲನ ಶಕ್ತಿಯನ್ನು ಹೆಚ್ಚಿಸುತ್ತದೆ. ಈ ರಕ್ತ ಸಂಚಲನ ಶಕ್ತಿ ಆರೋಗ್ಯದ ದೃಷ್ಟಿಯಿಂದ ಅತಿ ಮಹತ್ವದ್ದು. ರೋಗಗಳಿಂದ ಇಲ್ಲವೆ ವೃದ್ಧಾಪ್ಯದಿಂದ ಈ ಶಕ್ತಿ ಕುಂಠಿತವಾಗುತ್ತದೆ. ಆಗ ಈ ಎಂಜೈಮನ್ನು ಸಣ್ಣ ಪ್ರಮಾಣದಲ್ಲಿ ನೀಡಿದರೂ ಆಸ್ಫುತ ಪರಿಣಾಮದಿಂದ ರಕ್ತನಾಳಗಳಿಗೆ ದಾರ್ಢ್ಯತೆ ಬರುತ್ತದೆ. ಎನ್ನುವುದು ಸಂಶೋಧನಾತ್ಮಕವಾಗಿ ಕಂಡುಬಂದಿದೆ. ೧೯೫೮ ರಲ್ಲಿ ಫ್ರೆಂಚ್ ಸಂಶೋಧಕರಾದ ಎ. ಗೋರ್ಟ್ನ್ ಮತ್ತು ಜೆ. ಚರ್ರಿ ಎಂಬವರು ಇಲಿಗಳ ಮೇಲೆ ಈ ಜೇನು ವಿಷವನ್ನು ಪ್ರಯೋಗಿಸಿದಾಗ ಟೆಟಾನಸ್ (ಧನುರ್ವಾತ) ಮತ್ತು ವಿಷಮಶೀತಜ್ವರದ ರೋಗ ಜಂತುಗಳ ನಾಶದಲ್ಲಿ ಈ ವಿಷವು ತುಂಬಾ ಅಚ್ಚರಿಯ ಪರಿಣಾಮ ನೀಡಿತು ಎಂಬುದು ಸಿದ್ಧವಾಗಿದೆ. ಜೇನು ಮುಳ್ಳು ಅಥವಾ ಏಪಿಟ್ಯಾಕ್ಸಿನ್ ಚುಚ್ಚುಮದ್ದಿನ ಉಪಯೋಗಗಳಿಂದ ರೋಗದ ಪ್ರತಿರೋಧ ಶಕ್ತಿ ತುಂಬಾ ಹೆಚ್ಚುವದು ಎಂಬುದನ್ನು ರಶಿಯದಲ್ಲಿ ಕಂಡುಹಿಡಿದಿದ್ದಾರೆ. ದೇಹದ ಯಾವದೊಂದು ಭಾಗಕ್ಕೆ ಇದನ್ನು ಪ್ರಯೋಗಿಸಿದಾಗ ಅದು ಬರೀ ಆ ಭಾಗಕ್ಕೆ ಮಾತ್ರ ಉಪಯೋಗವಾಗದೇ ಇಡೀ ಅಂಗರಚನೆಯ ಮೇಲೆ ಪ್ರಭಾವ ಬೀರಬಲ್ಲದೆಂದು ವ್ಯಕ್ತವಾಗಿದೆ. ಜೇನು ಕೃಷಿ ಮತ್ತು ಜೇನು ವ್ಯವಸಾಯದಲ್ಲಿ ನಿರತರಾದ ಬಹ್ವಂಶ ಮಂದಿಯ ಉತ್ತಮ ಆರೋಗ್ಯ ಮತ್ತು ದೀರ್ಘಾಯುಷ್ಯ ಇವುಗಳಿಗೆ ಕಾರಣ ಈ ಜೇನ್ನೊಣಗಳ ಕಡಿತ ಮತ್ತು ಅದರಿಂದಾದ ಜೇನು ವಿಷದ ಪ್ರತಿವಿಷತ್ವ ಎಂಬುದು ಪರಿಶೀಲನೆಯಿಂದ ಕಂಡುಬಂದಿದೆ.

ಓರ್ವ ಹುಡುಗಿಯು ಏಳು ವರ್ಷದವಳಿದ್ದಾಗ ಆಕಸ್ಮಿಕವಾಗಿ ಜೇನ್ನೊಣಗಳ ಕಡಿತಕ್ಕೆ ತುತ್ತಾಗಿ ಮುಂದೆ ಅವಳ ಮರಣದವರೆಗೂ ಯಾವ



'ಇವಳೇ ವೀಣಾಪಾಣಿ'

ಕಾಯಿಲೆಯೂ ಬಾಧಿಸಲಿಲ್ಲವೆಂಬ ಸಂಗತಿ ದಾಖಲೆಯಾಗಿದೆ. ಎಪಿಟಾಕ್ಸಿನ್ ಚಿಕಿತ್ಸೆಯಲ್ಲಿ ಮದ್ಯಪಾನ ನಿಷೇಧ. ಏಕೆಂದರೆ, ಮದ್ಯಸಾರದಿಂದ ಗುಣಕಾರಿ ಪ್ರಭಾವ ನಿರುಪಯುಕ್ತವಾಗುತ್ತದೆ. ಎಪಿಟಾಕ್ಸಿನ್ ಚಿಕಿತ್ಸೆಯನ್ನು ನಿಷ್ಣಾತ ವೈದ್ಯರಿಂದ ಜಾಗರೂಕರಾಗಿ ನಡೆಸಬೇಕು. ಇಲ್ಲವಾದರೆ ಅಪಾಯ ಸಂಭವಿಸುತ್ತದೆ. ಎಪಿಟಾಕ್ಸಿನ್ ಚಿಕಿತ್ಸೆಯ ಫಲಿತಾಂಶವೇನೆಂದರೆ ದೈಹಿಕ ಮತ್ತು ಮಾನಸಿಕ ನೋವನ್ನು ಕಡಿಮೆ ಮಾಡಿ ಜೀವಕಣಗಳಿಗೆ ಹೆಚ್ಚಿನ ರಕ್ತ ಪೂರೈಕೆಯಾಗುವಂತೆ ಮಾಡುತ್ತದೆ. ಅಲ್ಲದೇ ಹೊಸ ಜೀವಕಣಗಳ ಉತ್ಪಾದನೆಗೆ ಸಹಕರಿಸುವುದು. ಹಿಮೊಗ್ಲೊಬಿನ್ ಸುಮಾರು ೧೨ ಪಟ್ಟು ಹೆಚ್ಚಾಗುತ್ತದೆ ಮತ್ತು ರಕ್ತದ ಕೊಲೆಸ್ಟಾರಲ್ ಎಂಬ ಕೊಬ್ಬಿನ ಮಟ್ಟ ಕಡಿಮೆ ಆಗುತ್ತದೆ.

ಎಪಿಟ್ಯಾಕ್ಸಿನ್ ಚಿಕಿತ್ಸೆಯನ್ನು ಅರ್ಧಾಂಗ, ನರಗಳ ದೌರ್ಬಲ್ಯ, ನರವ್ಯಾಧಿಗಳು, ಕಣ್ಣಿನ ಬೇನೆಗಳು, ಚರ್ಮವ್ಯಾಧಿಗಳು ಇವುಗಳಲ್ಲೆಲ್ಲ ಉಪಯೋಗಿಸಿದುದುಂಟು. ರಕ್ತದೊತ್ತಡದ ಚಿಕಿತ್ಸೆಯಲ್ಲಂತೂ ತುಂಬಾ ಪರಿಣಾಮಕರ. ಒಂದೇ ಒಂದು ಜೇನ್ನೊಣದ ವಿಷವನ್ನು ತೆಗೆದು ನಾಯಿಗಳ ಮೇಲೆ ಚುಚ್ಚುಮದ್ದು ಪ್ರಯೋಗಿಸಿದಾಗ ಹೆಚ್ಚಿನ ಪ್ರಮಾಣದಲ್ಲಿ ರಕ್ತದೊತ್ತಡ ಇಳಿಯಿತು. ಚೀನಿ ವೈದ್ಯ ಫಾನ್ ಚು ಎಂಬಾತ ಹನ್ನೆರಡು ಜನ ಹೆಚ್ಚಿನ ರಕ್ತದೊತ್ತಡದ ರೋಗಿಗಳ ಮೇಲೆ ಈ ಜೇನು ಮುಳ್ಳಿನ ವಿಷ ಪ್ರಯೋಗಿಸಿದಾಗ ಗಮನಾರ್ಹ ಗುಣವಾಗಿದ್ದು ತಿಳಿದಿದೆ. ಅವರ ತಲೆನೋವು ಮಾಯವಾಗಿ ಅವರಿಗೆ ಸ್ವಾಸ್ಥ್ಯ ಉಂಟಾಯಿತು. ಕೆಲವು ಜೇನು ಸಾಕಾಣಿಕೆದಾರರು ಮತ್ತು ವೈದ್ಯಕೀಯ ವಲಯಗಳ ಅಭಿಪ್ರಾಯದಲ್ಲಿ ಎಪಿಟ್ಯಾಕ್ಸಿನ್ ಚಿಕಿತ್ಸೆಯಿಂದ ಸ್ತ್ರೀರೋಗಗಳು ಮತ್ತು ಮಕ್ಕಳ ರೋಗಗಳು ಕೂಡಾ ಗುಣವಾಗಬಲ್ಲವು. ಸರಿಯಾದ ಬಳಕೆಯಿಂದ ನಿಷ್ಠ ರೋಗಗಳಿಗೆ ಕೂಡಾ ಉತ್ತಮ ಚಿಕಿತ್ಸೆ ಎನ್ನುವುದು ಅವರ ಅಭಿಮತ. ಆದರೆ ಮಕ್ಕಳು ವೃದ್ಧರು ಮತ್ತು ಸ್ತ್ರೀಯರನ್ನು ಈ ಚಿಕಿತ್ಸೆಗೆ ಒಳಪಡಿಸುವಾಗ ಜಾಗ್ರತೆಯಾಗಿರಬೇಕು ಕ್ಷಯ, ಮಧುಮೇಹ ಅಪಧಮನಿಗಳಲ್ಲಿ ರಕ್ತ ಹೆಪ್ಪುಗಟ್ಟುವಿಕೆಯಂಥ ರೋಗಗಳಲ್ಲಿ ಇದರ ಬಳಕೆ ಕ್ವಚಿತ್ತಾಗಿದೆ.

ಯುಗೋಸ್ಲಾವಿಯಾ, ರಶಿಯಾ, ಜರ್ಮನಿ ಮತ್ತು ಅಮೇರಿಕಗಳಲ್ಲಿ ಈಗಾಗಲೇ ಈ ಚಿಕಿತ್ಸೆ ಪ್ರಾರಂಭವಾಗಿದೆ. ನೇರವಾಗಿ ಜೇನ್ನೊಣಗಳಿಂದಲೇ ಚುಚ್ಚಿಸುವ ಚಿಕಿತ್ಸೆ ಅಷ್ಟು ಪರಿಣಾಮಕಾರಿ ಫಲಿತಾಂಶ ನೀಡದು. ಆದರೆ ಇದಕ್ಕಾಗಿಯೇ ವಿಶಿಷ್ಟವಾಗಿ ತಯಾರಿಸಿದ ಸಿರಿಂಜ ಎಪಿಟಾಕ್ಸಿನ್ ಚಿಕಿತ್ಸೆ ಮಾಡುವುದು ಉತ್ತಮ. ಎಪಿಟಾಕ್ಸಿನ್ ಚಿಕಿತ್ಸೆಯನ್ನು ಎಲಕ್ಟ್ರೊ ಫೋರೆಸಿಸ್ ವಿಧಾನದಿಂದ ಇಲ್ಲವೇ ಮುಲಾಮು ಬಳಸಿ ಉಪಯೋಗಿಸಬಹುದು. ಜೇನು ವಿಷದ ಉಗಿಯನ್ನು ಶ್ವಾಸೋಚ್ಛ್ವಾಸ ಮಾಡಿ ಸೇದಬಹುದು ಅಥವಾ ಮಾತ್ರೆಗಳ ರೂಪದಲ್ಲಿ ಸೇವಿಸಬಹುದು.

ಬರಲಿರುವ ದಿನಗಳಲ್ಲಿ ಔಷಧ ಅಂಗಡಿಗಳಲ್ಲಿ ಎಪಿಟಾಕ್ಸಿನ್ ಗುಳಿಗೆಗಳು ಸುಲಭವಾಗಿ ದೊರೆಯುವದರಲ್ಲಿ ಸಂದೇಹವಿಲ್ಲ. ಪ್ರಯೋಗಾಲಯಗಳಲ್ಲಿ ಕೆಲವು ವಿಶಿಷ್ಟ ರೀತಿಗಳಿಂದ ಈ ಜೇನು ವಿಷವನ್ನು ಜೇನ್ನೊಣಗಳಿಂದ ತೆಗೆಯಬಹುದು. ಈ ಜೇನು ವಿಷವನ್ನು ಕೆಲ ತಿಂಗಳುಗಳವರೆಗೆ ಹಾಳಾಗದಂತೆ ಕಾದಿಡಬಹುದು. ಎಪಿಟಾಕ್ಸಿನ್ ಚಿಕಿತ್ಸೆ ಪಡೆಯುವಾಗ ರೋಗಿಯ ಆಹಾರ ಕ್ರಮ ತುಂಬ ಮುಖ್ಯ. ಆಹಾರದ ವೇಳೆ ಮತ್ತು ಆಹಾರದ ಪ್ರಮಾಣ ಮತ್ತು ಸತ್ವ ಕೂಡಾ ಗಮನಾರ್ಹ. ಆಹಾರವು ಹೆಚ್ಚಿನ ಕ್ಯಾಲೋರಿಯುಕ್ತವಾಗಿರಬೇಕು ಮತ್ತು ಸಮತೂಕದ್ದಾಗಿರಬೇಕು, ಸಸಾರಜನಕ, ಕೊಬ್ಬು, ವಿಟಾಮಿನ್‌ಗಳಿಂದ ಯುಕ್ತವಾಗಿರಬೇಕು. ಸಿ ಮತ್ತು ಬಿ ಜೀವನಸತ್ವಗಳು ಹೆಚ್ಚಿದ್ದರೆ ಉತ್ತಮ. ಸಕ್ಕರೆಯ ಬದಲಾಗಿ ಜೇನುತುಪ್ಪ ಸೇವಿಸಬಹುದು. ಮಾದಕ ದ್ರವ್ಯ ಮತ್ತು ಮಸಾಲೆ ಪದಾರ್ಥಗಳನ್ನು ಬಳಸಬಾರದು. ಒಟ್ಟಿನಲ್ಲಿ ಎಪಿಟ್ಯಾಕ್ಸಿನ್ ಚಿಕಿತ್ಸೆ ಸರಿಯಾಗಿ ಬಳಸಿದಲ್ಲಿ ಅತ್ಯುತ್ತಮ. ಅಜಾಗರೂಕತೆಯಿಂದ ಅಪಾಯ. ಈಗಾಗಲೇ ವಿದೇಶಗಳಲ್ಲಿ ಜನಪ್ರಿಯವಾದ ಚಿಕಿತ್ಸೆ ಜೇನು ಉತ್ಪಾದನೆ ಸಾಕಣೆಯ ಕೈಗಾರಿಕೆಯಲ್ಲಿ ದೊಡ್ಡದಾದ ಭಾರತಕ್ಕೆ ಬರುವದರಲ್ಲಿ ಸಂದೇಹವಿಲ್ಲ. ❖

# ಈ ಒಗಟುಗಳಿಗೆ ಅರ್ಥವನ್ನು ಹೇಳಬಲ್ಲಿರಾ?

ಶ್ರೀಧರ ದೀಕ್ಷಿತ

ಪುರಂದರದಾಸರು, ಕನಕದಾಸರು ಹಾಗೂ ಇನ್ನೂ ಅನೇಕ ಹರಿದಾಸ ಪರಂಪರೆಯವರು ರಚಿಸಿದ ಕೀರ್ತನೆಗಳು, ಬಹುಶಃ ಜಾನಪದ ಸಾಹಿತ್ಯವೊಂದನ್ನು ಬಿಟ್ಟರೆ, ಅತಿ ಹೆಚ್ಚು ಕನ್ನಡಿಗರನ್ನು ಮುಟ್ಟಿವೆ; ಗ್ರಾಂಥಿಕ ಭಾಷೆಯ ಆಡಂಬರವಿಲ್ಲದೆ, ಅಪರಿಚಿತ ಶಬ್ದಗಳ ಅಲಂಕಾರವಿಲ್ಲದೆ ಸುಲಭದಲ್ಲಿ ಅರ್ಥವಾಗಬಲ್ಲ ಈ ಹಾಡುಗಳಿಗೆ ಅಪವಾದವೋ ಎನ್ನುವಂತೆ ನನಗೆ ಮೂರು ಕೀರ್ತನೆಗಳು ದೊರಕಿವೆ. ಕೀರ್ತನೆಯೇ ವೃತ್ತಿಯನ್ನಾಗುಳ್ಳ ಒಬ್ಬರು ಇವನ್ನು ನನ್ನ ಸ್ನೇಹಿತರಿಗೆ ಕೊಟ್ಟು ಅರ್ಥ ಹೇಳಲು ಕೇಳಿಕೊಂಡರು. ಅವರಿಗೆ ಅರ್ಥ ತಿಳಿಯದೇ ನನ್ನ ಕೈಗೆ ಬಂತು. ನಾನು ಅನೇಕ ಕನ್ನಡ, ಸಂಸ್ಕೃತ ವಿದ್ವಾಂಸರಿಗೆ ಈ ಕೀರ್ತನೆಗಳನ್ನು ತೋರಿಸಿದೆ. ಅವರಿಗೂ ಅದು ಬಗೆಹರಿಯಲ್ಲ!

ಆ ಕೀರ್ತನೆಗಳು ಹೀಗಿವೆ:

### ಕೀರ್ತನೆ–೧

ರಾಗ: ಸೌರಾಷ್ಟ್ರ; ಚಾಪು ತಾಳ

ಮುತ್ತುಗಳಾ ಹಣ್ಣು ಕಾಯಾದ ಬಳಿಕಿನ್ನು
ಮತ್ತೊಂದು ಚೋದ್ಯ ಕೇಳೀ
ಚಿತ್ರದ ಹೂವಿನ ಹವಳ ಕಾಯಾಗುವ
ಅರ್ಥವ ತಿಳಿಸು ಪೇಳಿ, ||೧||

ಸುಟ್ಟು ಬೀಜವ ಬಿತ್ತಿ
ಬೆಳೆಯಬಾರದ ಕಾಯಿ
ಬಿಟ್ಟದೀ ಸಾರವನು
ತೊಟ್ಟು ಇಲ್ಲದ ಹಣ್ಣು ಮುಟ್ಟಿ
ಕೊಯ್ವನು ಒಬ್ಬ
ಹುಟ್ಟು ಬಂಜೆಯ ಮಗನೂ ||೨||

ಒಣಗಿದ್ದ ಮರವೇರಿ
ಹಣ್ಣು ಕಾಯುನು ಮಗ

ದಣಿಯುದೆ ಮೆದ್ದಿಳಿದಾ
ರಣದಲ್ಲಿ ತಲೆ ಹೋಯ್ದು ರುಂಡವು ಬೀಳಲು
ಹೆಣನೆದ್ದು ಕುಣಿದಾಡಿತೂ ||೩||

ಕಣ್ಣಿಲ್ಲದಾತನು ಕಂಡು ಪಿಡಿದಾ
ಮೃಗ ಕೈಯಿಲ್ಲದಾತ ನೆಚ್ಚಾ
ಮಣ್ಣಿಲಿ ಹೊರಳುವ ಕಾಲಿಲ್ಲದಾತನೂ
ಗಣ್ಯವಿಲ್ಲದೆ ಬಿಡಿದಾ ||೪||
ಎಲ್ಲರೂ ಹೇಳಿರಿ ಕನಕ ಹೇಳಿದ ಮಾತು
ಎಲ್ಲರೂ ಗ್ರಹಿಸಿಕೊಳ್ಳಿ
ಬೆಳ್ಳೀ ಕಣ್ಣಿನವಗೆ
ತಿಳಿಯಲಾರದ ಮಾತು
ಬಲ್ಲಾದಿಕೇಶವನೂ ||೫||

### ಕೀರ್ತನೆ ೨

ರಾಗ: ಸೌರಾಷ್ಟ್ರ: ಮುಟ್ಟಿ ತಾಳ.

ಮೂರು ಬೀಜವು ಬಿತ್ತಿ ಸಹಜ
ಬೀಜವು ತೋರಿ
ರಾಯರಿಗೊಂದು ಪಾಲು
ರಾಜ್ಯಕ್ಕೆ ಎರಡೂ ||ಪಲ್ಲ||

ಕರಿಯು ಬೀಜಕೆ ಕಾಯಿ ಬಿಳಿಯು
ಬೀಜಕೆ ಬೇರು
ಮತ್ತೊಂದು ಬೀಜಕ್ಕೆ
ಹದಿನೆಂಟು ಬೇರು ||ಅನುಪಲ್ಲ||

ರಂಜಕದ ಬೇರಿಗೆ ರಾಗ-ಮೂವತ್ತೆರಡು
ಕುಂಜರದ ಗಮನೆಯರು
ಪೇಳು ಗೋವಿಂದನೇ ||೧||

ಐದು ಮಾರಿನ ಮ್ಯಾಲೆ ವೈದಿಕರೆಂಬುವರು
ಐದು ದೀವಿಗೆ ಗಾಳಿ ಬೀಸಲಿದೆಯೆಂದು
ಧೂಳಿ ಹಾರಿದ ಮಣ್ಣು ಮೇಲೆ
ಮುದ್ದೆಯು ಕಲೆಸಿ ಅದ
ಲೋಲಭವರು ಪೇಳಿ
ಸೊಬಗಿನ ಬೆಡಗಾ ||೨||

ಎರಡು ನಂದಿಯು ಹೂಡಿ
ಗರುಡ ತಾ ಹೊಲನೇರಿ
ಹೊರಗೆ ಮುಚ್ಚಿದ ಕೋಲು ನೆರಿದಿಯೆಂದು
ಹರಿಯು ದಾಸರ ಕನಕ ಹಾಕಿದ ನುಡಿಕೆಯು
ಅದಿ ಕೇಶವನಾಣೆ ಬಲ್ಲವರು ಪೇಳಿ ||೩||

### ಕೀರ್ತನೆ ೩

ರಾಗ: ಸಾವೇರಿ: ಅಷ್ಟತಾಳ

ರಂಗ ಬಾರೋ ರಂಗಯ್ಯ ಬಾರೋ ||ಪಲ್ಲ||

ನೀ ಬಾರದಿದ್ದರೆ ಎನ್ನ
ಪ್ರಾಣ ಉಳಿಯುದು ||ಅನುಪಲ್ಲ||

ಅತ್ತಿಗೆ ಮೈದುನ ಬಾರೋ
ಅತ್ತೆಯು ಮಗಳ ಗಂಡ
ಅತ್ತಿಗೆ ಮ್ಯಾಲತ್ತಿಗೆಯಾ ನಾದಿನಿ
ಸೊಸೆಯು ಗಂಡಾ ||೧||

ಮಾವನ ಅಳಿಯ ಬಾರೋ
ಮಾವನ ಬೀಗನ ತನುಜಾ
ಮಾವನ ಮಡದಿಯು ಮಗಳಾ
ತಂಗಿಯು ಗಂಡಾ ||೨||

ಅಂಬುಧಿ ಶಯನನೆ ಬಾರೋ
ಆದಿ ವಸ್ತುವೆ ರಂಗಾ
ಕಂಭದೊಳು ನೆಲಸಿದ
ಆದಿ ಕೇಶವರಾಯ ||೩||

ಈ ಮೂರೂ ಕೀರ್ತನೆಗಳನ್ನು ಓದಿದಾಗ ನನಗೆ ಅರ್ಥವಾಗಿದ್ದೆಂದರೆ ಇವು ಕನಕದಾಸರಿಂದ ರಚಿಸಲ್ಪಟ್ಟವೆ ಎಂಬುದು ಮಾತ್ರ!

ನೀವೇನಾದರೂ ಅರ್ಥ ಹೇಳಬಲ್ಲಿರಾ?



"ತುಂಬಾ ರೋಮಾಂಚಕರ ಆಟ. ಈಗಾದ ಗೋಲ್ ನೋಡ್ದೆಯಾ?" ರಜನಿ ಪ್ರಶ್ನಿಸಿದ್ದೇ "ಹಾಳಾದ ಆಟ" ಎಂದು ಮಾತಿಗೆ ಟೀಕೆ ಹಾಕಿದ ಬ್ಯಾಪ್ಟಿಸ್ಟ್ ನಾಯುಡು—"ಅಂಥ ಕಚ್ಚಾ ಗೋಲುಗಳ ಮಕ್ಕಾಗಿ ನಾನಿಲ್ಲಿಗೆ ಬರಬೇಕಾಯ್ತು. ಇಲ್ಲಿಗೆ ಬಾರ್ದೆ ಇದ್ದಿದ್ರೆ ಜೇಬಲ್ಲಿ ಐವತ್ತು ಬಕ್ಸ್ ಉಳ್ಸ ಕೊಳ್ಳಬಹುದಿತ್ತು."

"ಅದು ಸರಿ." ರಜನಿ ಉಸುರಿದ.

"ಸರಿ ಬಿಡ್ತು, ನಡಿ ಹೋಗೋಣ. ಆಟ ವಿನ್ನು ಮುಕ್ತಾಯಗೊಂಡಂತೇ. ಏನಾದ್ರು ಕುಡೀ ಬೇಕಲ್ಲ...?"

"ನಾನು..." ಎಂದು ತೊದಲಿದ ರಜನಿ, "ಈ ದಿನ ಪಗಾರವಾದ್ದು ನಿನಗೆ ಗೊತ್ತಲ್ಲ. ಮನೆಗೆ ಆದಷ್ಟು ಬೇಗ್ನೆ ಹೋಗ್ಲೇ ಬೇಕು. ನನ್ನ ಹೆಂಡತಿ ಕಾದು ಕೂತಿರ್ತಾಳೆ" ಎಂದು ಮುಗುಳು ನಗುತ್ತಾ ಪ್ಯಾಂಟಿನ ಹಿಂಬದಿಯ ಕಿಸೆಯನ್ನು ತಡವಿಕೊಂಡದ್ದೇ ಆತ "ಅಂ. ನನ್ನ ಪರ್ಸು" ಎಂದು ಹೌಹಾರಿದ. "ನನ್ ಪರ್ಸನ್ನ ಯಾರೋ ಎಗ್ರಿಸಿ ಬಿಟ್ರಲ್ಲ", ಎನ್ನುತ್ತಾ ಜೇಬುಗಳನ್ನೆಲ್ಲಾ ತಡಕಾಡಿಕೊಂಡ. ಆತನ ಮುಖ ಕಳೆಗುಂದಿತ್ತು. ಫುಟ್‌ಬಾಲ್ ಪಂದ್ಯವನ್ನು ಮುಗಿಸಿಕೊಂಡು ವಾಪಸ್ಸಾಗುತ್ತಿದ್ದ ಜನರ ನೂಕುನುಗ್ಗಲಲ್ಲೀಗ ಅವರಿಬ್ಬರೂ ಸಿಲುಕಿಕೊಂಡಿದ್ದರು.

"ನನ್ಮಾತು ಕೇಳು ಇಂಥ ಪಂದ್ಯಗಳನ್ನ ನೋಡ್ಲಿಕ್ಕೆ ಬರೋರೆಲ್ಲ ಆಟದ ಅಭಿಮಾನಿಗಳಾಗಿರೋಲ್ಲ. ನೀನು ಆದಷ್ಟು ಎಚ್ಚರಿಕೆ ಯಿಂದಿರ್ಬೇಕಿತ್ತು." ಬ್ಯಾಪ್ಟಿಸ್ಟ್ ನುಡಿದ.

ಅವರಿಬ್ಬರೂ ಈಗ ಮೌನದಿಂದ ಹೆಜ್ಜೆ ಹಾಕುತ್ತಿದ್ದರು.

ತನ್ನ ಹೆಂಡತಿ ಏನೆಲ್ಲಾ ಹೇಳ್ಬಹುದು. ಪರ್ಸು ಕಳವಾದ್ದನ್ನ ಅವಳೆಂದೂ ನಂಬ್ಲಿಕ್ಕಿಲ್ಲ. ಈ ಎಲ್ಲಾ ಯೋಚನೆಗಳು ಆತನ ತಲೆಯಲ್ಲಿ ತುಂಬಿ ಕೊಂಡಿದ್ದವು.

"ಹೋಗ್ಲಿ ಬಿಡು ಮಹಾರಾಯ, ನನ್ನೊಂದಿಗೆ ಹಾ-ಸಾಲ್ಮರ್‌ಗೆ ಹೋಗ್ತಿದ್ದೇನೆ." ಬ್ಯಾಪ್ಟಿಸ್ಟ್ ಮೌನವನ್ನು ಭೇದಿಸಿದಾಗ—"ಇಲ್ಲ, ಇಲ್ಲ, ನಾನು ಮನೆಗೆ ಹೋಗ್ತೇನೆ." ರಜನಿ ಚುಟುಕಾಗಿ ಉತ್ತರಿಸಿದ. ಅವರ ದಾರಿ ಈಗ ಕವಲೊಡೆದಿತ್ತು. ರಜನಿ ಜರ್ಡಿನ್ ಮಾರ್ಗವಾಗಿ ಹೆಜ್ಜೆ ಹಾಕುತ್ತಿದ್ದ. ಆತನಿಗೆ ಎಲ್ಲಾದರೂ ಕುಳಿತು ಯೋಚಿಸಬೇಕಿತ್ತು. ಮುಖ್ಯವಾಗಿ ಕಳೆದುಕೊಂಡಿದ್ದ ಹಣದ ಮೊತ್ತಕ್ಕೆ ಸರಿಯಾಗಿ ಸುಳ್ಳು ಲೆಕ್ಕವನ್ನು ಸೃಷ್ಟಿಸಬೇಕಿತ್ತು. ಆತ ಪಾರ್ಕಿನಲ್ಲಿ ಬೆಂಚೊಂದರ ಮೇಲೆ ಕುಳಿತು ಕೊಳ್ಳುತ್ತಾ "ಬೆರಕೆ ಜನ" ಎಂದು ಜೇಬುಗಳ್ಳರ ನ್ನೊಮ್ಮೆ ಮನದಲ್ಲೇ ಶಪಿಸಿಕೊಂಡ.

ಸ್ವಲ್ಪ ಹೊತ್ತಿನ ಬಳಿಕ ಆತನಿಗೊಂದು ಯೋಚನೆ ಹೊಳೆಯಿತು. ಕಿರಾಣಿ ಅಂಗಡಿಯಲ್ಲಾಗಿದ್ದ ಬಾಕಿ, ಹಾಲಿನವನಿಗೆ ಕೊಡಬೇಕಾದ್ದು ಮತ್ತೆ ಮನೆ ಬಾಡಿಗೆ ಎಲ್ಲಾ ಸೇರಿ ನೂರಾ ಹನ್ನೆರಡು ರೂಪಾಯಿಗಳಾಗಿದ್ದವು. ದಾರಿಯಲ್ಲಿ ಬರುವಾಗಲೇ ಈ ಎಲ್ಲವನ್ನೂ ಚುಕ್ತಾ ಮಾಡಿ-ಬಂದಿರುವುದಾಗಿ ಹೆಂಡತಿಗೆ ಹೇಳಬೇಕೆಂದುಕೊಂಡ. ಆದರಿನ್ನುಳಿದ ಎಂಟು ರೂಪಾಯಿಗಳಿಗೇನು ಮಾಡಲಿ? ಎಂದು ಕೊಂಡ ಅವನಿಗೆ ಥಟ್ಟನೆ ಸಂಗಮ್ ಸಿನಿಮಾಕ್ಕಾಗಿ ಎರಡು ಟಿಕೇಟುಗಳನ್ನು ಮುಂಗಡವಾಗಿ ಖರೀದಿ ಸಿದ್ದು ನೆನಪಾಗಿ ಖುಷಿಯಿಂದ ಮೇಲಕ್ಕೆದ್ದ.

ಮೇಲಕ್ಕೆದ್ದವನು, "ಓಹೋ" ಎನ್ನುತ್ತಾ ಕಣ್ಣು ಕಿರಿದುಗೊಳಿಸಿದ.

ಬೆಳಿಗ್ಗೆ ಹಾಲಿನವನು ಹಾಲು ಕೊಡಲು ಬಂದಾಗ ಹಣ ಕೇಳಿಬಿಟ್ಟರೆ ತನ್ನ ಗತಿ? ಎಂಬ ಸಮಸ್ಯೆ ಅವ ನಿಗೀಗ ಅಡ್ಡ ಬಂದಿತು.

ಸ್ವಲ್ಪ ಹೊತ್ತು ಯೋಚಿಸುತ್ತಲೇ ಕುಳಿತ.

ಬ್ಯಾಂಕುಗಳು ಮುಚ್ಚುವ ಸಮಯ ಆದಾ ಗಿತ್ತು.

ಹಾಂ! ಬ್ಯಾಂಕುಗಳು ಮುಚ್ಚಿದ್ದರಿಂದ ಸಂಬಳ ಸಿಗುವುದಿನ್ನು ಸೋಮವಾರವೇ [illegible] ವರೆ ಹೇಗೆಂದು ಎಣಿಸಿದ. ಸೋಮವಾರ ಹೇಗಾ ದರೂ ಮಾಡಿ ಹಣವನ್ನು ಹೊಂದಿಸಿಕೊಂಡರಾಯಿ ತೆಂದು ನಿರ್ಧರಿಸಿದ್ದೇ ಆತನೆದ್ದು, ಜರ್ಡಿನ್ ಮಾರ್ಗವಾಗಿ ಮನೆಯತ್ತ ನಡೆಯಲಾರಂಭಿಸಿದ. ವಾಚನ್ನು ನೋಡಿಕೊಂಡ. ಸಮಯ ಆಗಲೇ ಎಂಟೂಮೂವತ್ತು ಗಂಟೆಯಾಗಿಬಿಟ್ಟಿದ್ದರಿಂದ ನಡಿಗೆಯ ವೇಗವನ್ನು ಚುರುಕುಗೊಳಿಸಿದ.

ರಸ್ತೆಯ ತಿರುವಿನಲ್ಲಿ ಹೋಗುತ್ತಿದ್ದಾಗ ತನ್ನಿಂದ

ತುಸು ದೂರದಲ್ಲಿದ್ದ ಮರದ ಕೆಳಗೆ ವ್ಯಕ್ತಿಯೊಬ್ಬ ನೆಲದಲ್ಲಿ ಬಿದ್ದುಕೊಂಡು ಹೊರಳಾಡುತ್ತಿರುವುದನ್ನು ಗಮನಿಸಿದ.

ಮಸುಕು ಕತ್ತಲು. ನೆಲದಲ್ಲಿ ಹೊರಳಾಡುತ್ತಿದ್ದ ವ್ಯಕ್ತಿಯ ಬಾಯಿಂದ ಬ್ರಾಂದಿಯ ಗಬ್ಬು ವಾಸನೆ ಗಮ್ಮೆಂದು ಬಡಿಯುತ್ತಿತ್ತು. ಯಥೇಚ್ಛವಾಗಿ ಕುಡಿದಿದ್ದ ಆ ವ್ಯಕ್ತಿಗೆ ಇಹದ ಅರಿವಿದ್ದಂತಿರಲಿಲ್ಲ. ಬೇರೊಂದು ಜಗತ್ತಿನಲ್ಲೇ ವಿಹರಿಸುತ್ತಿದ್ದ ಅವನು ಬ್ರಾಂದಿ ಕುಡಿದಂತಿರಲಿಲ್ಲ. ಬ್ರಾಂದಿಯೇ ಅವನನ್ನು ಕುಡಿದಂತೆ ತೋರುತ್ತಿದ್ದ. ಆದಾಗ್ಯೂ ರಜನಿ ಆ ವ್ಯಕ್ತಿಯ ಕೈ ಹಿಡಿದು ಮೇಲೇಳುವಂತೆ ವಿಧವಿಧವಾಗಿ ಕೇಳಿಕೊಂಡ. ರಮಿಸಿದ. ಆದರೆ ಆ ವ್ಯಕ್ತಿ ಶವದಂತೆ ಬಿದ್ದುಕೊಂಡೇ ಇದ್ದಾಗ ರಜನಿಗೆ ಸಹಿಸಲಾಗದೆಯೆ ಅವನ ಭುಜ ಹಿಡಿದು ಅಲ್ಲಾಡಿಸಿದ. ಹೊರಳಾಡಿಸಿದ. ಆಗ ಆ ವ್ಯಕ್ತಿಯ ಜೇಬಿನಿಂದ ಥಕ್ಕನೆ ಏನೋ ಜಾರಿ ಬಿದ್ದಂತಾಗಿ ನೋಡಿದ. ಹಳದಿ ಬಣ್ಣದ ಹಣದ ಪರ್ಸೊಂದು ಕೆಳಕ್ಕೆ ಬಿದ್ದಿತ್ತು. ಅದನ್ನು ನೋಡನೋಡುತ್ತಾ ರಜನಿಯ ಮನಸ್ಸು ಹುಚ್ಚೆದ್ದು ಕುಣಿಯಲಾರಂಭಿಸಿತು. ಪರ್ಸನ್ನು ಕೈಗೆತ್ತಿಕೊಂಡ ಬಿಡಿಸಿ ನೋಡಿದ. ಅದರೊಳಗೆ ತುಂಬಾ ಹಣವಿರುವುದನ್ನು ಕಂಡದ್ದೇ ನಿಧಾನವಾಗಿ ಪರ್ಸನ್ನು ಜೇಬಿಗಿಳಿಸಿದ. ಆತ ಗೊರಕೆ ಹೊಡೆಯುತ್ತಾ ಬಿದ್ದುಕೊಂಡಿದ್ದ ಕುಡುಕ ವ್ಯಕ್ತಿಯತ್ತ ಒಮ್ಮೆ ದೈನ್ಯದಿಂದ ನೋಡಿದ. ಏಕೋ ಅಲ್ಲಿ ಹೆಚ್ಚು ಹೊತ್ತು ನಿಲ್ಲಲಾಗದೆಯೇ ಓಣಿಯೊಂದರ ಮೂಲಕ ಮನೆಯತ್ತ ಹೆಜ್ಜೆ ಹಾಕಿದ.

"ಎಲ್ಲಿಗೆ ಹೋಗ್ಬಿಟ್ಟಿದ್ದೆ, ರಜನಿ?" ಹೆಂಡತಿ ಪ್ರಶ್ನಿಸುತ್ತಾ ಇದಿರಾಗೊಂಡಾಗ–

"ಆಫೀಸಿನಲ್ಲೇ ತಡವಾಯ್ತು. ಈ ದಿವಸ ಶನಿವಾರ ಅಂತ ನಿನಗೆ ಗೊತ್ತಿಲ್ವೇ? ತುಂಬಾ ಕೆಲಸ ಇದ್ದಿದ್ರಿಂದ ಬಾಸ್ ನನಗಿರುವಂತೆ ಹೇಳಿದ್ರು." ರಜನಿ ನುಡಿಯುತ್ತಿದ್ದಾಗಲೇ "ಸಂಬಳ?" ಹೆಂಡತಿಯ ಪ್ರಶ್ನೆಗೆ ರಜನಿ "ಓಹೋ! ಸಂಬಳವಾ? ಇಲ್ಲೇ ಇದೆ" ಎನ್ನುತ್ತಾ ಮಡಿಚಿದ್ದ ಒಂದಷ್ಟು ನೋಟುಗಳನ್ನು ಹೆಂಡತಿಯ ಕೈಗಿತ್ತ. ತುಂಬಾ ಜಾಗರೂಕಳಾಗಿ ಅವುಗಳನ್ನು ಎಣಿಸಿದ ಅವಳ



"ರಜನಿ, ನೂರೈವತ್ತಾರು ರೂಪಾಯಿಗಳಿವೆಯಲ್ಲ?" ಕೇಳಿದಳು.

"ಹಾಂ! ಆ ಪೆಟ್ಟಿಗೆ ಹಣವಾ? ಕಳೆದ ತಿಂಗ್ಳು ಓ. ಟಿ. ಮಾಡಿದ್ದು?" ಬೆವರುತ್ತಲೇ ಧೈರ್ಯ ಮಾಡಿ ಉತ್ತರಿಸಿದ.

"ನೀನು ತುಂಬಾ ಒಳ್ಳೆಯವ. ಹೀಗೆ ಹೆಚ್ಚು ಕೆಲ್ಸ ಮಾಡಿದ್ರೆ ಅದೆಷ್ಟು ಒಳ್ಳೇದು. ನಿನಗೂ ತಿಳಿದೇ ಇದೆಯಲ್ಲ – ಮುಂದೆ ನಮಗಿರೋ ಹಣದ ಅವಶ್ಯಕತೆ" ಹೃದಯ ಗಂಟಲಿಗೆ ಬಂದಂತಾಗಿದ್ದರೂ ಉತ್ಸಾಹಗೊಂಡವನಂತೆ ನಟಿಸುತ್ತಲೇ ಅಲ್ಲಿಂದ ಕಾಲು ಕಿತ್ತಿದ್ದ ರಜನಿ ತಲೆ ಭಾರವನ್ನು ಕಡಿಮೆ ಮಾಡಿಕೊಳ್ಳಲು ತಣ್ಣೀರಿಗೆ ಶರಣು ಹೋಗಿದ್ದ. ಆತ ಮನದಲ್ಲೇ ಹತ್ತಾರು ಬಾರಿ ಅಂದುಕೊಂಡ: "ದೇವರೇ ನನ್ನ ರಾಕ್ಷಸೀ ಕೃತ್ಯವನ್ನು ಕ್ಷಮಿಸು."

× × ×

ಸೋಮವಾರ ಬೆಳಿಗ್ಗೆ ಸಂತಸಭಾವದಲ್ಲಿದ್ದ ರಜನಿ ಸಿಳ್ಳೆ ಹಾಕುತ್ತಾ ಆಫೀಸಿನ ಮಾರ್ಗದಲ್ಲಿ ನಡೆಯುತ್ತಿದ್ದ. ಸಂಗಮ್ ಸಿನಿಮಾಕ್ಕಾಗಿ ಖರೀದಿಸಿದ ಎರಡು ಟಿಕೆಟ್ಟುಗಳು ಆತನ ಜೇಬಿನಲ್ಲಿದ್ದವು.

"ಏನು ತುಂಬಾ ಖುಷಿಯಲ್ಲಿರುವಂತಿದೆಯಲ್ಲ" ಇದಿರ್ಗೊಂಡ ಬ್ಯಾಪ್ಟಿಸ್ಟ್ ಪ್ರಶ್ನಿಸಿದ.

"ಏನು ಹೇಳ್ಲಿ?" ಎಂದು ಮಾತಿಗೆ ಮೊದಲು ಮಾಡಿದ ರಜನಿ "ನಿನ್ನೆ ಸಂಜೆ ನಿನ್ನಿಂದ ಬೇರೆಯಾದವನೇ ನಾನು–ದೇವರು ದುಷ್ಟ ಶಕ್ತಿಯನ್ನೇ ರಕ್ಷಿಸುತ್ತಾನೆ." ನೊಂದು ನುಡಿದ.

"ಹಾಂ! ನಿನಗೇನಾಯ್ತೆಂದು ಹಾಗೆ ನುಡಿಯುತ್ತಿರುವೆ?" ವಿಸ್ಮಯಗೊಂಡು ಪ್ರಶ್ನಿಸಿದ ಬ್ಯಾಪ್ಟಿಸ್ಟ್ ನುಡಿಯುತ್ತಿದ್ದ "ಹಣ ಹೋಯ್ತು ಅಂತ ತಲೆಗಿಷ್ಟೊಂದು ಹಚ್ಕೊಂಡ್ರಾ? ಕೇಳಿಲ್ಲಿ. ನಿನ್ ಪರ್ಸು ನಿನ್ನೆ ಸಂಜೆ ಕಳುವಾದ್ರೆ ನನ್ನದೂ ರಾತ್ರಿ ಹೋಯ್ತು."

"ನೀನು ಹೇಳುತ್ತಿರುವುದೇನನ್ನು?" ರಜನಿ ಬ್ಯಾಪ್ಟಿಸ್ಟನತ್ತ ಪ್ರಶ್ನಾರ್ಥಕ ನೋಟ ಬೀರಿದ.

"ಕೇಳಿಲ್ಲಿ–ನಾನು ನಿನ್ನಿಂದ ಬೇರೆಯಾದವನೇ ಸಾಲ್ಮಾರ್‌ಗೆ ಹೋದೆ. ಅಲ್ಲಿ ಸ್ವಲ್ಪ ಕುಡಿದು ಲೀಲಾಳನ್ನು ಭೆಟ್ಟಿ ಮಾಡಬೇಕಂತ ಹೊರಡೋದರಲ್ಲಿದ್ದಾಗ ಕೋಕ್ ಸೇವಿಸ್ಲಿಕ್ಕೆ ಅವಳೇ ಅಲ್ಲಿಗೆ ಬಂದಿದ್ಲು. ಅದು–ಇದು ಮಾತಾಡುತ್ತಾ ಅವಳು ಮೂರು ಕೋಕ್ ಖಾಲಿ ಮಾಡಿದ್ದಳು. ನಾನು ಯಥೇಚ್ಛ ರಂ ಕುಡಿದಿದ್ದೆ. ಅವಳು ಅದೆಷ್ಟು ಹೊತ್ತಿಗೆ ನನ್ನನ್ನಗಲಿದ್ದಾಳೊ – ನನಗೆ ಸರಿಯಾಗಿ ಗೊತ್ತಿಲ್ಲ. ಆದ್ರೆ ನೀನು ಜರ್ಡಿನ್ನಲ್ಲಿ ಇರ್ತೀಯಾ ಅನ್ನೋ ನಂಬಿಕೆಯಿಂದ ನಾನಲ್ಲಿಗೆ ಹೋದದ್ದು. ಬೆಂಚೊಂದರ ಮೇಲೆ ಕುಳಿತದ್ದು ಮಾತ್ರ ಅರಿವಿದೆ. ಆಮೇಲೆ ಏನೇನಾಯ್ತೋ ನನಗೆ ಗೊತ್ತಿಲ್ಲ. ಬೆಳಿಗ್ಗೆ ನಾನು ಎಚ್ಚೆತ್ತಾಗ ಅರಳಿ ಮರದ ಕೆಳಗಿದ್ದೆ. ನನ್ನ ಪರ್ಸು ಕಾಣೆಯಾಗಿತ್ತು" ಬ್ಯಾಪ್ಟಿಸ್ಟ್ ವಿವರಣೆ ನೀಡಿದ.

ವಿವರಣೆಯನ್ನು ಕೇಳಿ ಕವಿಸಿವಿಸಿಗೊಂಡ ರಜನಿ ಪೂರ್ಣ ಬೆವೆತ್ತಿದ್ದ.

"ನಿನಗೇನಾಯ್ತು? ಒಮ್ಮೆಗೇ ಅಸ್ವಸ್ಥಗೊಂಡಂತಾಗಿಬಿಟ್ಟೆಯಲ್ಲ!" ಗಾಬರಿಗೊಂಡು ಬ್ಯಾಪ್ಟಿಸ್ಟ್ ಪ್ರಶ್ನಿಸಿದ್ದ, ರಜನಿ–"ಮತ್ತೇ ನಿಲ್ಲ–ನಿನ್ನತ್ರ ಸ್ವಲ್ಪ ಹಣಾನ ಈ ದಿವಸ ಸಾಲವಾಗಿ ಕೇಳ್ಬೇಕಂತ ಮಾಡಿದ್ದೆ" ಎಂದು ಥಟ್ಟನೆ ಉತ್ತರಿಸಿದ. ✦



ದೇವಾಲಯಕ್ಕೆ ಹತ್ತಿರವಿದ್ದಷ್ಟೂ ದೇವರಿಗೆ ದೂರ. — ಜಾನ್ ಹೇವುಡ್

ಇಡೀ ಜೀವನ ಸುಖವಾಗಿಯೆ ಇದ್ದರೆ ಸುಖವೇ ನರಕವಾಗುತ್ತದೆ.

—ಜಾರ್ಜ್ ಬರ್ನಾರ್ಡ್‌ಶಾ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಅವಿಸ್ಮರಣೀಯ**
(ಅ) ಪ್ರೇಮವಿಲ್ಲದ (ಆ) ಮರೆತುಬಿಟ್ಟ (ಇ) ಆಶ್ಚರ್ಯಕರ (ಈ) ಮರೆಯಲಾರದ

೨. **ಪುರುಷಾರ್ಥ**
(ಅ) ಮನುಷ್ಯನ ಗುರಿ (ಆ) ಬೈಗುಳ ಮಾತು (ಇ) ಕಠಿಣ ನುಡಿ (ಈ) ಅರ್ಥ ತಿಳಿಯದ

೩. **ಅಶೋಚ್ಯ**
(ಅ) ಶುದ್ಧ (ಆ) ದುಃಖಪಡಬೇಕಿಲ್ಲದ (ಇ) ಆಶ್ಚರ್ಯಕರ (ಈ) ತಿನ್ನಬಾರದ

೪. **ಜಾಲಂಧ್ರ**
(ಅ) ಮೀನಿನ ಬಲೆ (ಆ) ಬೋಗುಣಿ (ಇ) ಕಿಡಿಕಿ (ಈ) ಮೋಡ

೫. **ತಿಗುರಿ**
(ಅ) ಒಂದು ಔಷಧ ವನಸ್ಪತಿ (ಆ) ಕುಂಬಾರನ ಚಕ್ರ (ಇ) ಲೇಪನ (ಈ) ತಮಿಳರವ

೬. **ನಿಶೀಥ**
(ಅ) ಬೆಚ್ಚಗೆ (ಆ) ನಡುರಾತ್ರಿ (ಇ) ಅತಿ ತಂಪು (ಈ) ರಾಕ್ಷಸ

೭. **ಕವುದಿ**
(ಅ) ಮುಖ ಕೆಳಗಾಗಿ ಮಲಗಿದವಳು (ಆ) ಹೊಟ್ಟು (ಇ) ಮುಚ್ಚಳ (ಈ) ಹಚ್ಚಡ

೮. **ಪಟಾಂಗಣ**
(ಅ) ಅಂಗಳ (ಆ) ಪರದೆ (ಇ) ಒಣ ಹರಟೆ (ಈ) ಚಿತ್ರಶಾಲೆ

೯. **ಬೇಕೂಫ**
(ಅ) ತಿಳಿಗೇಡಿ (ಆ) ಮಹಾ ಕೋಪಿಷ್ಠ (ಇ) ಜೋಡಿ ಬಾವಿ (ಈ) ಸಿಕ್ಕಾಬಟ್ಟೆ

೧೦. **ಸಂಕೀರ್ಣ**
(ಅ) ಜೋಡಿಸಿದ (ಆ) ಮುದುಡಿದ (ಇ) ಜಟಿಲ (ಈ) ಗುರುತು ಹಿಡಿಯಲಾರದ

೧೧. **ಪ್ರಾಶನ**
(ಅ) ಹೊಟ್ಟೆ ತುಂಬ (ಆ) ಕಾನೂನು (ಇ) ಎದ್ದು ಕಾಣುವಂಥ (ಈ) ಉಣ್ಣುವುದು

೧೨. **ಕದುಕು**
(ಅ) ಜಾಲಾಡು (ಆ) ಕುಕ್ಕು (ಇ) ಹಿಸುಕು (ಈ) ಕೆನ್ನೆ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಅವಿಸ್ಮರಣೀಯ** (ಈ) ಮರೆಯಲಾರದ, ಉದಾ- ಅವಿಸ್ಮರಣೀಯವಾದ ಅನುಭವ. [ಸಂ. ಅ=ಅಲ್ಲ+ವಿಸ್ಮರಣ=ನೆನಪು ಹೋಗುವುದು — ಇದರಿಂದ]

೨. **ಪುರುಷಾರ್ಥ** (ಅ) ಮನುಷ್ಯನ ಗುರಿ; ಜೀವನದ ಗುರಿಗಳಾದ ಧರ್ಮ, ಹಣ, ಕಾಮ ಮತ್ತು ಮೋಕ್ಷ ಇವು ಚತುರ್ವಿಧ ಪುರುಷಾರ್ಥಗಳು. ಉದಾ- ಯಾವ ಪುರುಷಾರ್ಥವನ್ನೂ ಸಾಧಿಸಲಿಲ್ಲ. [ಸಂ. ಪುರುಷ=ಮನುಷ್ಯ+ಅರ್ಥ=ಪ್ರಯೋಜನ]

೩. **ಅಶೋಚ್ಯ** (ಅ) ದುಃಖಪಡಬಾರದ; ಶೋಕಿಸಲು ಯೋಗ್ಯವಲ್ಲದ. ಉದಾ- ಅಶೋಚ್ಯರಿಗಾಗಿ ಅಳಬಾರದು. [ಸಂ. ಅ=ಅಲ್ಲ+ಶೋಚ್ಯ=ಶೋಕಿಸತಕ್ಕ]

೪. **ಜಾಲಂಧ್ರ** (ಇ) ಕಿಡಿಕಿ, ವಿಶೇಷವಾಗಿ ಬಲೆಯಂಥ ರಚನೆಯುಳ್ಳ ಗವಾಕ್ಷ. ಉದಾ- ರಾಜಕುಮಾರಿ ಜಾಲಂಧ್ರದಿಂದ ನೋಡುತ್ತಿದ್ದಳು. [ಸಂ.]

೫. **ತಿಗುರಿ** (ಅ) ಚಕ್ರ, ವಿಶೇಷವಾಗಿ ಕುಂಬಾರನ ಚಕ್ರ. ಉದಾ- ಬ್ರಹ್ಮನ ತಿಗುರಿಯಲ್ಲಿ ಸೃಷ್ಟಿಯಾದ ಲೋಕಗಳು. [ದೇಶ್ಯ]

೬. **ನಿಶೀಥ** (ಅ) ನಡುರಾತ್ರಿ, ನಟ್ಟಿರುಳು, ಸರಿರಾತ್ರಿ. ಉದಾ- ನಿಶೀಥದ ನಿಶ್ಶಬ್ದ. [ಸಂ.]

೭. **ಕವುದಿ** (ಈ) ಹಚ್ಚಡ, ಹರಕು ಅಥವಾ ತುಂಡು ಬಟ್ಟೆಗಳನ್ನು ಜೋಡಿಸಿ ಹೊಲಿದ ಹೊದಿಕೆ, ಕಂತೆ. ಉದಾ- ಅಜ್ಜಿಯ ಕವುದಿ. [ದೇಶ್ಯ]

೮. **ಪಟಾಂಗಣ** (ಅ) ಮನೆಯ ಜಗುಲಿಗೆ ತಗಲಿದಂತೆ ಇರುವ ಅಂಗಳ; ಮುಂದಿಲು. ಉದಾ- ಅರಮನೆಯ ಪಟಾಂಗಣದಲ್ಲಿ ಸಭೆ ಸೇರಿತ್ತು. [ಸಂ.ಪಟ=ಸೂರು+ಅಂಗಣ]

೯. **ಬೇಕೂಫ** (ಅ) ತಿಳಿಗೇಡಿ, ಬುದ್ಧಿಹೀನ, ಹೆಡ್ಡ. ಉದಾ- ಆ ಹೆಣ್ಣಿಗೆ ಮರುಳಾದ ಬೇಕೂಫ. [ಉರ್ದು ಬೇ=ಇಲ್ಲದ+ವುಕೂಫ (ಅರಬಿ)=ಬುದ್ಧಿ]

೧೦. **ಸಂಕೀರ್ಣ** (ಇ) ಜಟಿಲ, ತೊಡಕಾದ; ಸುಲಭವಾಗಿ ವಿವರಿಸಲು ಬಾರದ. ಉದಾ- ಸಂಕೀರ್ಣವಾದ ಅರ್ಥ. [ಸಂ.]

೧೧. **ಪ್ರಾಶನ** (ಈ) ಉಣ್ಣುವುದು, ತಿನ್ನುವುದು, ಕುಡಿಯುವುದು. ಉದಾ- ವಿಷಪ್ರಾಶನ ಮಾಡಿದ. [ಸಂ. ಪ್ರ=ಹೆಚ್ಚಾದ+ಅಶನ=ತಿನ್ನುವಿಕೆ]

೧೨. **ಕದುಕು** (ಅ) ಕುಕ್ಕು. ಕೊಕ್ಕಿನಿಂದ ಕೊಡಹು. ಉದಾ-ಪಕ್ಕಿ ಕದುಕಿದ ಹಣ್ಣು. [ದೇಶ್ಯ]

## ನಿಮ್ಮ ಶಬ್ದ ಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | | |
|---|---|---|---|
| ೬—೭ | ಸರಿಯಿದ್ದರೆ | ... | ಸಾಧಾರಣ |
| ೮–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |

# ಪರಿಪೂರ್ಣ ಸಂಖ್ಯೆಗಳ ಅಪರಿಪೂರ್ಣ ಪ್ರಪಂಚ

ಜಿ. ಟಿ. ನಾರಾಯಣರಾವ್

ಯಾವುದೇ ಪೂರ್ಣಾಂಕವನ್ನು ತೆಗೆದುಕೊಳ್ಳೋಣ. ಉದಾಹರಣೆಗೆ ೧೦. ಇದರ ಅಪವರ್ತನಗಳು ೧, ೨, ೫ (ಮೂಲಸಂಖ್ಯೆಯಾದ ೧೦ನ್ನು ಇವುಗಳಲ್ಲಿ ಸೇರಿಸಿಲ್ಲ). ಈ ಅಪವರ್ತನಗಳ ಮೊತ್ತ ೮. ಇದು ೧೦ಕ್ಕಿಂತ ಕಡಿಮೆ.

೧೨ ಹೀಗಲ್ಲ. ಇದರ ಅಪವರ್ತನಗಳು ೧, ೨, ೩, ೪, ೬. ಇವುಗಳ ಮೊತ್ತ ೧೬. ಇದು ಮೂಲಸಂಖ್ಯೆ ೧೨ಕ್ಕಿಂತ ಜಾಸ್ತಿ.

೬ರ ವಿಚಾರ ಬೇರೆ. ಇದರ ಅಪವರ್ತನೆಗಳ ಮೊತ್ತ ಇದೇ: ೧+೨+೩=೬. ಆದ್ದರಿಂದ ೧೦ ಅದರ ಅಪವರ್ತನಗಳ ಮೊತ್ತ ಕುರಿತಂತೆ 'ಉನ್ನತ' ಸ್ಥಾನದಲ್ಲಿಯೂ ೧೨ 'ಅವನತ' ಸ್ಥಾನದಲ್ಲಿಯೂ ೬ 'ಸಮ' ಸ್ಥಾನದಲ್ಲಿಯೂ ಇವೆ. ೧೦ ಮತ್ತು ೧೨ ಎರಡರಲ್ಲಿಯೂ ಕಂಡುಬರದ ಒಂದು ತೆರನಾದ 'ಪರಿಪೂರ್ಣತೆ' ೬ರಲ್ಲಿ ಇದೆಯೆಂದು ಭಾಸವಾಗುತ್ತದೆ.

ಈ ಕಾರಣಗಳಿಂದ ೧೦ನ್ನು ಉತ್ಸಂಖ್ಯೆ (abundant number) ಎಂದೂ ೧೨ನ್ನು ಅಪಸಂಖ್ಯೆ (defective number) ಎಂದೂ ೬ನ್ನು ಪರಿಪೂರ್ಣ ಸಂಖ್ಯೆ (perfect number) ಎಂದೂ ಹೇಳುತ್ತೇವೆ.

ಇಂಥ ಸಂಖ್ಯೆಗಳು ಎಷ್ಟಿವೆ? ಬೇರೆ ಬಗೆಯ ಸಂಖ್ಯೆಗಳು ಇವೆಯೇ? ನಮ್ಮ ಅಳವಿಗೆ ನಿಲುಕುವ ಹಲವಾರು ಸಂಖ್ಯೆಗಳನ್ನು ನಾವೇ ಯಾದೃಚ್ಛಿಕವಾಗಿ ಆಯ್ದು ಪರೀಕ್ಷಿಸಿ ನೋಡೋಣ.

ಉದಾಹರಣೆಗೆ ೩೯, ೬೩, ೧೧೫, ೨೦೭ ಎಂಬ ನಾಲ್ಕು ಬೆಸಸಂಖ್ಯೆಗಳನ್ನು ಮೊದಲು ಪರೀಕ್ಷಿಸೋಣ. ಇವುಗಳ ಅಪವರ್ತನಗಳು ಅನುಕ್ರಮವಾಗಿ ೧, ೩, ೧೩; ೧, ೩, ೭, ೯, ೨೧; ೧, ೫, ೨೩; ೧, ೩, ೯, ೨೩, ೬೯. ಇಲ್ಲಿಯ ಪ್ರತಿಯೊಂದು ಗುಂಪಿನ ಅಪವರ್ತನಗಳ ಮೊತ್ತವೂ ಆಯಾ ಮೂಲಸಂಖ್ಯೆಗಿಂತ ಕಡಿಮೆಯೇ ಇರುವುದರಿಂದ ಈ ೪ ಬೆಸಸಂಖ್ಯೆಗಳು ಉತ್ಸಂಖ್ಯೆಗಳೇ. ಇನ್ನೂ ಕೆಲವು ದೊಡ್ಡ ಬೆಸಸಂಖ್ಯೆಗಳನ್ನು ಪರಿಶೀಲಿಸಿದರೂ ಅದೇ ಪರಿಸ್ಥಿತಿ ಕಾಣುತ್ತದೆ.

ಆದ್ದರಿಂದ ಬೆಸಸಂಖ್ಯೆಗಳಿಗೆ ಸಾರ್ವತ್ರಿಕವಾಗಿ ಸ್ಥಾಲೀಪುಲಾಕನ್ಯಾಯ (ತಪ್ಪಲೆಯೊಳಗಿನ ಅನ್ನದ ಎರಡು ಅಗುಳನ್ನು ಬೆರಳಿನಿಂದ ಚಿವುಕಿ ನೋಡಿ ಅನ್ನದ ಮೊತ್ತವೇ ಬೆಂದಿದೆ ಎಂದು ನಿರ್ಧರಿಸುವ ಕ್ರಮ) ಅನ್ವಯಿಸಿ ಸಮಸ್ತ ಬೆಸಸಂಖ್ಯೆಗಳೂ ಉತ್ಸಂಖ್ಯೆಗಳೆಂದು ತೀರ್ಮಾನಿಸಿದರೆ ಅಂಕಗಣಿತದ ತಿರಸ್ಕಾರದ ಕಿಲಕಿಲ ಕೆನೆತ ನಮ್ಮನ್ನು ಸ್ವಾಗತಿಸದಿರದು.

ಏಕೆಂದರೆ ೧ರಿಂದ ೯ರ ವರೆಗಿನ ಮೊದಲ ಐದು ಬೆಸಸಂಖ್ಯೆಗಳ ಸಂತತ ಗುಣಲಬ್ಧ ೯೪೫ನ್ನು ಪರೀಕ್ಷಿಸಿ ನೋಡಿ. ಇದಕ್ಕೆ ಹದಿನೈದು ಅಪವರ್ತನಗಳಿವೆ. ಇವುಗಳ ಮೊತ್ತ ೯೭೫. ಆದ್ದರಿಂದ ೯೪೫ ಬೆಸಸಂಖ್ಯೆಯಾಗಿದ್ದೂ ಅವಸಂಖ್ಯೆ ಆಗಿದೆ. ಬೆಸಸಂಖ್ಯಾ ಪ್ರಪಂಚದಲ್ಲಿ ಕೂಡ ಪಕ್ಷಾಂತರಿಗಳಿದ್ದಾರೆ, ಜಾಗ್ರತೆ!

ಈಗ ೧೪, ೨೪, ೬೪, ೧೦೦ ಎಂಬ ೪ ಸರಿಸಂಖ್ಯೆಗಳನ್ನು ಪರೀಕ್ಷಿಸೋಣ. ಇಲ್ಲಿ ೧೪, ೬೪ ಉತ್ಸಂಖ್ಯೆಗಳಾಗಿದ್ದರೆ ೨೪, ೧೦೦ ಅವಸಂಖ್ಯೆಗಳಾಗಿವೆ. ಇವು ವಿಶೇಷ ತ್ರಾಸ ಒಡ್ಡುವುದಿಲ್ಲ. ಸಜ್ಜನರಂತೆ ಸರಿಸಂಖ್ಯೆಗಳೂ ಸುಲಭಗಮ್ಯ! ಭೋಳೆ ಮಂದಿ.

ಇನ್ನು ಎರಡು ಸರಿಸಂಖ್ಯೆಗಳನ್ನು ಪರಿಶೀಲಿಸೋಣ: ೨೮, ೪೯೬.

೨೮ರ ಅಪವರ್ತನಗಳ ಮೊತ್ತ ೧+೨+೪+೭+೧೪=೨೮ ಅದೆ. ೪೯೬ರ ಅಪವರ್ತನಗಳ ಮೊತ್ತ ೧+೨+೪+೮+೧೬+೩೧+೬೨+೧೨೪+೨೪೮=೪೯೬, ಅದೇ. ಆದ್ದರಿಂದ ೨೮ ಮತ್ತು ೪೯೬ (೬ರಂತೆ) ಪರಿಪೂರ್ಣ ಸಂಖ್ಯೆಗಳು.

ಆದ ಮೇಲೆ ಧನಪೂರ್ಣಾಂಕಗಳು ಮೂರು ವಿಭಿನ್ನ ವರ್ಗಗಳಲ್ಲಿ ಅಳವಡುವುದಾಯಿತು: ಉತ್ಸಂಖ್ಯೆಗಳು, ಅವಸಂಖ್ಯೆಗಳು, ಪರಿಪೂರ್ಣ ಸಂಖ್ಯೆಗಳು. ನಾಲ್ಕನೆಯ ವರ್ಗ ಇಲ್ಲ.

ಪರಿಪೂರ್ಣ ಸಂಖ್ಯೆಗಳ ಶೋಧದ ಕೀರ್ತಿ ಕ್ರಿಸ್ತಪೂರ್ವ ದಿನಗಳ ಗ್ರೀಕರಿಗೆ ಸಲ್ಲುತ್ತದೆ. ಮಾನವಕೃತಿಯಾದ ಸಂಖ್ಯೆಗಳಲ್ಲಿ ಅವರು ಸ್ವತಃ ಭಗವತ್ಸೃಷ್ಟಿಯಾದ ಮಾನವನಿಗಿಂತ ಅಧಿಕ ಮಹತ್ತ್ವವನ್ನೂ ಅನುಭಾವೀ ಗುಣವನ್ನೂ ಕಂಡರು. ಕೆಲವು ಸಂಖ್ಯೆಗಳು ವಿಶ್ವ ರಹಸ್ಯದ ಕೀಲಿ ಧರಿಸಿವೆ ಎಂದು ಅವರು ಪ್ರಾಮಾಣಿಕವಾಗಿ ನಂಬಿ ಆ ವಿಶಿಷ್ಟ ಸಂಖ್ಯೆಗಳ ಅನ್ವೇಷಣೆಯನ್ನು ಗೀಳಾಗಿ ಹಮ್ಮಿಕೊಂಡಿದ್ದರು.

ಆ ದಿನಗಳಲ್ಲಿ ಗೊತ್ತಿದ್ದುದು ನಾಲ್ಕು ಪರಿಪೂರ್ಣ ಸಂಖ್ಯೆಗಳು ಮಾತ್ರ: ೬, ೨೮, ೪೯೬, ೮೧೨೮. ಇವುಗಳ ಪೈಕಿ ೬ರಲ್ಲಿ ಇನ್ನೂ ಒಂದು ವಿಶೇಷ ಗುಣ ಉಂಟು. ಇದರ ಅಪವರ್ತನಗಳ ಸಂತತ ಗುಣಲಬ್ಧವೂ ಇದೇ: ೧×೨×೩=೧+೨+೩=೬. ಈ ತೆರನಾಗಿ ಉಭಯ ಗುಣ ಸಮಾವೇಶಗೊಂಡಿರುವ ಸಂಖ್ಯೆ ಇನ್ನೊಂದಿಲ್ಲ. ಭಗವಂತ ಪ್ರಪಂಚವನ್ನು ಕೇವಲ ಆರೇ ದಿನಗಳಲ್ಲಿ ಸೃಷ್ಟಿಸಿದ ಎಂಬ ಕ್ರಿಶ್ಚಿಯನ್ ನಂಬಿಕೆಯ ಆಧಾರ ೬ರ ಈ ಅನುಭಾವೀ ಗುಣವಾಗಿರಬಹುದು.

ಐದನೆಯ ಪರಿಪೂರ್ಣ ಸಂಖ್ಯೆ ೩೩,೫೫೦,೩೩೬. ಇದು ಕ್ರಿಸ್ತಶಕ ಸುಮಾರು ೧೪೬೦ರಲ್ಲಿ ಬೆಳಕಿಗೆ ಬಂದಂತೆ ಕಾಣುತ್ತದೆ. ಯಾರು ಎಲ್ಲಿ ಇದನ್ನು ಪತ್ತೆ ಹಚ್ಚಿದರೆಂಬ ಸಂಗತಿ ಗೊತ್ತಿಲ್ಲ. ಆರನೆಯ ಪರಿಪೂರ್ಣ ಸಂಖ್ಯೆ ೮,೫೮೯,೮೬೯,೦೫೬. ಇದರ ಸಮಸ್ತ ಅಪವರ್ತನಗಳನ್ನೂ ಹುಡುಕಿ ಹೆಕ್ಕಿ ಅವುಗಳ ಮೊತ್ತ ಈ ಸಂಖ್ಯೆಯೇ ಆಗುವುದೆಂದು ರುಜುವಾತಿಸುವುದೊಂದು ಕುತೂಹಲಕಾರಿ ಅಭ್ಯಾಸ.

ಇಂಥ ಬೃಹತ್ಸಂಖ್ಯೆಗಳ ಜೊತೆ ವ್ಯವಹಾರ ನಡೆಸುವುದು ಆಧುನಿಕ ಗಣಕಗಳಿಗೆ ಮಾತ್ರ ಸಾಧ್ಯ. ಆದರೆ ಇಲ್ಲಿಯೂ ಯಂತ್ರ ವಿಧಿಸುವ ಸೀಮಿತಗಳು ಇದ್ದೇ ಇರುತ್ತವೆ, ಆದ್ದರಿಂದ ಪರಿಪೂರ್ಣಸಂಖ್ಯೆಗಳ ಸಂಖ್ಯೆ ಸಾಂತವೇ ಅನಂತವೇ ? ಅನಂತವೆಂದಾದರೆ ಪರಿಪೂರ್ಣ ಸಂಖ್ಯೆಗಳನ್ನು ಮಾತ್ರ ಉತ್ಪಾದಿಸುವ ಗಣಿತ ಸೂತ್ರವಿದೆಯೇ ? (ಉದಾಹರಣೆಗೆ $n$ಗೆ ಧನ ಪೂರ್ಣಾಂಕಗಳನ್ನು ಆದೇಶಿಸಿದಾಗ ೨$n$—೧ ಸಮಸ್ತ ಬೆಸಸಂಖ್ಯೆಗಳನ್ನೂ, ೨$n$ ಸಮಸ್ತ ಸರಿಸಂಖ್ಯೆಗಳನ್ನೂ 'ಉಸುರಿಸುವ' ಗಣಿತ ಸ್ವಯಂಚಾಲಕ ಮಣಿಗಳು.) ಈ ಪ್ರಶ್ನೆಗಳಿಗೆ ನಿರ್ಣಾಯಕ ಉತ್ತರ ದೊರೆತಿಲ್ಲ.

ಕ್ರಿಪೂ ೪ನೆಯ ಶತಮಾನದ ಯೂಕ್ಲಿಡ್ ಸೀಮಿತ ಸೂತ್ರವೊಂದನ್ನು ಸಾಧಿಸಿದ್ದಾನೆ:

೨, ೩, ೫, ೭, ೧೧, ೧೩, ೧೭, ಮುಂತಾದ ಅಪವರ್ತನರಹಿತ ಪೂರ್ಣಾಂಕಗಳಿಗೆ ಅವಿಭಾಜ್ಯ ಸಂಖ್ಯೆಗಳೆಂದು (prime numbers) ಹೆಸರು. ಯೂಕ್ಲಿಡನ ಪ್ರಕಾರ ೨$^{n}$ – ೧ ಎಂಬುದು ಅವಿಭಾಜ್ಯವಾದಾಗ ೨$^{n-1}$ (೨$^{n}$ – ೧) ರೂಪದಲ್ಲಿರುವ ಯಾವುದೇ ಸಂಖ್ಯೆ ಪರಿಪೂರ್ಣ ಸಂಖ್ಯೆ ಆಗಿರುತ್ತದೆ.

## ಆರರ ಬೆನ್ನೇರಿ ಸಾಗಿದಾಗ

ಗ್ರಹಗಳು ಸೂರ್ಯನನ್ನು ವಿವಿಧ ವರ್ತುಲೀಯ ಕಕ್ಷೆಗಳಲ್ಲಿ ಪರಿಭ್ರಮಿಸುತ್ತವೆ ಎಂಬುದಾಗಿ ನಿಕೊಲಾಸ್ ಕೊಪರ್ನಿಕಸ್ (೧೪೭೩–೧೫೪೩) ಸಾರಿದ. ಈ ಕಕ್ಷೆಗಳ ಗುಣಧರ್ಮ ಅರಸಲು ಯೋಹನ್ನ ಕೆಪ್ಲರ್ (೧೫೭೧ – ೧೬೩೦) ಮುನ್ನಡಿ ಇಟ್ಟು ಯಶಸ್ವಿ ಆದ. ಈತ ರಾಜುವಾತಿಸಿದ ಗ್ರಹಚಲನಿಯಮಗಳ ಸಾರವಿಷ್ಟು: ಗ್ರಹಕಕ್ಷೆಗಳು ವೃತ್ತಗಳಲ್ಲ, ದೀರ್ಘವೃತ್ತಗಳು ಪ್ರತಿಯೊಂದು ದೀರ್ಘವೃತ್ತವನ್ನೂ ಕುರಿತಂತೆ ಸೂರ್ಯನ ಸ್ಥಾನ ಅದರ ಒಂದು ನಾಭಿ; ಸೂರ್ಯನನ್ನು ಕುರಿತಂತೆ ಗ್ರಹ ಸಮಕಾಲಾವಧಿಗಳಲ್ಲಿ ಸಮ ಸಲೆಗಳನ್ನು ರೇಖಿಸುತ್ತದೆ; ಸೂರ್ಯನ ಸುತ್ತ ಒಂದು ಪರಿಭ್ರಮಣೆ ಮುಗಿಸಲು ಗ್ರಹಕ್ಕೆ ಬೇಕಾಗುವ ಕಾಲಾವಧಿ ಸೂರ್ಯ—ಗ್ರಹ ಸರಾಸರಿ ಅಂತರದ ನಿರ್ದಿಷ್ಟ ಅನುಪಾತದಲ್ಲಿದೆ. ಈ ಸುಭದ್ರ ಪಂಚಾಂಗದ ಮೇಲೆ ನ್ಯೂಟನ್ (೧೬೪೨–೧೭೨೭) ಗುರುತ್ವಾಕರ್ಷಣನಿಯಮದ ಜಗದ್ವ್ಯಾಪ್ಯಸೌಧ ನಿರ್ಮಿಸಿದ.

ಇಂಥ ಪ್ರಖರಗಣಿತವಾದಿ ಕೆಪ್ಲರ್ ಆರಂಭದಲ್ಲಿ ನಡೆದದ್ದು ಕ್ಷುದ್ರ ಗಣಿತದ ಜಾರುದಾರಿಯ ಮೇಲೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಪರಂಪರೆಯ ಶಿಶುವಾದ ಭಗವದ್ಭಕ್ತ ಕೆಪ್ಲರ್ ಸಂಖ್ಯೆ ೬ರ ಅನುಭಾವಿ ಗುಣಗಳಿಂದ ಸಂಮೋಹಿತನಾಗಿದ್ದ. ಇದೊಂದು ತೆರನಾದ ಅಮಲು.

ಮೊದಲನೆಯದಾಗಿ. ೬ ಏಕೈಕ ಗುಣಪೂರಿತವಾದ ಒಂದು ಪರಿಪೂರ್ಣ ಸಂಖ್ಯೆ: ೧ × ೨ × ೩ = ೧ + ೨ + ೩ = ೬.

ಎರಡನೆಯದಾಗಿ, ಸೌರವ್ಯೂಹದಲ್ಲಿ ೬ ಗ್ರಹಗಳು ಮಾತ್ರ ಇವೆ: ಬುಧ, ಶುಕ್ರ, ಭೂಮಿ ಕುಜ, ಗುರು, ಶನಿ. (ಅಂದು ತಿಳಿದಿದ್ದವು ಇವು ಮಾತ್ರ). ಅದರ ಮೇಲೆ ಅಮೂರ್ತಗಣಿತಕೋವಿದ ಪರಮಾತ್ಮನ ಮೂರ್ತರೂಪವಲ್ಲವೇ ಈ ಗ್ರಹಗಳು (ಫಲಜ್ಯೋತಿಷಿಗಳ ಸ್ಫೂರ್ತಿಯ ಕುಂಭ ಕಲ್ಪನೆಯ ಅಡುಂಬೊಲು.)

ಮೂರನೆಯದಾಗಿ ವಿಶ್ವದಲ್ಲಿ ಪ್ಲಾಟೋನಿಕ್ ಘನಾಕೃತಿಗಳೆಂಬ ಹೆಸರಿನ (Platonic solids) ಐದು ಸಮಬಹುಫಲಕಗಳಿವೆ. (regular polyhedra) ಪ್ರಾಚೀನ ಗ್ರೀಕರ ಕಾಲದಿಂದಲೂ ಇವು ಪ್ರಸಿದ್ಧವಾಗಿವೆ. ಈ ಯಾವುದೇ ಸಮಬಹುಫಲಕವನ್ನು ಪರಿಗತಿಸುವಂತೆ (cricumscribe) ಮತ್ತು ಅಂತಃಸ್ಪರ್ಶಿಸುವಂತೆ ಎರಡು ಏಕಕೇಂದ್ರೀಯ ಗೋಳಗಳನ್ನು ರಚಿಸಬಹುದು. ಕೆಪ್ಲರ್ ಚಿಂತಿಸಿದ್ದು ಹೀಗೆ: ವಿವಿಧ ಗಾತ್ರಗಳ ಈ ಐದು ಸಮಬಹುಫಲಕಗಳನ್ನು ತೆಗೆದುಕೊಂಡು ಒಂದರ ಹೊರಗೆ ಇನ್ನೊಂದರಂತೆ ಅಳವಡಿಸೋಣ; ಒಳಗಿನದರ ಪರಿಗೋಳ (circumsphere) ಹೊರಗಿನದರ ಅಂತರ್ಗೋಳ (insphere) ಆಗುವಂತೆ ಬಹುಫಲಕಗಳ ಗಾತ್ರವನ್ನು ಹೊಂದಿಸೋಣ; ಆಗ ನಮಗೆ ೬ ಏಕಕೇಂದ್ರೀಯ ಗೋಳಗಳು ಲಭಿಸುತ್ತವೆ; ಇವುಗಳ ಕೇಂದ್ರ ಸೂರ್ಯನ ಸ್ಥಾನವನ್ನು ಪ್ರತಿನಿಧಿಸಿದರೆ ತ್ರಿಜ್ಯಗಳು ಸೂರ್ಯ—ಗ್ರಹ ಅಂತರಗಳಿಗೆ ಅನುಪಾತೀಯವಾಗಿವೆ. "ಈ ಆವಿಷ್ಕಾರದಿಂದ ನನಗೆ ಆದ ಆನಂದವನ್ನು ಪದಗಳಲ್ಲಿ ವರ್ಣಿಸಲಾರೆ." ಎಂಬುದಾಗಿ ಭಕ್ತಭಂಡಾರಿ ಭಾವುಕ ಶಿರೋಮಣಿ ಕೆಪ್ಲರ್ ಬರೆದಿದ್ದಾನೆ (೧೫೯೫).

ಮುಂದೆ ಈ ತಪ್ಪು ಹಾದಿ ತೊರೆದು ಸರಿ ದಾರಿ ಹಿಡಿದು ಬೆಳಕು ತಲಪಲು ಆತ ಅಕ್ಷರಶಃ ಅಹರ್ನಿಶಿ ಒಂದು ದಶಕಾಲ ಶುದ್ಧ ಗಣಿತದ ಗಣನೆಗಳ ಗೊಂಡಾರಣ್ಯದಲ್ಲಿ ಅಲೆಯಬೇಕಾಯಿತು. ಕೊನೆಗೂ ಜಯಶೀಲನಾದದ್ದು (೧೬೦೯) ಅವನ ನಿಜಗಣಿತ ಪ್ರತಿಭೆಗೆ ಉಜ್ವಲ ನಿದರ್ಶನ.

ನೀತಿ: ಸಂಖ್ಯೆಗಳಲ್ಲಿ ಪರಮಾರ್ಥ ಹುಡುಕಲು ಹೋಗಿ ವ್ಯರ್ಥ ಕಾಲಹರಣ ಮಾಡಬೇಡಿ. ಪರಮಾತ್ಮ ಇರುವುದೇ ಆದ ಪಕ್ಷದಲ್ಲಿ ಸಂಖ್ಯೆಗಳಂಥ ಕ್ಷುದ್ರ ಮಾನುಷ್ಯ ಕೃತಿಗಳಲ್ಲಿ ಆತ ತನ್ನ ಲೀಲೆಗಳನ್ನು ಪ್ರದರ್ಶಿಸಲಾರ. ಹಾಗೆ ಪ್ರದರ್ಶಿಸಿದರೆ ಆತ ಪರಮಾತ್ಮನಾಗಲಾರ.

$n$=೨,೩,೫,೭,೧೩,೧೭,೧೯,೩೧,೬೧,೮೯, ೧೦೭, ೧೨೭ ಎಂಬ ಹನ್ನೆರಡು ಬೆಲೆಗಳಿಗೆ ಮಾತ್ರ ೨$^n$−೧ ಅವಿಭಾಜ್ಯವೆಂದು ಸದ್ಯ ತಿಳಿದಿದೆ. ಯೂಕ್ಲಿಡನ ಸೂತ್ರದಲ್ಲಿ $n$ಗೆ ೨, ೩, ೫, ೭, ಬೆಲೆಗಳನ್ನು ಆದೇಶಿಸಿ ಮೊದಲ ನಾಲ್ಕು ಪರಿಪೂರ್ಣ ಸಂಖ್ಯೆಗಳನ್ನು (೬, ೨೮, ೪೯೬, ೮೧೨೮) ನೀವೇ ಪಡೆಯಬಹುದು. $n$=೧೩ ಆದಾಗ ೨$^n$—೧=೮೧೯೧. ಇದೊಂದು ಅವಿಭಾಜ್ಯ ಸಂಖ್ಯೆ. ಅಂದಮೇಲೆ ಯೂಕ್ಲಿಡನ ಸೂತ್ರದ ಪ್ರಕಾರ ೨$^{೧೨}$(೨$^{೧೩}$−೧) ೩೩,೫೫೦,೩೩೬ = ಒಂದು ಪರಿಪೂರ್ಣ ಸಂಖ್ಯೆ ಆಗಬೇಕು. ಇದಕ್ಕೆ ಇಪ್ಪತ್ತೈದು ಅಪವರ್ತನಗಳಿವೆ. ಕನಿಷ್ಠ ಅಪವರ್ತನ ೧, ಗರಿಷ್ಠ ಅಪವರ್ತನ ೧೬, ೭೭೫,೧೬೮. ಈ ಇಪ್ಪತ್ತೈದು ಅಪವರ್ತನಗಳ ಮೊತ್ತ ೩೩,೫೫೦,೩೩೬. ಹೀಗೆ $n$=೧೩ ಆದಾಗ ಯೂಕ್ಲಿಡನ ಸೂತ್ರ ನಿಜ. $n$=೧೭, ೧೯ ಮುಂತಾಗಿ ಮುನ್ನಡೆದರೆ ನಾವು ಬೃಹತ್ಸಂಖ್ಯಾ ಸಾಗರದ ಗಭೀರಗರ್ತದಲ್ಲಿ ಅತಿ ಶೀಘ್ರವಾಗಿ ಮುಳುಗಿ ಹೋಗುವುದು ಖಾತ್ರಿ. ಅಲ್ಲಿ ಗಣಕವೊಂದೇ ನಮ್ಮನ್ನು ದಡಹಾಯಿಸಬಲ್ಲ ಸಾಧನ – ಅದೂ ಒಂದು ಮಿತಿಯವರೆಗೆ ಮಾತ್ರ.

$n$=೧೨೭ ಆದಾಗ (೨$^n$−)೧ರ ಬೆಲೆ ೧೭೦,೧೪೧,೧೮೩,೪೬೦,೪೬೯,೨೩೧, ೭೩೧, ೬೮೭, ೩೦೩,೭೧೫,೮೮೪,೧೦೫,೭೨೭. ಇದೊಂದು ಅವಿಭಾಜ್ಯ. ಆದ್ದರಿಂದ ೨$^{೧೨೬}$ (೨$^{೧೨೭}$−೧) ಒಂದು ಪರಿಪೂರ್ಣ ಸಂಖ್ಯೆ ಆಗಬೇಕು. ಇದು ನಿಜ. ಈ ಸಂಖ್ಯೆಯಲ್ಲಿ 'ಕೇವಲ' ಎಪ್ಪತ್ತೇಳು ಅಂಕೆಗಳಿರುವುವು! ಓದುಗರು ಇದನ್ನು ಗಣನೆ ಮಾಡಿ ಬರೆದು ಇದರ ಸಮಸ್ತ ಅಪವರ್ತನಗಳನ್ನೂ ಶೋಧಿಸಿ ಅವುಗಳ ಮೊತ್ತ ಇದೇ ಸಂಖ್ಯೆ ಆಗುವುದೆಂಬುದನ್ನು ತಾಳೆನೋಡಿ ಧನ್ಯರಾಗಬಹುದು! (ಇಂಥ ಚಿರಿ ಚಿರಿ ಚಿಲ್ಲರೆ ಎಣಿಕೆಗಳನ್ನು ಗಣಿತಾಧ್ಯಾಪಕರು ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ಅಭ್ಯಾಸವಾಗಿ ಕೊಟ್ಟು ತಾವು ಸುಖನಿದ್ರಾವಶರಾಗುವುದು ಪ್ರಾಚೀನ ಕಾಲದಿಂದಲೂ ನಡೆದುಬಂದಿರುವ ಸತ್ಸಂಪ್ರದಾಯ!)

ಸದ್ಯ ಗಣಕಗಳು ಆವಿಷ್ಕರಿಸಿರುವ ಪರಿಪೂರ್ಣ ಸಂಖ್ಯೆ ಇಪ್ಪತ್ತನೆಯದು. ಇದರಲ್ಲಿ ೨೬೬೩ ಅಂಕೆಗಳಿವೆ. ಇದನ್ನು ಪೂರ್ತಿ ಬರೆಯಲು ಈ ಸಂಚಿಕೆಯ ಸುಮಾರು ಎರಡು ಪುಟಗಳೇ ಬೇಕಾಗುತ್ತವೆ.

ಈ ಬೃಹತ್ಸಂಖ್ಯೆ ಯೂಕ್ಲಿಡನ ಸೂತ್ರವನ್ನು ಪಾಲಿಸುವುದೇ? ಇದನ್ನು ಮೀರಿಸುವ ಪರಿಪೂರ್ಣ ಸಂಖ್ಯೆಗಳಿವೆಯೇ? ಪರಿಪೂರ್ಣ ಸಂಖ್ಯೆಗಳ ಶ್ರೇಣಿ ಸಾಂತವೇ ಅನಂತವೇ? ಬೆಸಸಂಖ್ಯೆ ಯಾವುದಾದರೂ ಪರಿಪೂರ್ಣಸಂಖ್ಯೆ ಆಗಿದೆಯೇ? ಇವೆಲ್ಲ ಇಂದು ಸಂಖ್ಯಾಪ್ರಪಂಚದಲ್ಲಿ ವಿವೃತ ಪ್ರಶ್ನೆಗಳು. (Open questions).

ಎರಿಕ್ ಟೆಂಪಲ್ ಬೆಲ್ ಎಂಬ ಗಣಿತ ಚರಿತ್ರಕಾರನ ಪ್ರಕಾರ "ಗಣಿತ ಪ್ರಪಂಚದಲ್ಲಿ ಸಂಖ್ಯಾಸಿದ್ಧಾಂತವೇ ಕೊನೆಯ 'ಬೃಹತ್' ಅನಾಗರಿಕ ಭೂಖಂಡ. ಅತ್ಯಂತ ಫಲವಂತವಾಗಿರುವ ಆದರೆ ಒಂದು ಇನ್ನೊಂದರ ಯೋಗಕ್ಷೇಮ ಕುರಿತಂತೆ ತೀರ ಉದಾಸೀನವಾಗಿರುವ ಮತ್ತು ಯಾವುದೇ ಕೇಂದ್ರ ಸರ್ಕಾರದ (ಕೇಂದ್ರ ನಿರ್ದೇಶಕ ವ್ಯವಸ್ಥೆಯ) ಸುಳುಹು ಕೂಡ ಇಲ್ಲದಿರುವ ಅಸಂಖ್ಯಾತ ದೇಶಗಳಾಗಿ ಇದು ಒಡೆದು ಹೋಗಿವೆ. ನವ ಸಾಮ್ರಾಜ್ಯವೊಂದನ್ನು ಜಯಿಸಲು ಯಾವನೇ ಯುವಕ ಅಲೆಗ್ಸಾಂಡರ್ ಕಾತರನಾಗಿ ತಹತಹಿಸುತ್ತಿದ್ದರೆ ಇಲ್ಲಿದೆ ಅವನಿಗೊಂದು ಹೊಸ ಸವಾಲು. ಅಂಕಗಣಿತಕ್ಕೆ ಅದರ ದೇಕಾರ್ಟ್ ಇನ್ನೂ ಬಂದಿಲ್ಲ. ನ್ಯೂಟನ್ ಅಂತೂ ಹೇಗೂ ಬಂದೇ ಇಲ್ಲವಷ್ಟೆ!

ಪರಿಪೂರ್ಣ ಸಂಖ್ಯೆಗಳ ಪ್ರಪಂಚ ಇನ್ನೂ ಅಪರಿಪೂರ್ಣವೇ ಆಗಿ ಉಳಿದಿದೆ. ◆



ಸ್ವಾತಂತ್ರ್ಯಪೂರ್ವದ
ಒಂದು ಘಟನೆ

# ದಿಟ್ಟೆ ಹಣಬರ ಕಾಶವ್ವ

ಶಂ. ಬಾ. ಜೋಶಿ

ಚಿಕ್ಕೋಡಿ ತಾಲೂಕಿನ ಆಡಿ ಗ್ರಾಮದ ಕಾಶವ್ವನ ಮದುವೆ ಪಾಂಗೀರದ ಅಪ್ಪಾಜಿ ಹಣಬರ ಇವರೊಡನೆ ಆಗಿತ್ತು. ಇವರ ಮಗನ ಹೆಸರು ಮಲ್ಲು. ಇವನು ರತ್ನಪ್ಪಾ ಕುಂಬಾರರ ನೇತೃತ್ವದ ತರುಣರ ತಂಡವನ್ನು ಸೇರಿ ೧೯೪೨ರ ಮಾಡಿರಿ ಅಥವಾ ಮಡಿಯಿರಿ ಎಂಬ ಮಹಾತ್ಮಾ ಅವರ ಸಂದೇಶಕ್ಕೆ ಓಗೊಟ್ಟು ಆ ಚಳುವಳಿಯಲ್ಲಿ ಧುಮುಕಿದ.

ಈ ತಂಡವು ಚಿಕ್ಕೋಡಿ-ಕೊಲ್ಲಾಪುರ ಗಡಿ ಭಾಗದಲ್ಲಿ ದಾಳಿಗಳನ್ನು ನಡೆಸಿತು. ರಾಮಪುರ, ಪಟ್ಟಣಕುಡಿ, ಕಾಶಿಪಡೆ ಗ್ರಾಮಗಳ ಚಾವಡಿಗಳನ್ನು ಸುಟ್ಟದ್ದಾಯಿತು. ಅಕೋಳ, ಜೇಜೂರಿ ಪ್ರಕರಣಗಳು ಇವರ ಖ್ಯಾತಿಯನ್ನು ಹೆಚ್ಚಿಸಿದವು. ಗಾರಗೋಟಿಯ ಖಜಾನೆ ಲೂಟಿಯಾಯಿತು. ಇವರಿಂದಾಗಿ ಹರಿಚೇವಾಡಿ, ನರಸೊಪರೀಟ ಈ ಗೋಳೀಬಾರ ಪ್ರಕರಣವು ಸಂಭವಿಸಿತು. ಇವೆಲ್ಲ ಘಟನೆಗಳ ಮೂಲಕ ಮಲ್ಲೇಶಿ ಬ್ರಿಟಿಶ್ ಅಧಿಕಾರಿಗಳ ಕೋಪಕ್ಕೆ ಒಳಗಾದ.

"ಮಲ್ಲೂನನ್ನು ಜೀವಂತ ಹಿಡಿಯಿರಿ ಇಲ್ಲವೆ ಗುಂಡು ಹಾಕಿ ಮುಗಿಸಿಬಿಡಿರಿ" ಎಂಬ ಆಜ್ಞೆ ಹೊರಟಿತು. ವಾರಂಟ್ ತಪ್ಪಿಸಿಕೊಳ್ಳಲು ಮಲ್ಲೂನನ್ನೊಳಗೊಂಡಂತೆ ಈ ತಂಡವು ಭೂಗತವಾಯಿತು. ಈ ಸಮಯದಲ್ಲಿ ತನ್ನ ಮಗನ ತಂಡದವರೂ ತನ್ನ ಮಕ್ಕಳೇ ಎಂಬ ಭಾವನೆಯಿಂದ ಕಾಶೀಬಾಯಿ ಎಲ್ಲರನ್ನೂ ಉಪವಾಸ, ವನವಾಸದೊಳಗಿಂದ ಕಾಪಾಡಲು ಶಕ್ತಿ ಮೀರಿ ಹೆಣಗಿದಳು.

ಆಕೆ ತಲೆಯ ಮೇಲಣ ಬುಟ್ಟಿಯಲ್ಲಿ ಹೊತ್ತು ಸಾಮಾನು ಮಾರುತ್ತಿದ್ದಳು. ತನ್ನ ಹೊಟ್ಟೆಯ ಪಾಡಿಗೆ ಕಾಡಿನಲ್ಲಿ ಬೆಳೆದ ತೊಪ್ಪಲ ಸೊಪ್ಪು ತಂದು ಎಂತೋ ಉಪಜೀವನ ಸಾಗಿಸುತ್ತಿದ್ದಳು. ತನ್ನ ಮಗನ ಸಂಗಾತಿಗಳಿಗಾಗಿ ಕೆಲವೊಮ್ಮೆ ರೊಟ್ಟಿ, ಕೆಲವೊಮ್ಮೆ ಸುಚ್ಚು-ಮಜ್ಜಿಗೆ ಅಥವಾ ಅಂಬಲಿ ಒಯ್ದು ಕೊಟ್ಟು ಅವರು ಉಪವಾಸ ಬೀಳುವುದನ್ನು ತಪ್ಪಿಸುತ್ತಿದ್ದಳು.

ಈ ಭೂಗತ ಕ್ರಾಂತಿವೀರರನ್ನು ಹಿಡಿಯುವಲ್ಲಿ ಅತ್ಯಂತ ಕ್ರೂರನೆಂದು ಹೆಸರಾದ ಆ ಭಾಗದ ಫೌಜದಾರ ವಿಫಲನಾದ. ಒಮ್ಮೆ ಆತ ಸಮೀಪದ ಚಿಕಲವ್ವಾಳ ಚಾವಡಿಗೆ ಬಂದು ಕಾಶವ್ವನನ್ನು ಇದ್ದಲ್ಲಿಂದ ಬಂಧಿಸಿತರಲು ಅಪ್ಪಣೆಕೊಟ್ಟ. ೧೯೪೨ರ ಅಕ್ಟೋಬರ್ ೨೩ ರಂದು ಅವಳನ್ನು ಬಂಧಿಸಿ ಫೌಜದಾರನಲ್ಲಿ ತಂದದ್ದಾಯಿತು.

"ನೀನು ಮಲ್ಲೂನ ತಾಯಿಯೊ ಮಡದಿಯೊ?" ಫೌಜದಾರ ಕಾಶೀಬಾಯಿಯನ್ನು ಕೇಳಿದಾಗ ಆ ವೀರಮಾತೆ "ನಾನು ಮಲ್ಲೂನ ತಾಯಿ ಮಾತ್ರ ಅಲ್ಲ ಆತನ ಸಂಗಾತಿಗಳ ತಾಯಿಯೂ ಹೌದು" ಎಂದು ಧೈರ್ಯದಿಂದ ಹೇಳಿದಳು.

"ಹಾಗಾದರೆ ಈ ದರೋಡೆಖೋರರು ಎಲ್ಲಿ

ಅಡಗಿದ್ದಾರೆ ಹೇಳು," ಎಂದ ಆ ಪೋಲೀಸ್ ಅಧಿಕಾರಿ.

"ಗೊತ್ತಿಲ್ಲ," ಎಂಬುದು ಕಾಶವ್ವನ ಉತ್ತರ. ಸರಳ ಉತ್ತರ ಹೇಳದಿದ್ದರೆ ತೊಂದರೆಗೆ ಒಳಗಾಗ ಬೇಕಾದೀತು ಎಂಬ ಬೆದರಿಕೆ. "ಇಂತಹ ಬೆದರಿಕೆಗೆ ಬೆದರುವವಳು ನಾನಲ್ಲ. ಅವರನ್ನು ಹುಡುಕುವ ಕೆಲಸ ನಿಮ್ಮದು. ಸಿಕ್ಕರೆ ತಂದು ಇಲ್ಲೇ ಗಲ್ಲಿಗೆ ಹಾಕು," ಎಂಬ ಧೈರ್ಯದ ಉತ್ತರ ಕಾಶೀಬಾಯಿಯದು.

ಫೌಜದಾರ ಸಂತಪ್ತನಾದ. ಎಷ್ಟು ಪ್ರಶ್ನೆ ಕೇಳಿದರೂ ಗೊತ್ತಿಲ್ಲ ಎಂಬ ಒಂದೇ ಉತ್ತರ ಕಾಶೀಬಾಯಿಯದು. ಆಗ ಫೌಜದಾರನೂ ಪೋಲೀಸರೂ ಸೇರಿ ಅವಳನ್ನು ಬಡಿಗೆಯಿಂದ ಹೊಡೆ ಹೊಡೆದು ಬೇಸತ್ತರು.

ಕಾಶೀಬಾಯಿ ತುಟಿ ಬಿಚ್ಚಲಿಲ್ಲ. ಆಗ ಫೌಜದಾರ ಕಾಶೀಬಾಯಿ ಉಟ್ಟಿದ್ದನ್ನೆ ಬಿಚ್ಚಿದ. ಈ ನಿರ್ಲಜ್ಜತನದ ಕೃತ್ಯವನ್ನು ಆಕೆ ಹೇಗೊ ಸಹಿಸಿದಳು.

ಬೇಡಕಿಹಾಳದ ಸಿದ್ದನಗೌಡ ಪಾಟೀಲ ಮತ್ತು ಬೇಡಗೆ ಇವರು ಬೆಳಗಾವಿಗೆ ಹೋಗಿ ಬಾಬೂರಾವ ಠಾಕೂರರಿಗೆ ಈ ಬಗ್ಗೆ ಹೇಳಿದರು. 'ತರುಣಭಾರತ'ದ ಸಂಪಾದಕರು ಈ ಅನ್ಯಾಯವನ್ನು ಪ್ರಕಟಿಸಿದರು. ಮರಾಠಿ ಪತ್ರಿಕೆಗಳಲ್ಲಿ ಈ ವೃತ್ತವು ಕೋಲಾಹಲವನ್ನು ಎಬ್ಬಿಸಿತು.

ಹಣಬರ ಕುಟುಂಬದ ಈ ಸಂಕಟ ಇಂಗ್ಲೀಷ್ ಪತ್ರಿಕೆಗಳ ಮೂಲಕ ಅಖಿಲ ಭಾರತೀಯ ಚರ್ಚೆಯ ವಿಷಯವಾಯಿತು. ಇದು ತಿಳಿದ ಬಳಿಕ ಶ್ರೀ ಸಾನೇ ಗುರೂಜಿ ಅವರು ಪಾಂಗೀರ ಗ್ರಾಮಕ್ಕೆ ಬಂದು ಈ ವೀರಮಾತೆಯನ್ನು ಸಂತೈಸಿದರು. ಮಹಾತ್ಮಾಜೀಗೆ ಕಾಗದ ಬರೆದು ಈ ಧೀರಳನ್ನು ಆಶೀರ್ವದಿಸಲು ತಿಳಿಸಿದರು.

ಭೂಗತ ಮಲ್ಲೂ ಕುರ್ಲೀ ಗ್ರಾಮವಾಸಿಯಾದ ಕಾಶೀಬಾಯಿಯು ಕೊಲ್ಲಾಪುರಕ್ಕೆ ಹೋಗಿ ಆ ಫೌಜದಾರನ ಮೇಲೆ ಖಟ್ಲೆ ಹಾಕಿದಳು. ಇದು ಅಖಿಲ ಭಾರತೀಯ ಚರ್ಚೆಯ ವಿಷಯವಾದ್ದರಿಂದ ಪೋಲೀಸರು ಖಟ್ಲೆಗೆ ಹೆದರಿದರು. ೪೦/೫೦ ಸಾವಿರ ರೂಪಾಯಿಗಳನ್ನು ಕೊಟ್ಟು ಖಟ್ಲೆ ಹಿಂದಕ್ಕೆ ತಕ್ಕೊಳ್ಳಲು ಬೆನ್ನುಹತ್ತಿದರು. ಕಾಶೀಬಾಯಿ "ಈ ನೋಟುಗಳನ್ನು ಗಾಳಿಗೆ ತೂರಿರಿ. ನಾನು ನನಗಾದ ಅಪಮಾನಕ್ಕಾಗಿ ಕೋರ್ಟಿಗೆ ಬಂದಿದ್ದೇನೆ." ಎಂದು ವೀರೋಚಿತ ಉತ್ತರವಿತ್ತಳು. ಮುಂದೆ ಆ ಫೌಜದಾರನಿಗೆ ಶಿಕ್ಷೆಯೂ ಆಯಿತು.

೧೯೪೭ರ ಅಗಸ್ಟ ೧೫ರಂದು ಪಾಂಗೀರ ಭಾಗದ ಜನ ಈ ಸ್ವಾತಂತ್ರ್ಯ ಉತ್ಸವವನ್ನು ಬಹು ವಿಜೃಂಭಣೆಯಿಂದ ಜರುಗಿಸಿದರು. ಅಂದು ರಾಷ್ಟ್ರಧ್ವಜದ ಅಡಿಯಲ್ಲಿ ಮಲ್ಲೂನ ಮದುವೆಯೂ ಆಯಿತು. ಆದರೆ ಈ ತಾಯಿ, ಮಗ ಹಾಗೂ ಸೊಸೆಯ ಮಧ್ಯಾಹ್ನದ ಚಿಂತೆ ತಪ್ಪಿರಲಿಲ್ಲ. ಹಲವು ವರ್ಷಗಳ ನಂತರ ಮಹಾರಾಷ್ಟ್ರದ ಮುಖ್ಯಮಂತ್ರಿ ವಸಂತರಾವ ನಾಯಕರು ಈ ವೀರವನಿತೆಗೆ ೫೦೦ ರೂಪಾಯಿಗಳ ಗೌರವಧನಕೊಟ್ಟರು.

ರತ್ನಪ್ಪಾ ಕುಂಬಾರ ಶಂಕರರಾವ್ ಮಾನೆ ಇವರು ಪ್ರತಿ ತಿಂಗಳು ೨೦೦ ರೂಪಾಯಿ ದೊರೆಯುವಂತೆ ನೆರವಾದದ್ದಲ್ಲದೆ ತಮ್ಮ ಸಕ್ಕರೆಯ ಕಾರಖಾನೆಯಲ್ಲಿ ಕೆಲಸ ಕೊಟ್ಟರು. ಈ ವೀರಮಾತೆ ೧೯೮೩ರ ಸೆಪ್ಟೆಂಬರ್ ನಾಲ್ಕರಂದು ಮುಪ್ಪಿನಲ್ಲಿ ಮಡಿದಳು. ✦

---

**ಮಹಾರಾಷ್ಟ್ರದಿಂದ ವರ್ಗವಾಗಿ ಬಂದಿದ್ದ ನಮ್ಮ ಮೇಲಧಿಕಾರಿಗಳ ಬಳಿ ಅಂದು ನಾನು ರಜಾ ಅರ್ಜಿಯೊಂದಿಗೆ ಹೋದೆ. ರಾಯರ (ರಾಘವೇಂದ್ರ ಸ್ವಾಮಿಗಳ) ಆರಾಧನೆಗೆಂದು ನಾನು ಮೂರು ದಿನ ರಜೆ ಕೇಳಿದೆ.**

**ಸಾಹೇಬರು ಗಂಭೀರ ಮೌನವನ್ನು ಮುರಿಯುತ್ತ ನನಗೆ ಹೇಳಿದರು: "ಅಲ್ರೀ, ಇವರೆ, ಅವರಿವರ ಆರಾಧನೆ ಅಂತ ಯಾಕೆ ರಜಾ ಹಾಳು ಮಾಡಿಕೊಳ್ಳುತ್ತೀರಿ? ನಿಮ್ಮ ಆರಾಧನೆಯಿದ್ದರೆ ಹೇಳಿರಿ, ಆಗ ಬೇಕಾದಷ್ಟು ರಜಾ ಕೊಡತೇನಿ. ನಾನು ನಿಮ್ಮ ಹಿಂತಳ್ಳೇ ಇದನ್ನು ಹೇಳ್ತಿರೋದು."**

**-ರಾಜಾರಾಮ ಹೇಮಾದ್ರಿ**

# ಇದುವೇ ಜೀವ ಇದು ಜೀವನ

ಭಾನುವಾರ ಬಂದಿತೆಂದರೆ ನಮ್ಮಿಬ್ಬರು ಹುಡುಗರಿಗೆ ನಮ್ಮಕ್ಕನ ಮನೆಗೆ ಹೋಗಿ ಆ ಹುಡುಗರ ಜೊತೆ ಆಟವಾಡುವ ಆಸೆ. ಹೀಗೆ ಒಂದು ದಿನ ಆಟವಾಡಿದ ನಂತರ ಹೇಗೂ ಸೀಟು ಸಿಕ್ಕಬಿಡುತ್ತದೆಂದು ಕೊಂಡದ್ದು ಬರೀ ನನ್ನ ಊಹೆಯಾಗಿತ್ತು. ನನ್ನ ಎರಡು ವರುಷದ ಮಗುವನ್ನು ಎತ್ತಿಕೊಂಡು ಕಂಬಿಗೆ ಜೋತು ಬಿದ್ದೆ. ಮತ್ತೊಬ್ಬ ಎಂಟು ವರುಷದವ. ಸೀಟಿಗಂಟಿ ನಿಂತಿದ್ದ. ಬೆಂಗಳೂರು ಸಿಟಿ ಬಸ್ಸುಗಳಲ್ಲಿ ಮಗುವನ್ನೆತ್ತಿಕೊಂಡು ನಿಂತ ಹೆಂಗಸಿಗಾಗಲೀ ಗಂಡಸಿಗಾಗಲೀ ಸೀಟು ಬಿಡುವುದು ಹಾಗಿರಲಿ ಬಿಡಬೇಕೆಂದು ಯೋಚಿಸುವ ಸೌಜನ್ಯವೂ ಇಲ್ಲದಷ್ಟು ಮುಖ ತಿರುವಿ ಕುಳಿತಿರುತ್ತಾರೆ. ಮಗುವನ್ನೆತ್ತಿಕೊಂಡು ಕಂಬಿಗೆ ನೇತಾಡುತ್ತಿದ್ದ ನನ್ನ ಅವಸ್ಥೆಯನ್ನು ನೋಡಿದ ಅಪರಿಚಿತ ಹದಿನೆಂಟರ ಹುಡುಗಿಯೊಬ್ಬಳು, "ಮಗು ಕೊಡಿ, ಕುಳ್ಳಿರಿಸಿಕೊಳ್ಳುತ್ತೇನೆ" ಎಂದಳು. ಬಹುಶಃ ಆಕೆಗೆ ಮಗುವನ್ನೆತ್ತಿಕೊಂಡು ನಿಂತು ಪ್ರಯಾಣ ಮಾಡಿದ ಕಷ್ಟದ ಅನುಭವವಿರಬೇಕು. ಆದರೆ ನನ್ನ ಮಗ ಹೋಗುವುದಿಲ್ಲವೆಂದು ತಲೆಯಾಡಿಸಿಬಿಟ್ಟ. ನನ್ನ ಅವಸ್ಥೆ ನೋಡಿ ನನಗೆ ಸಹಾಯ ಮಾಡಲೇಬೇಕೆಂಬ ವಾಂಛಲ್ಯ ಆಕೆಯ ಕಣ್ಣಲ್ಲಿ ತುಳುಕುತ್ತಿತ್ತು. ಅವಳ ಪಕ್ಕದಲ್ಲಿ ವಯಸ್ಸಾದವರೊಬ್ಬರು ಕುಳಿತಿದ್ದರು, ಬಹುಶಃ ಆಕೆಯ ತಂದೆ ಇರಬೇಕು. ಅವರ ಮುಖ ನೋಡಿ ನನ್ನ ಮುಖ ನೋಡಿದಳು. ಆಕೆಗೆ ಅವರನ್ನೆಬ್ಬಿಸಿ ಸೀಟು ಬಿಟ್ಟುಕೊಟ್ಟದ್ದಾಗಲೀ ಅಥವಾ ತಾನು ಎದ್ದು ಸೀಟು ಬಿಟ್ಟುಕೊಟ್ಟದ್ದಾಗಲೀ ಮಾಡಿದರೆ ತಂದೆಯವರು ಅಪಾರ್ಥ ಮಾಡಿಕೊಂಡಾರೆಂದು ಅವರ ಮುಖ ನೋಡಿ ನನ್ನ ಮುಖ ನೋಡಿದಳು. ಪರವಾಗಿಲ್ಲ, ಪರವಾಗಿಲ್ಲಬಿಡಿ ಎಂದು ಹೇಳಿ ಅವರ ಮುಂದಿನ ಸೀಟಿನಲ್ಲಿ ಕುಳಿತಿದ್ದ ತರುಣನೊಬ್ಬನಿಗೆ ವಿನಂತಿಸಿಕೊಂಡದ್ದರಿಂದ ಆತ ಸರಿದು ಕುಳಿತ. ಅಲ್ಲಿ ಸರಿಹೋಗಲಿಲ್ಲ. ಮಗುವನ್ನೆತ್ತಿಕೊಂಡು, ಪುನಃ ಕಂಬಿಗೆ ಜೋತು ಬಿದ್ದೆ.

ಹೇಗೋ ಕಷ್ಟಪಟ್ಟು ನಿಂತು ಕಡೆಗೂ ನಾನು ಇಳಿಯುವ ಸ್ಥಳ ಬಂದಾಗ ಸೌಜನ್ಯಕ್ಕಾಗಿ ಆಕೆಗೆ "ಥ್ಯಾಂಕ್ಸ್" ಎಂದು ಹೇಳಿ ಮುಗುಳ್ನಕ್ಕು ಇಳಿದೆ. ಕಿಟಕಿಯಿಂದ ಆಕೆ ನಮ್ಮೆಡೆಗೆ ನೋಡಿ ಕೈ ಅಲ್ಲಾಡಿಸುತ್ತಿದ್ದರೂ ಈ ನಿಮ್ಮ ಥ್ಯಾಂಕ್ಸ್ ನನಗೇಕೆ, ನಾನೇನು ಸಹಾಯ ಮಾಡಿದೆ, ಸೀಟು ಬಿಟ್ಟುಕೊಡಲಿಲ್ಲ, ಮಗುವನ್ನೆತ್ತಿಕೊಳ್ಳಲಿಲ್ಲ, ಪಾಪ! ಬಸ್ಸು ತಿರುಗಣೆಗಳಲ್ಲಿ ವಾಲಿದಾಗ ಒಂದು ಕೈಲಿ ಮಗುವನ್ನೆತ್ತಿಕೊಂಡು ಮತ್ತೊಂದು ಕೈಲಿ ಕಂಬಿ ಹಿಡಿದು ಜೋತಾಡುತ್ತಿದ್ದರೂ ಸಹಾಯ ಮಾಡಲಾಗಲಿಲ್ಲವೆಂಬ ಆಕೆಯ ಅಸಹಾಯಕ ಭಾವ ಆಕೆಯ ಮುಖದಲ್ಲಿ ತೇಲಿ ಬರುತ್ತಿದ್ದುದನ್ನು ನೆನೆದರೆ ಅಪರಿಚಿತರೆನ್ನದೆ ಸಹಾಯ ಮಾಡಲು ಮುಂದೆ ಬರುವ ವಿಶಾಲ ಮನೋಭಾವದ 'ಇಂಥವರೂ ಇದ್ದಾರಾ' ಎಂಬುದು ಮನಸ್ಸಿನ ಮುಂದೆ ಆಗಾಗ್ಗೆ ಬಂದು ನಿಲ್ಲುತ್ತೆ.

-ವೈ. ಎಸ್. ಗುಂಡೂರಾವ್

ಡಾಕ್ಟರೇಟಿಗಾಗಿ ಅಮೇರಿಕಕ್ಕೆ ಹೋಗಿದ್ದ ಭಾರತೀಯರೊಬ್ಬರು ಹೋದ ಹೊಸದರಲ್ಲಿ ಕಾಯಿಲೆ ಬಿದ್ದು ಕೆಲ ದಿನ ಆಸ್ಪತ್ರೆಯಲ್ಲಿರಬೇಕಾಯಿತು. ಅವಿವಾಹಿತರಿದ್ದುದರಿಂದ ಹಾಗೂ ಅಲ್ಲಿನ ಕೆಲ ಆಸ್ಪತ್ರೆಗಳ ಪದ್ಧತಿಯಂತೆ ರೋಗಿಯ ಊಟೋಪಚಾರ ಮುಂತಾದವುಗಳನ್ನು ಆ ಆಸ್ಪತ್ರೆಯವರೇ ನೋಡಿಕೊಳ್ಳುತ್ತಿದ್ದರು. ಇವರು ಕಟ್ಟಾ ಶಾಕಾಹಾರಿ. ಹೀಗಾಗಿ ಅಲ್ಲಿನ ನರ್ಸ್ ಒಬ್ಬಳು ಇವರನ್ನು ವಿಶೇಷ ಕಾಳಜಿ ಹಾಗೂ ಮಮತೆಯಿಂದ ನೋಡಿಕೊಳ್ಳು-

ತ್ತಿದ್ದಳಲ್ಲದೆ ಇವರಿಂದಲೇ ಕೇಳಿ ಕಲಿತು ಭಾರತೀಯ ಊಟ ತಿಂಡಿಗಳನ್ನು ತಾನೆ ತಯಾರಿಸಿ ತರುತ್ತಿದ್ದಳು.

ಒಂದು ದಿನ "ನಿನಗಾಗಿ ಇಂದು ಯಾವ ತರಕಾರಿ ಬೇಯಿಸಿ ತರಲಿ?" ಎಂದಳು. "ನನಗೆ ಲೇಡೀಸ್ ಫಿಂಗರ್ ಬಹಳ ಇಷ್ಟ" ಎಂದದ್ದೇ ತಡ ಆ ತರುಣಿ ನರ್ಸ್ ಕೋಪದಿಂದ ಮುಖ ಕೆಂಪಾಗಿಸಿ ಅಲ್ಲಿಂದೆದ್ದು ಹೋಗಿ ಡಾಕ್ಟರನ್ನು ಕರೆ ತಂದಳು. ಆಕೆಯೂ ಬಂದು ಮತ್ತೊಮ್ಮೆ ಏನು ಬೇಕೆಂದು ಕೇಳಿದಾಗ ಇವರು ಮೊದಲಿನ ಉತ್ತರವನ್ನೇ ಕೊಟ್ಟರು. ಆ ಲೇಡಿ ಡಾಕ್ಟರಳಿಗೂ ಕೋಪ ಬಂತು. ಇವರನ್ನು ಸಿಕ್ಕಾಪಟ್ಟೆ ಬಯ್ದು "ಇದೇ ರೀತಿ ವರ್ತಿಸಿದ್ದಾದರೆ ನಿಮ್ಮನ್ನು ಆಸ್ಪತ್ರೆಯಿಂದ ಹೊರ ಹಾಕಬೇಕಾಗುತ್ತದೆ." ಎಂದು ಹೇಳಿ ಹೋಗಿಬಿಟ್ಟಳಂತೆ.

ಇವರೆಲ್ಲ ಏಕೆ ತನ್ನ ಮೇಲೆ ಕೋಪಿಸಿಕೊಂಡಿದ್ದಾರೆಂದು ತಿಳಿಯದೆ ಏನು ಮಾಡಲೂ ತೋಚದಾಗ ಅದೇ ದೇಶದಲ್ಲಿ ಬಹಳ ವರ್ಷಗಳಿಂದ ಇದ್ದ ತನ್ನ ಭಾರತೀಯ ಸ್ನೇಹಿತರೊಬ್ಬರಿಗೆ ಟೆಲಿಫೋನ್ ಮಾಡಿ ಇಲ್ಲಿನ ಸಮಾಚಾರವನ್ನು ತಿಳಿಸಿದರು. ಆಗ ಅವರ ಸ್ನೇಹಿತರು ದೊಡ್ಡದಾಗಿ ನಗುತ್ತ ಲೇಡಿ ಡಾಕ್ಟರಿಗೆ ಫೋನ್ ಕೊಡಲು ಹೇಳಿದರು. ಅವರು ತೆಗೆದುಕೊಂಡಾಗ ತನ್ನ ಸ್ನೇಹಿತ ಬೇಡಿದ್ದೇನೆಂದು ತಿಳಿಸಿದರು. ಆಗ ಆ ಡಾಕ್ಟರಮ್ಮನ ಮುಖ ನಗೆದಾವರೆಯಾಗಿ ಅವರು ನರ್ಸಿಗೆ ಸಮಾಚಾರ ತಿಳಿಸಿದಾಗ ಅವಳೂ ನಗುತ್ತ ಅಲ್ಲಿಂದೋಡಿದಳು. ಸ್ವಲ್ಪ ಸಮಯದ ನಂತರ ಬೆಂಡೆಕಾಯಿಯನ್ನು ತಂದಾಗ ಭಾರತೀಯ ರೋಗಿ "ಹಾಂ, ಇದೇ ನಾನು ಹೇಳಿದ ಲೇಡೀಸ್ ಫಿಂಗರ್" ಎಂದರು. "ಅಮೇರಿಕದವರು ನಾವು ವೋಕ್ರಾ ಎನ್ನುತ್ತೇವೆ ಇದಕ್ಕೆ" ಎಂದಳಂತೆ ನರ್ಸ್ ಮತ್ತೊಮ್ಮೆ ನಗುತ್ತ. —ಶಾಂತಾ ದೇಶಪಾಂಡೆ

ಬೆಂಗಳೂರಿನ ಜನನಿಬಿಡ ರಸ್ತೆಯಲ್ಲಿ ನಾನು ನನ್ನ ಯಜಮಾನರು ಸ್ಕೂಟರಿನಲ್ಲಿ ಹೊರಟಿದ್ದೆವು. ಹಿಂದಿನ ದಿನವೇ ಪೆಟ್ರೋಲ್ ಮುಗಿಯುವ ಸೂಚನೆಯಿದ್ದರೂ ಅನಂತರವೂ ಸಾಕಷ್ಟು ಸುತ್ತಿದ್ದರಿಂದ ಪೆಟ್ರೋಲ್ ಟ್ಯಾಂಕ್ ಖಾಲಿಯಾಗಿದೆ ಎನ್ನುವುದು ನಮ್ಮ ನೆನಪಿನಲ್ಲೇ ಉಳಿದಿರಲಿಲ್ಲ. ಸ್ಕೂಟರ್ ಗಕ್ಕನೆ ನಿಂತಿತು. ಪೆಟ್ರೋಲ್ ತುಂಬಿಸಿಕೊಳ್ಳಲು ಇನ್ನೊಂದೆರಡು ಮೈಲಿ ದೂರವಾದರೂ ಸ್ಕೂಟರನ್ನು ತಳ್ಳಬೇಕಾಗಿತ್ತು. ನನ್ನ ಕೈಲಿ ಸಾಮಾನು ತುಂಬಿದ ಚೀಲಗಳು. ರಸ್ತೆ ದಿಬ್ಬದಂತೆ ನಮ್ಮ ಮುಂದೆ ಹಾಸಿತ್ತು. ಮತ್ತೇನೂ ಮಾರ್ಗವೇ ಇಲ್ಲವೆಂದರಿತ ನಾವು ಇನ್ನೇನು ಸ್ಕೂಟರನ್ನು ದಬ್ಬಲು ಪ್ರಾರಂಭಿಸಬೇಕು, ಅಷ್ಟರಲ್ಲಿ ಅತಿ ವೇಗದಲ್ಲಿ ಮೋಟಾರ್ ಸೈಕಲ್ ಒಂದು ಬಂತು. ಅದರ ಸವಾರ ನಮ್ಮ ಹತ್ತಿರವೇ ವಾಹನ ನಿಲ್ಲಿಸಿದ. ಆತ ಯುವಕ. ಪಠಾಣರಂತೆ ಉಡುಪು. ನನಗೋ ಗಾಬರಿ. ಆತ ಯಾವ ಮಾತನ್ನೂ ಆಡದೆ 'ಡಿಕ್ಕಿ'ಯಿಂದ ಪೆಟ್ರೋಲ್ ತುಂಬಿದ್ದ ಬಾಟಲಿಯೊಂದನ್ನು ನನ್ನ ಯಜಮಾನರ ಕೈಗಿತ್ತು ಮಿಂಚಿನಂತೆ ಸಾಗಿ ಹೋದ. ನಾವು ಅವನನ್ನು ವಂದಿಸಬೇಕು ಅಥವಾ ಪೆಟ್ರೋಲಿನ ಹಣ ನೀಡಬೇಕು ಅನ್ನುವಷ್ಟರಲ್ಲೇ ವೇಗವಾಗಿ ಸಾಗುತ್ತಿದ್ದ ಅವನ ವಾಹನ ರಸ್ತೆಯ ಅಚೆ ಬದಿಯಲ್ಲಿ ಚುಕ್ಕೆಯಾಗಿ ನಮ್ಮ ನೋಟದಿಂದ ಕರಗಿತು.

ಮೋಟಾರ್ ಸೈಕಲ್ ಮೇಲೆ ಬಂದು ಮಹಿಳೆಯರ ಕತ್ತಿನ ಚೈನನ್ನು ಕಸಿದುಕೊಳ್ಳುವ ಯುವಕರ ಬಗ್ಗೆ ಪ್ರತಿ ನಿತ್ಯ ಓದುತ್ತಿರುವ ಈ ಸಂದರ್ಭದಲ್ಲಿ ಜನ ಮಾನವತೆಯನ್ನು ಕಳೆದುಕೊಂಡಿಲ್ಲ ಎಂದು ತೋರಿಸಲು ಈ ಘಟನೆಯನ್ನು ಉದಾಹರಿಸಬಹುದಲ್ಲವೇ?

—ವೆಂಕಟಲಕ್ಷ್ಮಿ ಬಿ. ಎಸ್.

# ವಿವಾಹ

**ಇಂಗ್ಲಿಷ್ ಮೂಲ : ಬರ್ಟ್ರೆಂಡ್ ರಸಲ್**
**ಕನ್ನಡಕ್ಕೆ: ಎಚ್. ಎಸ್. ವಿಶ್ವನಾಥ**

ಕೆಲವು ದಿನಗಳ ಕೆಳಗೆ ನ್ಯೂಯಾರ್ಕಿನಲ್ಲಿ ಟ್ಯಾಕ್ಸಿಯಲ್ಲಿ ಸಂಚರಿಸುತ್ತಿದ್ದಾಗ, ಅದರ ಚಾಲಕ ಹಿಂದೆ ತಿರುಗಿ ನೋಡಿ, "ಕ್ಷಮಿಸಿ, ತಾವು ಬರ್ಟ್ರೆಂಡ್ ರಸಲ್ ಅಲ್ಲವೆ?" ಎಂದು ನನ್ನನ್ನು ಪ್ರಶ್ನಿಸಿದ.

ಅಲ್ಲಗಳೆಯುವುದು ನಿರರ್ಥಕವೆನಿಸಿ ನಾನು ಹೌದೆಂದು ಒಪ್ಪಿಕೊಂಡೆ. ತಾನು ಹಿಂದಿನ ದಿನಗಳಲ್ಲಿ ನನ್ನ ಉಪನ್ಯಾಸಗಳನ್ನು ಕೇಳಿದ್ದಾಗಿಯೂ, ಅವು ತನ್ನ ಕಳೆದುಹೋದ ಬೌದ್ಧಿಕ ಜೀವನದ ಒಂದು ಭಾಗವಾಗಿದ್ದವೆಂದೂ ಪರಿತಪಿಸಿ ಹೇಳಿದ "ನಾನು ಈಗ ವಿವಾಹಿತ. ನನ್ನ ವ್ಯಕ್ತಿತ್ವದ ಬೆಳವಣಿಗೆ ನಿಂತಿದೆ."

ಅವನ ಹೇಳಿಕೆ ಈ ವೈವಾಹಿಕ ಜೀವನದ ನೋವಿನ ಪರಿಣಾಮವೆಂದು ಗೋಚರಿಸಿ, ಸಹಜವಾಗಿಯೇ ನನ್ನನ್ನು ವಿಚಾರ ಪ್ರವೃತ್ತನನ್ನಾಗಿ ಮಾಡಿತು. ವ್ಯಕ್ತಿತ್ವದ ಪರಿಪೂರ್ಣತೆಯೆಡೆಗೆ ಒಯ್ಯಬೇಕಾದ ವಿವಾಹ, ಅದರ ವಿರುದ್ಧ ದಿಕ್ಕಿನಲ್ಲೇಕೆ ಕೆಲಸ ಮಾಡಬೇಕು? ಅವನ ವಿವಾಹ ಜೀವನ ಅಸಂತೋಷಕರವಾಗಿದೆಯೆಂಬ ಧ್ವನಿಯೇನೂ ಅವನ ಸಂಭಾಷಣೆಯಲ್ಲಿ ವ್ಯಕ್ತವಾಗಿರಲಿಲ್ಲ; ಆದರೆ ಆ ಘೋರ ಪರಿಣಾಮವನ್ನು ವಿವಾಹಕ್ಕೆ ಆರೋಪಿಸಿದ್ದಂತೂ ಸತ್ಯ. ವಿವಾಹದಿಂದಾಗಿ ನಾನೇ ಸ್ವತಃ ಈ ಬಗೆಯ ಫಲಿತಾಂಶವನ್ನೇನೂ ಅನುಭವಿಸಿರಲಿಲ್ಲವಾದರೂ, ಆ ಟ್ಯಾಕ್ಸಿ ಚಾಲಕ ಬಹಳ ಜನಗಳ ಭಾವನೆಯನ್ನು ಅಭಿವ್ಯಕ್ತಗೊಳಿಸಿದ್ದನೆಂಬ ಅರಿವು ನನ್ನಲ್ಲಿ ಮೂಡಿತ್ತು.

ಈ ಪರಿಸ್ಥಿತಿಯ ಭಾಗಶಃ ಕಾರಣವನ್ನು ಆರ್ಥಿಕ ವ್ಯವಸ್ಥೆ ಮತ್ತು ಸಾಮಾಜಿಕ ಪದ್ಧತಿಯಲ್ಲಿ ಹುಡುಕಬಹುದು. ವಿಶ್ಲೇಷಿಸಲು ಸುಲಭವಾದ್ದರಿಂದ, ಮೊದಲು ಎರಡನೆಯದನ್ನು ಪರಿಶೀಲಿಸುತ್ತೇನೆ.

ಗಂಡ ಹೆಂಡಿರು ತಮ್ಮ ಬಿಡುವಿನ ಸಮಯವನ್ನು ಒಟ್ಟಿಗೆ ಕಳೆಯಬೇಕೆಂಬ ಸಂಪ್ರದಾಯ ಸಾಧುವಲ್ಲ. ಈ ಟ್ಯಾಕ್ಸಿ ಚಾಲಕನ ಪತ್ನಿ ಉಪನ್ಯಾಸಗಳಿಗೆ ಬೆಲೆ ಕೊಡುವುದಿಲ್ಲವೆಂಬುದರಲ್ಲಿ ಮತ್ತು ಆಕೆ ಅವುಗಳಿಗೆ ತನ್ನ ಪತಿಯೊಬ್ಬನನ್ನೇ ಕಳುಹಿಸುವುದಕ್ಕೆ ಇಷ್ಟ ಪಡುವುದಿಲ್ಲವೆಂಬುದರಲ್ಲಿ ಅನುಮಾನವೇ ಇಲ್ಲ.

ಅನೇಕ ದಂಪತಿಗಳು ತಮ್ಮ ಜೀವನ ಸಂಗಾತಿಯರು ಅನುಭವಿಸುತ್ತಿದ್ದಾರೆಂದು ಭಾವಿಸಲಾದ ಸಂತೋಷಗಳನ್ನು ಹಾಳು ಮಾಡುವುದಕ್ಕಾಗಿ ತಮ್ಮ ಸುಖ-ಸಂತೋಷಗಳನ್ನು ತ್ಯಜಿಸುತ್ತಾರೆ. ಕ್ಷಣಿಕವಾದ ಸ್ವಾರ್ಥದ ಸುಖಾನ್ವೇಷಣೆಯಲ್ಲಿ ಸಾಗುವುದಕ್ಕಿಂತ, ಬೇರೆಯವರ ಸುಖಗಳಿಗೆ ಅಡ್ಡಿಪಡಿಸುವುದು ಹೆಚ್ಚು ಹಾನಿಕರವಾದದ್ದು. ಪತಿ-ಪತ್ನಿಯರು ನೀರಸರಾಗುವುದು ಮತ್ತು ತಮ್ಮ ತಮ್ಮಲ್ಲಿ ಯಾವುದೆ ಮಾತನ್ನಾಡಲು ಅಶಕ್ತರಾಗುವುದನ್ನು ತಪ್ಪಿಸಲು, ಅವರುಗಳು ಕೊಂಚ ಸಾಮಾಜಿಕ ಅಗಲಿಕೆಯನ್ನು ಅನುಭವಿಸಬೇಕಾದ ಅಗತ್ಯವಿದೆ. ಈ ದಿಶೆಯಲ್ಲಿ ಹೊಸ ಸಂಪ್ರದಾಯವು ಶೀಘ್ರವಾಗಿ ಹರಡುತ್ತದೆ.

ಈ ಸನ್ನಿವೇಶದಲ್ಲಿನ ಆರ್ಥಿಕ ತೊಂದರೆಯು ಬಹಳ ಗಂಭೀರವಾಗಿದೆ. ಒಬ್ಬ ಅವಿವಾಹಿತನು




"ಬೆಲೆ ಬೇಗ ಇಳ್ಸಿ ಅಂತ ಕೂಗಿಕೊಳ್ಳಲು ಅದೇನು ಭಕ್ತಿಯೇನೊ ಬೋರಾ?"

ತನ್ನ ಆದಾಯವನ್ನು ವ್ಯಯಿಸಲು ಎಷ್ಟು ಸ್ವತಂತ್ರನಾಗಿರುವನೋ, ಅಷ್ಟರ ಮಟ್ಟಿಗಿನ ಸ್ವಾತಂತ್ರ್ಯ ವಿವಾಹಿತನಿಗೆ ಸಾಧ್ಯವಾಗದು. ಬಹಳಷ್ಟು ಅವಿವಾಹಿತರು ತಮ್ಮ ಬಾಳ ಸಂಗಾತಿಯ ಶೋಧನೆಯ ಜೊತೆಗೆ ಇತರ ಮನೋರಂಜನ ಚಟುವಟಿಕೆಗಳಲ್ಲಿ ತಮ್ಮ ಬಿಡುವಿನ ಬಹುಭಾಗವನ್ನು ಮೀಸಲಿಡುತ್ತಾರೆಂಬುದಂತೂ ನಿಸ್ಸಂಶಯ. ಆದರೆ ವಿವಾಹಿತರಲ್ಲಿ ಕೆಲವರು ಶುದ್ಧ ಅಭಿರುಚಿಯಿಂದ, ಯಾವುದೇ ಬಗೆಯ ಐಹಿಕ ಪ್ರತಿಫಲವನ್ನು ಅಪೇಕ್ಷಿಸದೆ ಜ್ಞಾನಾರ್ಜನೆಯನ್ನು ಮಾಡುತ್ತಾರೆ. ಇಂಥವರು ಮದುವೆಯ ನಂತರ, ತಮ್ಮ ಬಿಡುವಿನ ವೇಳೆ ಶೂನ್ಯವಾಗಿರುವುದನ್ನು ಗಮನಿಸುತ್ತಾರೆ; ಅಕಸ್ಮಾತ್ ಬಿಡುವು ದೊರಕಿದರೂ, ಅಂಥ ಜ್ಞಾನಾರ್ಜನೆಯನ್ನು ಮುಂದುವರಿಸಲು ಅಗತ್ಯವಾದ ಹಣದ ಕೊರತೆ ಇರುತ್ತದೆ. ಬುದ್ಧಿಜೀವಿ ಹೆಂಗಸರೂ ವಿವಾಹದ ನಂತರ, ತಮಗೆ ಮಕ್ಕಳಾಗದಿದ್ದರೆ ಈ ಬೌದ್ಧಿಕ ನಷ್ಟವನ್ನು ಗಂಡಸರಿಗಿಂತ ಹೆಚ್ಚಾಗಿ ಅನುಭವಿಸುತ್ತಾರೆ. ಇದರ ಪರಿಣಾಮವಾಗಿ ಪುರುಷರು ಮತ್ತು ಸ್ತ್ರೀಯರು ಮದುವೆಯ ಬಗೆಗೆ ವಿರುದ್ಧ ಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ. ಎಲ್ಲಿಯ ವರೆಗೆ ದ್ವೇಷವು ಮಕ್ಕಳ ಬೆಳವಣಿಗೆಯ ಒಟ್ಟಾರೆ ಖರ್ಚನ್ನು ವಹಿಸಿಕೊಳ್ಳುವುದಿಲ್ಲವೋ. ಅಲ್ಲಿಯ ವರೆಗೆ ಈ ಸಮಸ್ಯೆ ಸಂಪೂರ್ಣವಾಗಿ ನಿವಾರಿಸಲು ಸಾಧ್ಯವಿಲ್ಲ. ಆದರೆ, ಈ ಪರಿಹಾರ ನಮ್ಮ ಕಾಲದಲ್ಲಿ ಕಾರ್ಯಗತವಾಗುವ ಹಾಗೆ ಕಾಣಿಸುವುದಿಲ್ಲ. ಮಕ್ಕಳನ್ನು ಬೆಳೆಸುವ ಬಗ್ಗೆ ಸಂಪ್ರದಾಯಿಕವಾದ ವಿಧಾನವನ್ನು ಬಿಟ್ಟು ಅದಕ್ಕಿಂತ ಹೆಚ್ಚಿನ ಬುದ್ಧಿವಂತಿಕೆಯ ಮನೋಧರ್ಮವನ್ನು ರೂಪಿಸಿಕೊಳ್ಳುವುದರ ಮೂಲಕ ಈ ಸಮಸ್ಯೆಯ ತೀವ್ರತೆಯನ್ನು ಸಾಕಷ್ಟು ಕಡಿಮೆ ಮಾಡಬಹುದು. ಮಕ್ಕಳನ್ನು ಬೆಳೆಸುವುದಕ್ಕೆ ಸಾಕಷ್ಟು ಕೌಶಲ ಮತ್ತು ವೈಜ್ಞಾನಿಕ ಮನೋಧರ್ಮದ ಅಗತ್ಯವಿದೆ; ಹಾಗೂ ಈ ಕ್ರಿಯೆಯು ಬಹಳ ಕುತೂಹಲಕಾರಿ ಅವಲೋಕನಕ್ಕೆ ಎಡೆ ಮಾಡಿಕೊಡುತ್ತದೆ. ಎಷ್ಟೇ ಕೌಶಲ ವೈಜ್ಞಾನಿಕ ಮನೋಧರ್ಮಗಳು ಪ್ರೀತಿಯ ಕೂಡ ಅಗತ್ಯವನ್ನು ತುಂಬಲಾರವು. ಆದ್ದರಿಂದ ಅವುಗಳು ಪ್ರೀತಿಗೆ ಪೂರಕವಾಗಿ ನೆರವಾಗಬೇಕು. ಪಾಲಕರು ಅವುಗಳನ್ನು ತಪ್ಪಾಗಿ ತಿಳಿದುಕೊಂಡಿದ್ದರೆ, ಮಕ್ಕಳ ಬೆಳವಣಿಗೆಯು ತಪ್ಪು ದಿಶೆಯನ್ನು ಹಿಡಿಯುವ ಸಾಧ್ಯತೆಯಿದೆ. ಯಾವಾಗ ಜನರು ಬಾಲ್ಯದ ವೈಜ್ಞಾನಿಕ ಕುತೂಹಲವನ್ನು ಅರ್ಥ ಮಾಡಿಕೊಳ್ಳುವರೋ, ಆಗ ಬುದ್ಧಿಜೀವಿಗಳು ಕುಟುಂಬದ ಜೀವನದ ಬಗ್ಗೆ ಕಡಿಮೆ ಮಟ್ಟದಲ್ಲಿರುತ್ತಾರೆಂದೇ ನನ್ನ ನಂಬಿಕೆ.

ಮಗುವಿನ ಬಗ್ಗೆ ತುಂಬ ಪ್ರೀತಿಯನ್ನು ತೋರಿಸುವ ಅಶಿಕ್ಷಿತನು, ಹೃದಯರಹಿತನಾದ ಸುಶಿಕ್ಷಿತನಿಗಿಂತ ಮೇಲು. ಆದರೆ ಮಕ್ಕಳನ್ನು ಆಸೆ ಪಡುವ ತಿಳುವಳಿಕಸ್ಥನು ಇವರಿಬ್ಬರಿಗಿಂತ ಉತ್ತಮನೆಂದೇ ನನ್ನ ಭಾವನೆ.



# ಸಾರ್ವಜನಿಕ ಆಸಕ್ತಿಯ ಮೊಕದ್ದಮೆಗಳು

**ಐ. ಆರ್. ಪ್ರಮೋದ**

ನೀವು ಯಾವಾಗ ಮತ್ತು ಯಾಕೆ ನ್ಯಾಯಾಲಯಕ್ಕೆ ಹೋಗಬಹುದು?

ಎಂಥ ಸರಳ ಪ್ರಶ್ನೆ.

ನಿಮಗೆ ವೈಯಕ್ತಿಕವಾದ, ವೃತ್ತಿಪರವಾದ ತೊಂದರೆಯುಂಟಾದಲ್ಲಿ ಅಥವಾ ನೀವು ಸಂಸ್ಥೆಯ, ಸಂಘದ ಪ್ರತಿನಿಧಿಯಾಗಿ, ಅಲ್ಪವಯ ಮಕ್ಕಳ ಪೋಷಕರಾಗಿ ನ್ಯಾಯಾಲಯದ ಮೆಟ್ಟಲು ಹತ್ತುವುದು ನಿಮ್ಮ ಹಕ್ಕು. ಒಟ್ಟಿನಲ್ಲಿ ಮೊಕ-ದ್ದಮೆಯ ವಸ್ತುವಿನೊಡನೆ ನಿಮಗೆ ನೇರವಾದ ಅಥವಾ ಪ್ರಾತಿನಿಧಿಕ ಸಂಬಂಧವಿರಬೇಕು. ಇದು ನಮ್ಮ ಕಾನೂನು ವ್ಯವಸ್ಥೆ ಅಂಗೀಕರಿಸಿದ ಸಾಂಪ್ರದಾಯಿಕ ಆಂಗ್ಲೊ ಸ್ಯಾಕ್ಸನ್ ತತ್ವ.

ಆದರೆ ೧೯೭೯ರಿಂದೀಚೆಗೆ ಈ ಮೊಕದ್ದಮೆ ಹೂಡುವ ಅಧಿಕಾರ ವ್ಯಾಪ್ತಿಯ (Locus-Standi) ತತ್ವವನ್ನು ಸುಪ್ರೀಮ್ ಕೋರ್ಟು ಉದಾತ್ತೀಕರಣಗೊಳಿಸಿ ನಮ್ಮ ಕಾನೂನು ವ್ಯವಸ್ಥೆಯಲ್ಲಿ ಮಹತ್ವದ ಬದಲಾವಣೆಯನ್ನು ಮಾಡಿದೆ. ಈ ಪ್ರಶ್ನೆಯನ್ನು ಇತ್ಯರ್ಥಗೊಳಿಸಿದ ಮೊಕದ್ದಮೆಗಳು ಸಾರ್ವಜನಿಕ ಆಸಕ್ತಿಯ ಮೊಕದ್ದಮೆಗಳೆಂದು ಪ್ರಸಿದ್ಧವಾಗಿವೆ.

(ಅ) ಆರ್ಥಿಕವಾಗಿ ಅಥವಾ ಸಾಮಾಜಿಕವಾಗಿ ದುರ್ಬಲವಾಗಿರುವ ಸಮುದಾಯದ ಅಥವಾ ವ್ಯಕ್ತಿಯ ಸಂವಿಧಾನಬದ್ಧ ಹಕ್ಕಿನ ಉಲ್ಲಂಘನೆಯಾದರೆ ಆತ ಅಥವಾ ಯಾವುದೇ ಸಾರ್ವಜನಿಕ ವ್ಯಕ್ತಿ ಅಥವಾ ಸಂಘಟನೆ, ಕೋರ್ಟಿನ ಮೆಟ್ಟಿಲನ್ನು ಹತ್ತಬಹುದು. ಆದರೆ ಇದರಲ್ಲಿ ರಾಜಕೀಯ ವೈಯಕ್ತಿಕ ದುರುದ್ದೇಶ ಇರಕೂಡದು.

(ಆ) ಕೋರ್ಟಿನ ರಿಟ್ ಅಧಿಕಾರ ವ್ಯಾಪ್ತಿಗೆ ಒಳಪಡುವ ಅರ್ಜಿಗಳು ನಿಯಮಿತ ರೂಪದಲ್ಲಿಯೇ ಇರಬೇಕೆಂದಿಲ್ಲ (ಉದಾ: ಪತ್ರಿಕಾ ವರದಿ, ಜೈಲಿನಿಂದ ತಂತಿ ಅಥವಾ ಆಸಕ್ತರ ಪತ್ರ.) ನ್ಯಾಯದ ಆತ್ಮವನ್ನು ನಿಯಮದ ತಾಂತ್ರಿಕತೆ ಕೊಲ್ಲಬಾರದು.

ಇವು ಸಾರ್ವಜನಿಕ ಮೊಕದ್ದಮೆಯ ಮುಖ್ಯ ಅಂಶಗಳು:

"ಸಾಂಪ್ರದಾಯಿಕವಾಗಿ ಓರ್ವ ವ್ಯಕ್ತಿಯ ವಿರುದ್ಧ ಇನ್ನೋರ್ವ ತನ್ನ ವೈಯಕ್ತಿಕ ಹಕ್ಕುಗಳಿಗಾಗಿ ಹೂಡುವ ಮೊಕದ್ದಮೆಗಿಂತ ಸಾರ್ವಜನಿಕ ಆಸಕ್ತಿಯ ಮೊಕದ್ದಮೆ ಭಿನ್ನವಾದದ್ದು. ನ್ಯಾಯಾಲಯಗಳು ಬಡವರ ಮತ್ತು ಹೋರಾಡುತ್ತಿರುವ ಜನಸ್ತೋಮದ ನ್ಯಾಯಾಲಯಗಳಾಗುವ ಸಮಯ ಈಗ ಬಂದಿದೆ. ಅವುಗಳು ಸ್ಥಾಪಿತ ವ್ಯವಸ್ಥೆ ಮತ್ತು ಯಥಾಸ್ಥಿತಿಯನ್ನು ಎತ್ತಿ ಹಿಡಿಯುವ ಗುಣವನ್ನು ಬಿಟ್ಟುಬಿಡಬೇಕು" ಎಂದು ನ್ಯಾಯಮೂರ್ತಿ ಭಗವತಿ ಘೋಷಿಸಿದ ಸಾರ್ವಜನಿಕ ಆಸಕ್ತಿಯ

ಮೊಕದ್ದಮೆಗಳ ಸ್ವರೂಪ ಸ್ಪಷ್ಟವಾಗಬೇಕಾದರೆ ಸುಪ್ರೀಮ್ ಕೋರ್ಟು ಇತ್ಯರ್ಥಗೊಳಿಸಿದ ಈ ಕೆಲವು ಪ್ರಕರಣಗಳನ್ನು ಗಮನಿಸುವುದು ಅವಶ್ಯ.

೧೯೭೯ರಲ್ಲಿ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಪ್ರಕಟವಾದ ಪೋಲೀಸ್ ಕಮೀಷನ್ನಿನ ಮಾಜಿ ಸದಸ್ಯ ಕೆ. ಎಫ್. ರುಸ್ತುಮಜೀ ಅವರ ವರದಿಯನ್ನು ರಿಟ್ ಅರ್ಜಿಯೆಂದು ಪರಿಗಣಿಸಿ ಬಿಹಾರದ ಜೈಲುಗಳಲ್ಲಿ ಹಲವಾರು ವರ್ಷಗಳಿಂದ ವಿಚಾರಣೆಯಿಲ್ಲದೆ ಕೊಳೆಯುತ್ತಿದ್ದ ಬಂಧಿಗಳನ್ನು ತಕ್ಷಣವೇ ಬಿಡುಗಡೆಮಾಡಲು ಸುಪ್ರೀಮ್ ಕೋರ್ಟು ಆಜ್ಞೆ ಮಾಡಿತು. ಆರೋಪಿಯ ಹಣಕಾಸಿನ ಅಂತಸ್ತಿನ ಆಧಾರದಲ್ಲಿ ಬಿಡುಗಡೆ ಮಾಡುವ ಜಾಮೀನು ಪದ್ಧತಿಯನ್ನು ಟೀಕೆ ಮಾಡಿತು. ವಿಳಂಬ ರಹಿತ ಇತ್ಯರ್ಥ ಮತ್ತು ಸರಕಾರದ ಖರ್ಚಿನಲ್ಲಿ ಉಚಿತ ಕಾನೂನಿನ ನೆರವು ಪ್ರಜೆಯ ಸಂವಿಧಾನಬದ್ಧ ಹಕ್ಕು ಎಂದು ಘೋಷಿಸಿ, ಆರೋಪಿಗಳನ್ನು ಆರೋಪಿಸಲಾದ ಶಿಕ್ಷೆಯ ಬಂಧನದ ಅವಧಿಗಿಂತ ಜಾಸ್ತಿ ಜೈಲಿನಲ್ಲಿಡ ಕೂಡದೆಂದು ತೀರ್ಪು ನೀಡಿತು. ಈ ಹಕ್ಕುಗಳನ್ನು ಕಾರ್ಯಗತಗೊಳಿಸಲು ನ್ಯಾಯಾಲಯ ಕಟ್ಟಡಗಳ ಹೆಚ್ಚುವಿಕೆ, ನ್ಯಾಯಾಲಯಗಳ ಸುಧಾರಣೆ, ಇವುಗಳ ಬಗ್ಗೆ ಸರಕಾರಕ್ಕೆ ಆದೇಶ ನೀಡುವ ಅಧಿಕಾರ ತನಗಿದೆ ಎಂದಿತು.

೧೯೮೦ರ ನವೆಂಬರಿನಲ್ಲಿ ಜೈಪುರದ ಸೆಂಟ್ರಲ್ ಜೈಲಿನ ಬಂಧಿಯೊಬ್ಬ ಕಳುಹಿಸಿದ ತಂತಿಯನ್ನು ಹೇಬಿಯಸ್ ಕಾರ್ಪಸ್ ಅರ್ಜಿಯೆಂದು ಪರಿಗಣಿಸಿ ಏಕಾಂತದಲ್ಲಿದ್ದ ಬಂಧಿಗಳನ್ನು ಬಿಡುಗಡೆಗೊಳಿಸಲು ಆಜ್ಞೆ ನೀಡಿ ಅತ್ಯಂತ ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಕೈಕಾಲುಗಳಿಗೆ ಕೋಳ ಹಾಕಿ ಏಕಾಂತಲ್ಲಿಡಬೇಕೆಂಬ ನಿರ್ದೇಶನ ನೀಡಿತು.

೧೯೮೦ರ ಡಿಸೆಂಬರಿನಲ್ಲಿ ಬಿಹಾರದ ಸಂತಾಲ್ ಪರಗಣದ ಡಾ. ವಸುಧಾ ಧಾಗಾವರ್‌ವರ್ ಎಂಬ ಸಮಾಜ ವಿಜ್ಞಾನಿಯೊಬ್ಬರ ಕಾಗದವನ್ನು ರಿಟ್ ಅರ್ಜಿಯೆಂದು ಪರಿಗಣಿಸಿ ವಿಚಾರಣೆ ನಡೆಸಿತು. ೧೯೬೭ರಲ್ಲಿ ಇನ್ನು ಒಂಭತ್ತು ವರ್ಷಗಳಿದ್ದಾಗ ನಾಲ್ಕು ಆದಿವಾಸಿ ಹುಡುಗರನ್ನು ಬಂಧಿಸಿ ವಿಚಾರಣೆಯಿಲ್ಲದೆ ಎಂಟು ವರ್ಷ ಜೈಲಿನಲ್ಲಿಡಲಾಗಿತ್ತು. ಕೂಡಲೇ ವಿಚಾರಣೆ ನಡೆಸಬೇಕೆಂದು ಕಬ್ಬಿಣದ ಕೋಳಗಳನ್ನು ಹಾಕಕೂಡದೆಂದು ಮತ್ತು ಕಠಿಣ ಪರಿಶ್ರಮದ ಕೆಲಸ ಕೊಡಕೂಡದೆಂದು ಆದೇಶ ನೀಡಿತು.

೧೯೮೧ರಲ್ಲಿ ಎಂಭತ್ತು ಮಂದಿ ಬಂಧಿಗಳ ಕಣ್ಣುಗಳನ್ನು ಪೋಲೀಸರು ಸೂಜಿಯಿಂದ ಚುಚ್ಚಿ ಆ್ಯಸಿಡ್ ಸುರಿದು ಕುರುಡಾಗಿಸಿದ ಭಾಗಲ್ಪುರ ಬಾಧಿಗಳ ಮೊಕದ್ದಮೆಯಲ್ಲಿ ಉಚಿತ ಕಾನೂನಿನ ನೆರವು ಬಾಧಿಯ ಮೂಲಭೂತ ಹಕ್ಕು ಮತ್ತು ಸಂವಿಧಾನದ ೨೧ನೇಯ ಪರಿಚ್ಛೇದದ ಅಂತರ್ಗತ ಅಂಶ ಎಂದು ಘೋಷಿಸಿತು. ಆರ್ಥಿಕ ಅಥವಾ ಆಡಳಿತಾತ್ಮಕ ನೆಪಗಳನ್ನೊಡ್ಡಿ ಸರಕಾರ ಈ ಜವಾಬ್ದಾರಿಯಿಂದ ನುಣುಚಿಕೊಳ್ಳಕೂಡದೆಂದು ಆದೇಶಿಸಿತು.

೧೯೮೨ರಲ್ಲಿ ದೆಹಲಿಯ ಏಶಿಯಾಡ್‌ಗಾಗಿ ನಡೆಯುತ್ತಿದ್ದ ನಿರ್ಮಾಣ ಕಾಮಗಾರಿಗಳ ಕಾರ್ಮಿಕ ದಿನಗೂಲಿಯಿಂದ ಕಡಿತಗೊಳಿಸುವುದನ್ನು ಅಕ್ರಮ ಎಂದು ಘೋಷಿಸಿ ಇದು ಸಂವಿಧಾನದ ೩೦ನೆಯ ಪರಿಚ್ಛೇದ ವಿವರಿಸುವ ಕಡ್ಡಾಯ ದುಡಿಮೆಯ ವ್ಯಾಪ್ತಿಗೆ ಬರುತ್ತದೆ ಎಂದಿತು. ಕಾರ್ಮಿಕ ಕಲ್ಯಾಣ ಕಾನೂನುಗಳನ್ನು ಕಡ್ಡಾಯವಾಗಿ ಜಾರಿಗೊಳಿಸಲು ಸರಕಾರಕ್ಕೆ ಆದೇಶ ನೀಡಿತು.

೧೯೮೨ರಲ್ಲಿ ನ್ಯಾಯಮೂರ್ತಿಗಳ ವರ್ಗಾವಣೆಯ ಮೊಕದ್ದಮೆಯಲ್ಲಿ ವಕೀಲರಿಗೆ ಭಾಗವಹಿಸುವ ಹಕ್ಕು ಇದೆ ಎಂದು ತೀರ್ಪು ನೀಡಿತು.

ಅದೇ ವರ್ಷ ಬಿಹಾರದ ಹಜಾರಿಬಾಗಿನ ಉಚಿತ ಕಾನೂನು ಮಂಡಳಿ ಬರೆದ ಪತ್ರವನ್ನು ರಿಟ್ ಅರ್ಜಿಯಾಗಿ ವಿಚಾರಣೆ ನಡೆಸಿ ಹತ್ತೊಂಬತ್ತರಿಂದ ಮೂವತ್ತೇಳು ವರ್ಷಗಳ ತನಕ ಜೈಲಿನಲ್ಲಿ ಕೊಳೆಯುತ್ತಿದ್ದ ಜೈಲುವಾಸಿಗಳನ್ನು

ತಕ್ಷಣ ಬಿಡುಗಡೆ ಮಾಡಲು ಆಜ್ಞೆ ಮಾಡಿತು. ಸುಪ್ರೀಮ್ ಕೋರ್ಟಿನ ಭಾಷೆಯಲ್ಲಿ "ಮರೆತು ಹೋದ ಮನುಷ್ಯತ್ವದ ಈ ಮಾದರಿಗಳು ವರ್ಷಗಳಿಂದ ಕಲ್ಲಿನ ಗೋಡೆಗಳ ಹಿಂದೆ ಕಬ್ಬಿಣದ ಸರಳುಗಳ ಹಿಂದೆ ಸ್ವಾತಂತ್ರ್ಯದಿಂದ ವಂಚಿತರಾದವರು. ಹಜಾರಿಬಾಗ್ ಸೆಂಟ್ರಲ್ ಜೈಲಿನ ಬರೇ ಟಿಕೆಟ್ ನಂಬರುಗಳಾಗಿದ್ದರು."

೧೯೮೫ರ ಅಗಸ್ಟಿನಲ್ಲಿ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ಜಮ್ಮುವಿನ ವಿದ್ಯುತ್ ಪ್ರಾಜೆಕ್ಟಿನಲ್ಲಿ ವಲಸೆ ಬಂದ ಕಾರ್ಮಿಕರ ಮೇಲಾಗುತ್ತಿರುವ ಶೋಷಣೆಯ ವರದಿಯೊಡನೆ ಪ್ರಜಾಪ್ರಭುತ್ವವಾದಿ ಮಾನವ ಹಕ್ಕು ಸಮಿತಿ ಕಳುಹಿಸಿದ ಪತ್ರವನ್ನು ರಿಟ್ ಅರ್ಜಿಯಾಗಿ ಸ್ವೀಕರಿಸಿ ಆ ಬಗ್ಗೆ ಸಮಗ್ರ ಪರಿಶೀಲನೆ ನಡೆಸಲು ಜಮ್ಮು ಕಾಶ್ಮೀರದ ಕಾರ್ಮಿಕ ಕಮಿಷನ್, ಕೇಂದ್ರ ಮತ್ತು ಒಡಿಶ್ಶಾ ಸರಕಾರಕ್ಕೆ ಆದೇಶ ನೀಡಿತು. ನಿರ್ಮಾಣ ಕಾಮಗಾರಿಗಳಲ್ಲಿ ಹದಿನಾಲ್ಕು ವರ್ಷಗಳ ಕೆಳಗಿನ ವಯಸ್ಸಿನ ಮಕ್ಕಳನ್ನು ದುಡಿಸಬಾರದೆಂಬ ಆದೇಶ ನೀಡಿತು.

೧೯೮೩ರ ಅಗಸ್ಟಿನಲ್ಲಿ ಬಿಹಾರದ ರಾಂಚಿ ಜೈಲಿನಲ್ಲಿ ಹದಿನಾಲ್ಕು ವರ್ಷ ನ್ಯಾಯ ಬಾಹಿರವಾಗಿ ಸರಕಾರಿ ನಿರ್ಲಕ್ಷ್ಯದಿಂದಾಗಿ ಬಂಧನದಲ್ಲಿದ್ದ ರುದಲ್ ಶಹಾನಿಗೆ, ಸರಕಾರ ಮೂವತ್ತು ಸಾವಿರ ರೂಪಾಯಿ ಪರಿಹಾರ ಕೊಡಲು ಆದೇಶಿಸಿದ ತೀರ್ಪು ಮಹತ್ವದ ತೀರ್ಪು. ತನ್ನ ಅಧಿಕಾರಶಾಹಿ ಎಸಗುವ ಅಕೃತ್ಯಕ್ಕೆ ಹೊಣೆಗಾರನಾಗುವ ಸರಕಾರದಿಂದ ನಾಗರಿಕ, ಹಣದ ರೂಪದಲ್ಲಿ ಪರಿಹಾರ ಪಡೆಯುವುದು ಆತನ ಸಂವಿಧಾನಬದ್ಧ ಮೂಲಭೂತ ಹಕ್ಕು ಎನ್ನುವ ಈ ದೇಶದ ಸರ್ವೋನ್ನತ ನ್ಯಾಯಾಲಯದ ತೀರ್ಪು ವ್ಯಾಪಕವಾದ ಪರಿಣಾಮವನ್ನು ಬೀರುತ್ತದೆ. ಇನ್ನು ಮುಂದೆ ಪೋಲೀಸ್ ಸ್ಟೇಶನ್ನಿನಲ್ಲಿ ದೌರ್ಜನ್ಯಕ್ಕೊಳಗಾಗುವವರು, ಸರಕಾರಿ ಆಸ್ಪತ್ರೆಯಲ್ಲಿ ನಿರ್ಲಕ್ಷ್ಯದಿಂದ ಸಾಯುವವರು, ಅಧಿಕಾರಶಾಹಿಯ ಜಡತೆಯಿಂದ ತೊಂದರೆಪಡುವ ನಾಗರಿಕರು, ನಿವೃತ್ತ ನೌಕರರು, ಪಿಂಚಣಿದಾರರು ಸರಕಾರದಿಂದ ಪರಿಹಾರ ಕೇಳುವುದು ಸಾಧ್ಯವಾಗುತ್ತದೆ.

೧೯೮೩ರಲ್ಲಿ ಕೇರಳದ ಸುಲ್ತಾನ್ ಬತ್ತೇರಿಯ ಡಾಕ್ಟರ್‌ನಲ್ಲಿ ತಂಪಿತೇರಾ ನಿತ್ಯ ಪ್ರಯಾಣಿಕನೆಂಬ ನೆಲೆಯಲ್ಲಿ ರೈಲ್ವೆಯ ಸ್ಥಿತಿ ಸುಧಾರಣೆಗಾಗಿ ಸುಪ್ರೀಮ್ ಕೋರ್ಟು ಸರಕಾರಕ್ಕೆ ಆದೇಶ ನೀಡಲು ವಿನಂತಿಸಿದರು. ಸರಕಾರದ ಸಂಪನ್ಮೂಲದ ಕೊರತೆಯ ಮಿತಿಯಿಂದ ನಿರ್ದೇಶನ ಸಾಧ್ಯವಾಗದಿದ್ದರೂ ರೇಲ್ವೇ ಸಾರಿಗೆಯಲ್ಲಿ ತುರ್ತು ಕ್ರಮ ಕೈಗೊಳ್ಳುವುದು ಅಪತ್ಯವೆಂದು ಅಭಿಪ್ರಾಯಪಟ್ಟ ಸುಪ್ರೀಮ್ ಕೋರ್ಟು ಸ್ವಂತ ಪರಿಶ್ರಮದಿಂದ ಮಾಹಿತಿಯನ್ನು ಸಂಗ್ರಹಿಸಿ ಸಾರ್ವಜನಿಕ ಆಸಕ್ತಿಯ ಮೊಕದ್ದಮೆಯನ್ನು ನಡೆಸಿದ ಡಾಕ್ಟರರಿಗೆ ಖರ್ಚಿನ ಬಾಬ್ತು ರೈಲ್ವೇ ಇಲಾಖೆ ಮತ್ತು ಕೇಂದ್ರ ಸರಕಾರಗಳು ಐದು ಸಾವಿರ ರೂಪಾಯಿ ಕೊಡಬೇಕೆಂದು ಆದೇಶಿಸಿತು.

## ಆಶಯ ಮತ್ತು ವಾಸ್ತವದ ನಡುವಿನ ಬಿರುಕು

ಪತ್ರಿಕೆಗಳಲ್ಲಿ ಬಂದ ವರದಿಯನ್ನೇ ರಿಟ್ ಅರ್ಜಿ ಎಂದು ಪರಿಗಣಿಸಿ ಪರಿಶೀಲನೆ ನಡೆಸಲು ಸುಪ್ರೀಮ್ ಕೋರ್ಟು ಆದೇಶ ನೀಡಿದ್ದು ಕೂಡ ಗಮನಾರ್ಹವಾದ ಬೆಳವಣಿಗೆ.

ಮಾನವ ಹಕ್ಕುಗಳ ಸಮಿತಿ, ಪತ್ರಕರ್ತ ಸಾಮಾಜಿಕ ಕಳಕಳಿಯ ರಾಜಕೀಯ ಕಾರ್ಯಕರ್ತ. ಜೈಲುವಾಸಿಗಳ, ಕೊಳಗೇರಿ ನಿವಾಸಿಗಳ, ಬಡ ಕೂಲಿಕಾರರ ಪರವಾಗಿ ಮೊಕದ್ದಮೆಗಳನ್ನು ಹೂಡಿದ್ದು ಮತ್ತು ದೇಶದ ಸರ್ವೋನ್ನತ ನ್ಯಾಯಾಲಯ ಅವುಗಳನ್ನು ಸ್ವೀಕರಿಸಿ ತೀರ್ಮಾನಗೊಳಿಸಿದ್ದು ನಮ್ಮ ನ್ಯಾಯಾಂಗ ಇತಿಹಾಸದಲ್ಲಿಯೇ ಮೊದಲು. ಇದು ನಮ್ಮ ಕಾನೂನು ವ್ಯವಸ್ಥೆಯ ಮೇಲೆ ಆಳವಾದ ಮತ್ತು ದೀರ್ಘಕಾಲಿಕ ಪರಿಣಾಮ ಬೀರಬಲ್ಲದು.

ಉಚಿತ ಕಾನೂನಿನ ನೆರವು, ಸಾಮಾಜಿಕ ನ್ಯಾಯ, ಮೂಲಭೂತ ಹಕ್ಕು ಮತ್ತು

ಸ್ವಾತಂತ್ರ್ಯ ಮುಂತಾದ ಉದಾತ್ತ ಧ್ಯೇಯಗಳನ್ನು ಸಂವಿಧಾನ ಘೋಷಿಸುತ್ತದೆ. ಆದರೆ ವಾಸ್ತವದಲ್ಲಿ ಬಡ ಪ್ರಜೆ, ದುರಾಡಳಿತ ಹಿಂಸೆ, ಕ್ರೌರ್ಯ ಮತ್ತು ಅನ್ಯಾಯಗಳಿಗೆ ಬಲಿಯಾಗುತ್ತಾನೆ.

ಸಾರ್ವಜನಿಕ ಆಸಕ್ತಿಯ ಮೊಕದ್ದಮೆಯ ತೀರ್ಪುಗಳಲ್ಲಿ ಈ ವಾಸ್ತವ ಮತ್ತು ಆಶಯದ ನಡುವಿನ ಆಳವಾದ ಬಿರುಕು ಮತ್ತು ದ್ವಂದ್ವ ಸ್ಪಷ್ಟವಾಗುತ್ತದೆ. ವಾಸ್ತವವನ್ನು ಬದಲಾಯಿಸಲು ನಿರ್ದೇಶಿಸುವ ನ್ಯಾಯಾಲಯದ ಅಧಿಕಾರ ಆದರೆ ಜಾರಿಗೊಳಿಸಲು ಸಾಧ್ಯವಾಗದ ಅಸಹಾಯಕತೆ ಏಕಕಾಲದಲ್ಲಿ ಗೋಚರಿಸುತ್ತವೆ.

## ವಿಮರ್ಶೆ

ಸಾರ್ವಜನಿಕ ಆಸಕ್ತಿಯ ಮೊಕದ್ದಮೆಗಳಲ್ಲಿ ವ್ಯಕ್ತವಾಗುವ ಸುಪ್ರೀಮ್ ಕೋರ್ಟಿನ ಧೋರಣೆ ತೀವ್ರ ವಿಮರ್ಶೆಗೆ ಒಳಗಾಗಿದೆ.

ನಿರ್ದಿಷ್ಟತೆ ಮತ್ತು ಖಚಿತತೆ ಇಲ್ಲದ ನ್ಯಾಯಮೂರ್ತಿಗಳ ವೈಯಕ್ತಿಕ ಖಯಾಲಿಯೇ ಈ ತೀರ್ಪುಗಳಿಗೆ ಕಾರಣ ಎನ್ನಲಾಗುತ್ತದೆ.

ತುರ್ತುಪರಿಸ್ಥಿತಿಯಲ್ಲಿ ಪ್ರಜೆಯ ಮೂಲಭೂತ ಸ್ವಾತಂತ್ರ್ಯಗಳನ್ನು ಹರಣ ಮಾಡುವ ಅಧಿಕಾರ ಸರಕಾರಕ್ಕೆ ಇದೆ ಎಂದದ್ದು, ರಾಷ್ಟ್ರೀಯ ಭದ್ರತೆಯ ಆಧಾರದಲ್ಲಿ ಬಂಧಿಸುವ ಸರಕಾರದ ಪರಮಾಧಿಕಾರವನ್ನು ಸಮರ್ಥಿಸಿದ್ದು, ಸಂಸತ್ತು ಜಾರಿಯಲ್ಲಿದ್ದಾಗಲೇ ಸುಗ್ರೀವಾಜ್ಞೆ ಜಾರಿಗೊಳಿಸುವುದು ಸಕ್ರಮ ಎಂದು ಘೋಷಿಸಿದ್ದು, ಕಪ್ಪು ಹಣವನ್ನು ಪರಿವರ್ತಿಸುವುದು ನ್ಯಾಯಯುತ ಎಂದು ತೀರ್ಪು ನೀಡಿದ್ದು ಇದೇ ಸುಪ್ರೀಮ್ ಕೋರ್ಟು ಎನ್ನುವ ಅಂಶ ಅವರ ಮಾನವೀಯ, ಪ್ರಗತಿಪರ ದೃಷ್ಟಿಕೋನದ ಮಿತಿಯನ್ನು ಎತ್ತಿ ತೋರಿಸುತ್ತದೆ ಎನ್ನುವುದು ಗಮನಾರ್ಹ.

ಈಗಾಗಲೇ ವಿಚಾರಣೆಯಿಲ್ಲದೆ ಕೋರ್ಟುಗಳಲ್ಲಿ ಕೊಳೆಯುತ್ತಿರುವ ಮೊಕದ್ದಮೆಗಳ ಸಂಖ್ಯೆಯನ್ನು ಹೆಚ್ಚಿಸುತ್ತದೆ ಮತ್ತು ಗಂಭೀರತೆಯನ್ನು ಕಳಕೊಂಡು ಮೂಕರ್ಜಿಗಳ ನಿರ್ಣಯವೇ ಹೆಚ್ಚಾಗುವ ಅಪಾಯವಿದೆ ಎನ್ನುವ ಆರೋಪಕ್ಕೆ ನ್ಯಾಯಮೂರ್ತಿ ಭಗವತಿಯವರ ತೀಕ್ಷ್ಣವಾದ ಉತ್ತರ ಅರ್ಥಪೂರ್ಣವಾದುದು "ಸಕ್ಕರೆ ಮತ್ತು ಅಬ್ಕಾರಿ ದೊರೆಗಳಿಗೆ ಗ್ರಾಹಕರನ್ನು ಶೋಷಿಸಿ ತಮ್ಮ ಖಜಾನೆ ತುಂಬಿಸಿಕೊಳ್ಳುವ ಮೂಲಭೂತ ಹಕ್ಕು ಇರುವುದಾದರೆ ಸಮಾಜದ ಅತ್ಯಂತ ಕೆಳ ಸ್ಥಾನದಲ್ಲಿರುವ ಚಮ್ಮಾರರಿಗೆ ತಮ್ಮ ಬೆವರು ಮತ್ತು ಶ್ರಮದಿಂದ ಪ್ರಾಮಾಣಿಕ ಜೀವನ ನಡೆಸುವ ಮೂಲಭೂತ ಹಕ್ಕಿಲ್ಲವೆ?"* ಸಾರ್ವಜನಿಕ ಆಸಕ್ತಿಯ ಮೊಕದ್ದಮೆಗಳ ತೀರ್ಪುಗಳಲ್ಲಿ ಭ್ರಷ್ಟ, ದುಃಖಿತ, ಶೋಷಿತ, ದುರ್ಬಲ, ಆರ್ತ ಭಾರತದ ಮನೋಜ್ಞ ಚಿತ್ರಣವಿದೆ.

ಈ ತೀರ್ಪುಗಳ ಮೂಲಕ ದೇಶದ ಸರ್ವೋನ್ನತ ನ್ಯಾಯಾಲಯ ತನ್ನನ್ನೇ, ಆತ್ಮವಿಮರ್ಶೆಗೆ ಒಡ್ಡಿದೆ.

"ಇಡೀ ವ್ಯವಸ್ಥೆಯಲ್ಲಿ ಏನೋ ಗಂಭೀರವಾದ ದೋಷವಿದೆ. ಓರ್ವ ಬಂಧಿಯನ್ನು ವಿಚಾರಣೆ ಪ್ರಾರಂಭಿಸದೆಯೇ ಮೂರು ವರ್ಷ ಜೈಲಿನಲ್ಲಿಡುವ ಕಾನೂನು ಮತ್ತು ನ್ಯಾಯಾಂಗದ ವ್ಯವಸ್ಥೆಯನ್ನು ಯಾವುದೇ ನಾಗರಿಕ ಸಮಾಜ ಸಹಿಸಬಲ್ಲುದೇ?*

"ವಿಚಾರಣೆಯಿಲ್ಲದೆಯೇ ಮನುಷ್ಯರನ್ನು ವರುಷಗಳ ಕಾಲ ಪಂಜರದಲ್ಲಿಡುವಾಗಲೂ ವಕೀಲರು ಮತ್ತು ನ್ಯಾಯಾಧೀಶರು ಪ್ರತಿಭಟನೆಯ ಕಾಳಜಿಯನ್ನೇ ಕಳೆದುಕೊಳ್ಳುವಷ್ಟು ಅಮಾನುಷವಾಗಿಯೇ ನಮ್ಮ ನ್ಯಾಯಾಂಗ ವ್ಯವಸ್ಥೆ ಎನ್ನುವುದು ನಮಗೆ ಅರ್ಥವಾಗುತ್ತಿಲ್ಲ."*



* ನ್ಯಾಯಮೂರ್ತಿ ಭಗವತಿ, ಆಲ್ ಇಂಡಿಯಾ ರಿಪೋರ್ಟರ್ ೧೯೮೧. ಎಸ್.ಸಿ. ಪುಟ ೯೨೮.

# ಗೂಂಡಾ ಗುರು ಯಾರು?

ಮೂಲ : ಕೈಲಾಸ ಟಂಡನ್
ಅನುವಾದ : ಬಿ. ಆರ್. ಮಲ್ಲೇಗೌಡ

ಗೂಂಡಾ ಈ ಪದ ನಮ್ಮ ದೇಶದ ಎಲ್ಲ ಕಡೆಗಳಲ್ಲಿಯೂ ವಾಡಿಕೆಯಲ್ಲಿದೆ. ಈ ಪದವನ್ನು ಕೇಳಿದೊಡನೆ ಆಕಾರದಲ್ಲಿ ವಿಕೃತ ಮತ್ತು ವರ್ತನೆಯಲ್ಲಿ ದುರ್ಮಾರ್ಗಿಯಾಗಿರುವ ವ್ಯಕ್ತಿಯ ಚಿತ್ರ ಕಣ್ಣೆದುರು ಮೂಡುತ್ತದೆ. ಆಂಗ್ಲ ಶಬ್ದಕೋಶದಲ್ಲಿ ಈ ಪದಕ್ಕೆ ಕೆಟ್ಟ ಪ್ರವರ್ತನೆಯುಳ್ಳವನು, ದುರ್ಮಾರ್ಗಿ ಎಂಬ ಪದಗಳು ಕಾಣಸಿಗುತ್ತವೆ.

ಆದರೆ ಈ ಪದ ಪ್ರಚುರಗೊಂಡಿದ್ದು ಭಾರತದಲ್ಲಿ ಬಹಳ ಕಾಲ ಬೇರುಬಿಟ್ಟಿದ್ದ ಈಸ್ಟ್ ಇಂಡಿಯಾ ಕಂಪನಿಯವರಿಂದ.

ಈಸ್ಟ್ ಇಂಡಿಯಾ ಕಂಪನಿ ಟೀಪು ಸುಲ್ತಾನನ ಮೇಲೆ ಮಾಡಿದ ಯುದ್ಧದಲ್ಲಿ ಟೀಪು ಪರಾಭವಗೊಂಡ ನಂತರ ಕಂಪನಿ ಮೈಸೂರಿನ ಮೂಲ ಅರಸರಿಗೆ ಮೈಸೂರು ನಾಡನ್ನು ಒಪ್ಪಿಸಿತು. ಆಗ ಮೈಸೂರಿನ ರಾಜವಂಶದಲ್ಲಿ ರಾಜ್ಯಭಾರ ಮಾಡಬಲ್ಲ ಪ್ರಾಪ್ತವಯಸ್ಕರಾರೂ ಇಲ್ಲದ್ದರಿಂದ ಮಹಾರಾಣಿಯವರು ಆರು ವರ್ಷದ ಯುವರಾಜನಿಗೆ ಪಟ್ಟಕಟ್ಟಿ ದಿವಾನರನ್ನೂ ಮಂತ್ರಿಗಳನ್ನೂ ನಿಯಮಿಸಿಕೊಂಡು ರಾಜ್ಯಭಾರ ನಡೆಸುತ್ತಿದ್ದರು. ಹೀಗಾಗಿ ದಿವಾನರ ಕೈಸೇರಿ ರಾಜ್ಯದಲ್ಲಿ ಅಧಿಕಾರಿಗಳ ಸ್ವಾರ್ಥ ಹೆಚ್ಚಿತು. ಸುತ್ತಮುತ್ತಲ ಪಾಳೆಯಗಾರ ಸಾಮಂತರು ಈ ಸಂದರ್ಭವನ್ನು ಚೆನ್ನಾಗಿ ಉಪಯೋಗಿಸಿಕೊಂಡರು.

ಅರಣ್ಯ ಪ್ರಾಂತ್ಯದಲ್ಲಿನ ದುರ್ಗಗಳು ಈ ಪಾಳೆಗಾರರ ಸಾಮಂತರ ಸಂಸ್ಥಾನಗಳಾಗಿದ್ದವು. ಈ ಸಂಸ್ಥಾನಗಳು ಸಣ್ಣ ಸಣ್ಣ ಪಟ್ಟಣಗಳಂತೆ ತಮ್ಮಷ್ಟಕ್ಕೆ ತಾವೆ ಸಮೃದ್ಧಿ ಹೊಂದಿದ್ದವು. ವ್ಯಾಪಾರಿಗಳು ವೃತ್ತಿ ಕಲಾವಿದರು ಮೊದಲಾದವರೆಲ್ಲ ಈ ಸಂಸ್ಥಾನಗಳಲ್ಲಿ ವಾಸವಾಗಿರುತ್ತಿದ್ದರು. ಈ ಸಂಸ್ಥಾನದಲ್ಲಿರುವವರಿಗೆ ಬೇಕಾದ ಸರಕು ಸಾಮಗ್ರಿಗಳೆಲ್ಲ ಅಲ್ಲಿಯೇ ಹೇರಳವಾಗಿ ದೊರೆಯುತ್ತಲಿದ್ದು ಮೈಸೂರು ನಾಡು ಸಂಪತ್ತಿನ ಬೀಡಾಗಿತ್ತು.

ಸಂಸ್ಥಾನಾಧೀಶ ಪಾಳೆಗಾರನಿಗೆ ಏನಾದರೂ ಕೊರತೆ ಎನಿಸಿದಾಗ ಸುತ್ತಮುತ್ತಲ ಹಳ್ಳಿಗಳ ಮೇಲೆ ಬಿದ್ದು ದಾಳಿ ಮಾಡುತ್ತಿದ್ದರು. ಈ ಕಾರ್ಯದಲ್ಲಿ ಸಂಸ್ಥಾನದಲ್ಲಿನ ಜನರೂ ಭಾಗವಹಿಸಿ ತಮಗೆ ಬೇಕೆನಿಸಿದುದನ್ನೆಲ್ಲ ದೋಚುತ್ತಿದ್ದರು.

ನಾಡಿನ ಪರಿಪಾಲನೆ ಸರಿಯಾಗಿ ಸಾಗದಾಗ ಈ ದರೋಡೆ ಪ್ರವೃತ್ತಿಯ ಸಾಮಂತರೆಲ್ಲ ತಮ್ಮಷ್ಟಕ್ಕೆ ತಾವೇ ಮಹಾರಾಜರಂತೆ ವರ್ತಿಸ

ಹತ್ತಿದರು. ಅವರು ಲೂಟಿ ಮಾಡುವಾಗ ಕಾಳ್ಗಿಚ್ಚು, ಚೆನ್ನಲೆಗುಮ್ಮ ಎನ್ನುವ ವಿವಿಧ ಹೆಸರುಗಳಲ್ಲಿ ಸಂಚರಿಸುತ್ತಿದ್ದರು. ಇಂತಹ ಹಲವರಲ್ಲಿ "ಗೂಂಡಾ" ಎನ್ನುವವ ಹೆಚ್ಚು ಪ್ರವಾದಕರನಾದವನೆನಿಸಿಕೊಂಡಿದ್ದ. ಈತನೇ ಈ ಪದದ ಮೂಲಪುರುಷ.

ಈತನ ಹೆಸರು ಕೇಳಿದರೆ ಸಾಕು, ಹಳ್ಳಿಗರು ಗಡಗಡ ನಡುಗುತ್ತಿದ್ದರು. ಸುತ್ತ ಮುತ್ತಲ ಹಳ್ಳಿಗಳೆನ್ನದೆ ದೂರದ ಹಳ್ಳಿಗಳಲ್ಲಿಯೂ ಈತ ಲೂಟಿ ಮಾಡುತ್ತಿದ್ದ. ಪರಿಸ್ಥಿತಿಗೆ ತಕ್ಕಂತೆ ಬದಲಾವಣೆಗೊಂಡು ವ್ಯವಹರಿಸುವ ಚಾಕಚಕ್ಯತೆ ಆತನಲ್ಲಿತ್ತು.

ಈ ಗೂಂಡಾನ ಹಾವಳಿ ಹೆಚ್ಚಿದಂತೆ ಹಳ್ಳಿಗಳಲ್ಲಿ ಅಸಂತೃಪ್ತಿ ತಲೆಯೆತ್ತಿತು. ರಕ್ಷಣೆಗಾಗಿ ಮಹಾರಾಜರಿಗೆ ಮನವಿ ಸಲ್ಲಿಸಿದರು. ಗೂಂಡಾನ ಲಂಚದ ಸವಿಯುಂಡಿದ್ದ ಅಧಿಕಾರಿಗಳು ಈ ವಿಷಯವನ್ನು ತಲೆಗೆ ಹಾಕಿಕೊಳ್ಳುವುದಿಲ್ಲವೆಂದು ಮಹಾರಾಜರಿಗೆ ಹೇಳಿದರು. ಅಷ್ಟು ಹೊತ್ತಿಗೆ ಪ್ರಾಪ್ತ ವಯಸ್ಕರಾಗಿದ್ದ ಅವರನ್ನು ಭೋಗ ವಿಲಾಸಗಳ ಕಡೆಗೆ ಅಧಿಕಾರಿಗಳು ಎಳೆದಿದ್ದರು. ಆದರೂ ಪದೆ ಪದೆ ಬಂದ ಪ್ರಜೆಗಳ ಮನವಿಯನ್ನು ತಳ್ಳಿಹಾಕಲು ಸಾಧ್ಯವಾಗದೆ ಮಹಾರಾಜರ ಒತ್ತಾಯದಿಂದ ಗೂಂಡಾ ಬಂಧಿಸಲ್ಪಟ್ಟ, ಆದರೂ ಅವನ ಚಮತ್ಕಾರವಾದ ಮಾತಿನಿಂದಲೂ ಅಧಿಕಾರಿಗಳ ಹೊಗಳಿಕೆಯಿಂದಲೂ ಮಹಾರಾಜರಿಂದಲೇ ಅವನು ಸನ್ಮಾನಿಸಲ್ಪಟ್ಟ. ಇದರಿಂದಾಗಿ ಪ್ರಜೆಗಳಲ್ಲಿ ಪ್ರಭುತ್ವದ ಮೇಲೆ ದ್ವೇಷಭಾವನೆ ಬೆಳೆದು ಅರಸೊತ್ತಿಗೆಯ ಮೇಲೆ ತಿರುಗಿಬಿದ್ದರು.

ಗೂಂಡಾ ಈ ಅವಕಾಶವನ್ನು ಉಪಯೋಗಿಸಿಕೊಂಡು ತಿರುಗಿಬಿದ್ದ ಪ್ರಜೆಗಳೊಟ್ಟಿಗೆ ಕೈ ಬೆರೆಸಿದ. ಅಮಾಯಕ ಪ್ರಜೆಗಳು ಗೂಂಡಾ ಮಾಡಿದ ಕುಕೃತ್ಯಗಳನ್ನು ಮರೆತು ಅವನ ಬಗ್ಗೆ ಸಹಾನುಭೂತಿ ತೋರಿಸಿದರು. ಇದರಿಂದಾಗಿ ಗೂಂಡಾ ಪ್ರಜೆಗಳ ದಂಗೆಯ ಮುಖಂಡನಾದ.

ಮೈಸೂರು ರಾಜ್ಯವನ್ನು ಅರಸರಿಗೆ ಬಿಟ್ಟುಕೊಡುವಾಗ ಮಹಾರಾಣಿಯೊಂದಿಗೆ ಮಾಡಿಕೊಂಡಿದ್ದ ಒಪ್ಪಂದದಂತೆ ಕಂಪೆನಿ ಸರಕಾರದ ರೆಸಿಡೆಂಟ್ ಆಫೀಸರ್ ತನ್ನ ಸೈನ್ಯದೊಂದಿಗೆ ರಾಜ್ಯದಲ್ಲಿಯೇ ಇರುತ್ತಿದ್ದುದರಿಂದ ಈ ವಿಷಯವೆಲ್ಲ ಆತನಿಗೆ ತಿಳಿಯದೆ ಹೋಗಲಿಲ್ಲ.

ಗೂಂಡಾ ಕತ್ತಿ ಈಟಿಗಳಲ್ಲದೆ ಬಂದೂಕಿನಂತಹ ಆಧುನಿಕ ಆಯುಧಗಳನ್ನು ಹೊಂದಿದ್ದುದರಿಂದ ದಂಗೆ ಉಲ್ಬಣವಾಗುವ ಮುಂಚೆಯೇ ರೆಸಿಡೆಂಟ್ ಆಫೀಸರ್‌ನಿಂದ ಸುದ್ದಿ ಕೇಳಿದ ಆಗಿನ ಗವ್ರ್ನರ್ ಜನರಲ್ ವಿಲಿಯಂ ಬೆಂಟಿಂಕ್ ಈ ವಿಷಯದಲ್ಲಿ ತಲೆಹಾಕಬೇಕಾಯಿತು. ಕಂಪೆನಿ ಸರಕಾರ ಆಗ ಗೂಂಡಾ ಮತ್ತು ಅವನ ಅನುಯಾಯಿಗಳನ್ನು ಸದೆಬಡೆಯಿತು. ಗೂಂಡಾನ ಹಾವಳಿ ತಪ್ಪಿತು.

ಕ್ರಮೇಣ ರಾಜವಂಶಸ್ಥರು ದಕ್ಷ ಆಡಳಿತವನ್ನು ನಿರ್ವಹಿಸಿದರು.

ಗೂಂಡಾ ಸತ್ತು ಹೋಗಿ ಈಗ್ಗೆ ಸುಮಾರು ನೂರಾ ಐವತ್ತು ವರ್ಷಗಳು ಕಳೆದಿದ್ದರೂ ಅನೇಕರು ಅವನ ಹೆಸರಿನಲ್ಲಿ ಚಲಾವಣೆಯಲ್ಲಿದ್ದಾರೆ.



**ಬಾಟನಿ ಪ್ರೊಫೆಸರರೊಬ್ಬರು ಕಲಿಸುತ್ತಿದ್ದಾಗ ಯಾರೋ ಬಂದು ಹೇಳಿದರು: "ಫೈನಲ್‌ನಲ್ಲಿ ಕಲೀತಿದ್ದ ರಾಜು ಕಾರ್ ಡ್ರೈವ್ ಮಾಡ್ತಿದ್ದಾಗ ಗಿಡಕ್ಕೆ ಬಡಿದು ಸತ್ನಂತೆ."**

**"ಹೌದಾ! ಯಾವ ಜಾತಿಯ ಗಿಡ?" ಪ್ರೊಫೆಸರರು ಕೇಳಿದರು.**

ಇಂಡಿಯಂ ಪ್ರಪಂಚ ವಿಸ್ತರಿಸುತ್ತಿದೆ!

# ಹಸಿರು ಚಿನ್ನಕ್ಕೆ ಭಾರಿ ಬೆಲೆ

**ಟಿ. ಕೆ. ನಾಗಭೂಷಣ**

ಭಾರತದಿಂದ ಆಮದು ಮಾಡಿಕೊಳ್ಳಲಾದ ಅಚ್ಚ ನೀಲಿ ವರ್ಣದ ದ್ರೋಣಿ(ಇಂಡಿಗೋ)ಗೆ ಅನಾದಿ ಕಾಲದಿಂದಲೂ ಯೂರೋಪಿನಲ್ಲಿ ಬಹಳ ಬೆಲೆ ಸಿಗುತ್ತಿತ್ತು. ಕಾಮನ ಬಿಲ್ಲಿನ ನೀಲಿಯ ಜೊತೆ ಸ್ಪರ್ಧಿಸುವಷ್ಟು ಬಣ್ಣದ ನಿರ್ಮಲತೆ ಆದರಲ್ಲಿತ್ತು. ಬಟ್ಟೆ ಗಿರಣಿಗಳ ಮಾಲೀಕರು ತಾವು ನೇಯುವ ಉಣ್ಣೆ ಹಾಗೂ ಇತರೆ ದುಬಾರಿ ಅರಿವೆಗಳಿಗಾಗಿ ಬೇಕಾಗುತ್ತಿದ್ದ ಈ 'ವರ್ಣಗಳ ರಾಣಿ'ಯನ್ನು ಕೊಳ್ಳುವಾಗ ಎಷ್ಟೇ ದುಡ್ಡಾದರೂ ಹಿಂಜರಿಯುತ್ತಿರಲಿಲ್ಲ. ೧೮ನೇ ಶತಮಾನದ ಕಡೆಯಲ್ಲಿ ಬ್ರಿಟಿಷ್ ನೌಕಾದಳ ಯುರೋಪಿನಿಂದ ಭಾರತ ಹಾಗೂ ಮತ್ತಿತರೆ ದಕ್ಷಿಣಾದಿ ರಾಷ್ಟ್ರಗಳ ಸಮುದ್ರ ಮಾರ್ಗಗಳನ್ನು ಅಡ್ಡಗಟ್ಟಿದಾಗ ಇತರೆ ಸರಕುಗಳಂತೆ ನೀಲಿಯೂ ದುರ್ಲಭವಾಯಿತು. ಪರಂಪರೆಯಾಗಿ ಬಂದಿದ್ದ ಸಿಪಾಯಿಗಳ ಸಮವಸ್ತ್ರದ ಅಚ್ಚ ನೀಲಿ ಬಣ್ಣವನ್ನು ಜೋಪಾನವಾಗಿ ಒಂದೇ ತರಹ ಸಮರೂಪದಲ್ಲಿರಿಸಲು ಇಚ್ಛಿಸಿದ ನೆಪೋಲಿಯನ್. ಯುರೋಪಿನಲ್ಲಿ ಸಿಗುತ್ತಿದ್ದ 'ಕಚ್ಚಾ' ಪದಾರ್ಥಗಳಿಂದ ಈ ವರ್ಣದ ಪುಡಿಯನ್ನು ತಯಾರಿಸುವ ವಿಧಾನವನ್ನು ಕಂಡುಹಿಡಿಯುವವರಿಗೆಂದು ಹತ್ತು ಲಕ್ಷ ಫ್ರಾಂಕ್(ಆಗಿನ ಕಾಲಕ್ಕೆ ಬಹು ದೊಡ್ಡ ಬಹುಮಾನ)ಗಳನ್ನು ಕೊಡುವುದಾಗಿ ಸಾರಿದನು.

ನೀಲಿ ಬಣ್ಣದ ಬಗ್ಗೆ ಮೇಲಿನ ಕತೆಯನ್ನು ಉಲ್ಲೇಖಿಸಿದ ಉದ್ದೇಶವೇನೆಂದರೆ ಈ ಬಣ್ಣವೇ ೪೯ನೇ ಸಂಖ್ಯೆಯ ಮೂಲ ವಸ್ತುವಿಗೆ ಆ ಹೆಸರನ್ನು ಕೊಟ್ಟಿತು.

೧೮೬೩ನೇ ಇಸವಿಯಲ್ಲಿ ಜರ್ಮನಿಯ ಫ್ರೈಬರ್ಗ್ ಎಂಬ ಸಣ್ಣ ಹಳ್ಳಿಯೊಂದರಲ್ಲಿ ಪ್ರೊಫೆಸರ್ ರೈಕ್ ಮತ್ತು ಅವರ ಸಹಾಯಕ ರಿಕ್ಟರ್ ಸಾಕ್ಸೋನಿ ಪರ್ವತದಲ್ಲಿ ಸಿಗುವ ಕೆಲವು ಸತುವಿನ ಖನಿಜಗಳ ರೋಹಿತ ಸಮೀಕ್ಷೆ (Spectroscopic Studies) ನಡೆಸುತ್ತಿದ್ದರು. ಎರಡು ವರ್ಷಗಳ ಹಿಂದೆ ಕಂಡು ಹಿಡಿಯಲಾಗಿದ್ದ ಥಾಲಿಯಂ ಮೂಲವಸ್ತುವಿಗಾಗಿ ಅವರು ಹುಡುಕುತ್ತಿದ್ದರು. ಒಂದಾದ ಮೇಲೊಂದರಂತೆ ಸ್ಯಾಂಪಲ್‌ಗಳನ್ನು ವಿಶ್ಲೇಷಿಸುತ್ತಿದ್ದಾಗ್ಯೂ ಥಾಲಿಯಂನ ಹಚ್ಚ ಹಸಿರು ಗೆರೆಗಳನ್ನು ರೋಹಿತ (Spectrum)ದಲ್ಲಿ ಪತ್ತೆಮಾಡಲು ಅವರಿಂದ ಸಾಧ್ಯವಾಗಲಿಲ್ಲ. ಆದರೂ ಅಂದು ಅದೃಷ್ಟ ಅವರದಾಗಿದ್ದರಿಂದ ಅವರ ಶ್ರಮಕ್ಕೆ ಪ್ರತಿಫಲ ಸಿಕ್ಕಿತು. ಒಂದು ಸಪ್ತರಂಜನದಲ್ಲಿ ಅಚ್ಚ ನೀಲಿ ಬಣ್ಣದ ಗೆರೆಯನ್ನು ಗುರುತಿಸಿದರು. ಅಲ್ಲಿಯವರೆಗೆ ಕಂಡುಹಿಡಿದಿದ್ದರಲ್ಲಿ ಒಂದಾಗಿರದ ಹೊಸದೊಂದು ಮೂಲವಸ್ತು ಪತ್ತೆಯಾಗಿರುವುದನ್ನು ಆ ಇಬ್ಬರು ರಸಾಯನಶಾಸ್ತ್ರಜ್ಞರು ಸ್ಪಷ್ಟವಾಗಿ ಗ್ರಹಿಸಿಕೊಂಡರು. ಈ ಹೊಸ ಮೂಲವಸ್ತುವಿನ ಸಪ್ತರಂಜನ(ರಶ್ಮಿ ವರ್ಣ)ದ ರೇಖೆ ಅಚ್ಚ ನೀಲಿ ಬಣ್ಣದ್ದಾಗಿದ್ದುದರಿಂದ ಅದಕ್ಕೆ

'ಇಂಡಿಯಂ' ಎಂದೇ ಹೆಸರಿಟ್ಟರು.

ವಿಜ್ಞಾನಿಗಳಿಗೆ 'ಇಂಡಿಯಂ' ಲೋಹವನ್ನು ಬೇರ್ಪಡಿಸುವುದು ದೊಡ್ಡ ಸಮಸ್ಯೆಯಾಯಿತು. ಒಂದು ಸೀಸದ ಕಡ್ಡಿಯ ಆಕಾರ ಮತ್ತು ಗಾತ್ರದ ಇಂಡಿಯಂನ ಗಟ್ಟಿಯನ್ನು ತಯಾರಿಸಲು ಬಹಳ ಸಮಯವೇ ಹಿಡಿಯಿತು. ಸೀಸದ ಕಡ್ಡಿಯನ್ನು ನೋಡುವುದಕ್ಕೆ ಮಾತ್ರವೇ ಅಲ್ಲದೆ ಇತರೆ ರೀತಿಯಲ್ಲೂ ಹೋಲುತ್ತಿದ್ದ 'ಇಂಡಿಯಂ' ಅಸಾಧಾರಣವಾಗಿ ಮೃದುವಾದ ಲೋಹವಾಗಿತ್ತು. ಸೀಸಕ್ಕಿಂತ ಐದು ಪಟ್ಟು, ಚಿನ್ನಕ್ಕಿಂತ ಇಪ್ಪತ್ತು ಪಟ್ಟು ಮೃದುವಾಗಿತ್ತು. ಇಂಡಿಯಂನ ಸೀಸದ ಕಡ್ಡಿಯಿಂದ ಪೇಪರಿನ ಮೇಲೆ ಬರೆಯಬಹುದಾದರೂ ಹಾಗೆ ಮಾಡುವುದು ಕುಲುಮೆಯೊಂದನ್ನು ನೋಟುಗಳಿಂದ ಉರಿಸುವಷ್ಟೇ ಹಾಸ್ಯಾಸ್ಪದವಾಗುತ್ತದೆ. ಏಕೆಂದರೆ ಆಗಿನ ಕಾಲದಲ್ಲೇ, ಫ್ರೆಂಚ್ ಅಕಾಡೆಮಿ ಆಫ್ ಸೈನ್ಸ್, ಅದರ ಒಂದು ಗ್ರಾಂ ಬೆಲೆಯನ್ನು ೭೦೦ ಡಾಲರ್ (ರೂ. ೭೦೦೦) ಎಂದು ನಿರ್ಧರಿಸಿತ್ತು.

ಮತ್ತಿತರೆ ಅನೇಕ ಲೋಹಗಳಂತೆ ಬಹಳ ದಿವಸಗಳವರೆಗೆ ಇಂಡಿಯಂನ ಪ್ರಾಯೋಗಿಕ ಉಪಯುಕ್ತತೆ ಕಂಡುಬಂದಿರಲಿಲ್ಲ. ಅದಕ್ಕೆ ಮುಖ್ಯ ಕಾರಣಗಳು: ಇಂಡಿಯಂ ಅತಿ ಅಪರೂಪದ ಮೂಲವಸ್ತುವಾಗಿದ್ದು, ಭೂಮಿಯ ಪದರಗಳಲ್ಲಿ ಸಿಗುವ ಮೂಲವಸ್ತುಗಳಲ್ಲಿ ಪ್ರಮಾಣದ ಪ್ರಕಾರ ೭೦ನೇ ಸ್ಥಾನವನ್ನು ಪಡೆಯುತ್ತದೆ. ಜೊತೆಗೆ ಅದರ ಮೂಲ ಬಹಳವಾಗಿ ಹರಡಿದೆ. ನೈಸರ್ಗಿಕವಾಗಿ ಸಿಗುವ ಯಾವುದೇ ಖನಿಜದಲ್ಲಿ ಅದು ಮುಖ್ಯವಾದ ಘಟಕವಾಗಿಲ್ಲ ಅಥವಾ ಅನೇಕ ಘಟಕಗಳಲ್ಲಿ ಒಂದಾಗಿಯೂ ದೊರಕುವುದಿಲ್ಲ. ಹೆಚ್ಚೆಂದರೆ ಇತರೆ ಕೆಲವು ಲೋಹಗಳ ಅದುರಿನಲ್ಲಿ ಶೇಕಡಾ ೦.೦೫ ಗಿಂತ ಹೆಚ್ಚಾಗಿರುವುದಿಲ್ಲ. ಅಷ್ಟು ಅಲ್ಪ ಪ್ರಮಾಣದಲ್ಲಿ ಅದುರಿನಲ್ಲಿರುವ ಲೋಹವನ್ನು ಬೇರ್ಪಡಿಸುವುದರಲ್ಲಿ ಎಷ್ಟು ತೊಡರುಗಳಿರಬಹುದೆಂಬುದನ್ನು ಸುಲಭವಾಗಿ ಊಹಿಸಬಹುದು.

ಆದರೆ ಇಂಡಿಯಂನ ವಿಶೇಷ ಗುಣಗಳನ್ನು ಪಾರಿಭಾಷಿಕ ದೃಷ್ಟಿಯಿಂದ ನಿರ್ಲಕ್ಷಿಸುವಂತಹದ್ದಾಗಿರಲಿಲ್ಲ. ೧೯೨೪ರಲ್ಲಿ ಇಂಡಿಯಂ ಅದುರನ್ನು ಹುಡುಕಲು ಅಮೇರಿಕಾದ್ಯಂತ ಪ್ರಯಾಣ ಮಾಡಿದ ಅಮೇರಿಕದ ಇಂಜಿನಿಯರ್ ಮರ್ಫಿ ಈ ಮೂಲವಸ್ತುವನ್ನು ಸಣ್ಣ ಪ್ರಮಾಣದಲ್ಲಿ, ಆರಿಜೋನಾ ರಾಜ್ಯದ ಮರಳು ಗುಡ್ಡೆಗಳಲ್ಲಿ ಗುರುತಿಸಿದನು. ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಅಲ್ಲದಿದ್ದರೂ ಗಮನಾರ್ಹವಾದ ರೀತಿಯಲ್ಲಿ ಮಿಕ್ಕೆಲ್ಲ ಕಡೆಗಿಂತ ಹೆಚ್ಚಿಗೆ ಪ್ರಮಾಣದಲ್ಲಿ ದೊರೆತ ಕಾರಣ ಅಲ್ಲಿಯೇ ಇಂಡಿಯಂ ತಯಾರಿಸಲು ಕಾರ್ಖಾನೆಯೊಂದನ್ನು ಸ್ಥಾಪಿಸಲಾಯಿತು.

ಗಾಳಿಯಲ್ಲಿ ತೆರೆದಿಟ್ಟಾಗ ಇಂಡಿಯಂ ಬೆಳ್ಳಿಯಂತೆ ತನ್ನ ಹೊಳಪನ್ನು ಕಳೆದುಕೊಳ್ಳುವುದಿಲ್ಲ ಹಾಗೂ ತನ್ನ ಪ್ರತಿಫಲಕ ಅಂಶವನ್ನು (Reflection factor) ಉಳಿಸಿಕೊಂಡಿರುತ್ತದೆ. ಕಡೆಯ ಮಹಾಯುದ್ಧದಲ್ಲಿ ಜರ್ಮನ್‌ರ ಉಗ್ರ ವಿಮಾನ ದಾಳಿಯನ್ನು ಎದುರಿಸುವಾಗ ಇಂಡಿಯಂ ಬಹಳ ಮುಖ್ಯ ಪಾತ್ರ ವಹಿಸಿತೆಂಬುದನ್ನು ಇಲ್ಲಿ ಸ್ಮರಿಸಬಹುದು. ಅದರಿಂದ ಲಂಡನ್ ನಗರವನ್ನು ಸಂರಕ್ಷಿಸಲು ಸಹಾಯವಾಯಿತು. ವಿಮಾನಗಳನ್ನು ಬೆನ್ನಟ್ಟಿ ಹೋಗುವಾಗ ವಿಮಾನ ದಾಳಿಯಿಂದ ರಕ್ಷಣೆ ಪಡೆಯಲು ಬಳಸುವ ದೂರಾನ್ವೇಷಣ ದೀಪಗಳು ಬಹಳ ಪ್ರಕಾಶಮಾನವಾಗಿರುತ್ತಿದ್ದವು. ಬ್ರಿಟಿಷ್ ದ್ವೀಪಗಳ ಮೇಲೆ ಆವರಿಸಿಕೊಂಡಿರುತ್ತಿದ್ದ ಮಂಜನ್ನು ಭೇದಿಸಿಕೊಂಡು ಹೋಗುವಷ್ಟು ತೀಕ್ಷ್ಣವಾದ ಕಿರಣ ಅವುಗಳಿಂದ ಬರುತ್ತಿತ್ತು. ಇಂಡಿಯಂನ ದ್ರವೀಭವನ ಬಿಂದು ಕೇವಲ ೧೫೬° ಸೆಂ. ಆದ ಕಾರಣ ದೂರಾನ್ವೇಷಣ ದೀಪದ ದರ್ಪಣಗಳನ್ನು ತಣ್ಣಗಿಡಬೇಕಾಗಿತ್ತು. ಬ್ರಿಟಿಷ್ ಯುದ್ಧದ ಕಚೇರಿ ತಾನಾಗಿಯೇ ಅದಕ್ಕಾಗುವ ಖರ್ಚನ್ನು ವಹಿಸಿಕೊಳ್ಳಲು ಸಿದ್ಧವಾಗಿತ್ತು. ಗುಂಡಿಟ್ಟು ಕೆಳಗುರುಳಿಸಲ್ಪಟ್ಟ ಜರ್ಮನ್ ವಿಮಾನಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವುದನ್ನು ಗಣನೆಗೆ ತೆಗೆದುಕೊಂಡಾಗ ತಗಲುತ್ತಿದ್ದ ವೆಚ್ಚ ಸದ್ವಿನಿಯೋಗವಾಗುತ್ತಿತ್ತೆಂಬುದು ಬ್ರಿಟಿಷರಿಗೆ ಸಮಾಧಾನ ಕೊಟ್ಟಿತ್ತು.

ಕೆಲವೊಮ್ಮೆ ಕೆಳಮಟ್ಟದಲ್ಲಿಯ ದ್ರವೀಭವನ ಬಿಂದು ಲೋಹಗಳಲ್ಲಿನ ನ್ಯೂನತೆಯಾಗುವ ಬದಲಿಗೆ ಉಪಯೋಗಕ್ಕೆ ಬರುವ ಗುಣವಾಗುತ್ತದೆ. ಇಂಡಿಯಂ, ಬಿಸ್ಮತ್, ಸೀಸ, ತವರ ಮತ್ತು ಕ್ಯಾಡ್ಮಿಯಂನ ಮಿಶ್ರ ಲೋಹದ ಕರಗುವ ಬಿಂದು ಕೇವಲ ೪೬.೮° ಸೆ. ಆದುದರಿಂದಲೇ ಅದನ್ನು ಯಂತ್ರಗಳು ಅತಿಯಾಗಿ ಕಾಯುವುದರಿಂದ ರಕ್ಷಿಸಲು ಬಳಸುವ ಉಪಕರಣಗಳಲ್ಲಿ ಬಳಸುತ್ತಾರೆ. ಇಂಡಿಯಂ, ಗ್ಯಾಲಿಯಂ ಹಾಗೂ ತವರದ ಮಿಶ್ರ ಲೋಹದ ದ್ರವೀಭವನ ಬಿಂದು ೧೦.೬° ಸೆ. ಆದ ಕಾರಣ ಕೊಠಡಿಯ ಉಷ್ಣಾಂಶದಲ್ಲಿ ದ್ರವರೂಪದಲ್ಲಿರುತ್ತದೆ. ಇಂಡಿಯಂ ಮಿಶ್ರ ಲೋಹಗಳಿಂದ ಮಾಡಲಾದ ಫ್ಯೂಸ್‌ಗಳನ್ನು ಬೆಂಕಿಯ ವಿಪತ್ತನ್ನು ಸೂಚಿಸಿ ಎಚ್ಚರಿಸುವ ವ್ಯವಸ್ಥೆಯಲ್ಲಿ ಉಪಯೋಗಿಸುತ್ತಾರೆ.

ಇಂಡಿಯಂನ ಕೆಳಮಟ್ಟದ ದ್ರವೀಭವನ ಬಿಂದುವನ್ನು ಬಳಸಿಕೊಂಡು ಕುತೂಹಲಕರವಾದ ಅನೇಕ ಪ್ರಯೋಗಗಳನ್ನು ಕೆನಡಾದಲ್ಲಿ ನಡೆಸಲಾಯಿತು. ಈ ಲೋಹದ ಕಣಗಳ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾಗ ಕೆನಡಾದ ಭೌತಶಾಸ್ತ್ರಜ್ಞರು ಯಾವುದೋ ಒಂದು ಗಾತ್ರಕ್ಕಿಂಗ ಕಡಿಮೆಯಾದಾಗ ಕಣಗಳ ದ್ರವೀಭವನ ಬಿಂದು ಹಠಾತ್ತನೆ ಕಡಿಮೆಯಾಗುವುದನ್ನು ಕಂಡುಹಿಡಿದರು. ಈ ಅಸಾಧಾರಣ ಗುಣ ಸ್ವಾಭಾವಿಕವಾಗಿಯೇ ವಿಜ್ಞಾನಿಗಳ ಗಮನವನ್ನು ಸೆಳೆಯಿತು. ಬೆರಗುಗೊಳಿಸುವಷ್ಟು ಜ್ಞಾನ ಶೇಖರವಾಗಿದ್ದರೂ, ನವೀನ ಭೌತಶಾಸ್ತ್ರ ಸಹ ಈ ಗುಣವನ್ನು ವಿವರಿಸಲಾಗದಾಗಿದೆ. ದ್ರವೀಭವನ ಕ್ರಿಯೆಯ ನಿಯಮಗಳು, ಬಹುಶಃ ಗಮನಾರ್ಹವಾದ ದ್ರವ್ಯರಾಶಿಯುಳ್ಳ ವಸ್ತುಗಳಿಗೆ ಮಾತ್ರ ಅನ್ವಯಿಸುವುದು ಕಾರಣವಿರಬಹುದು. ಕೆನಡಾದ ಭೌತಶಾಸ್ತ್ರಜ್ಞರು ಪರಿಶೀಲಿಸಿದ ಲೋಹ ಅತ್ಯಲ್ಪ ಪ್ರಮಾಣ, ಅದರಲ್ಲೂ ಹಲವಾರು ಸಹಸ್ರ ಪರಮಾಣುಗಳಷ್ಟೇ ತೂಕದ್ದಾಗಿದ್ದಿತ್ತು.

ಇಂಡಿಯಂನ ಅಮೂಲ್ಯ ಗುಣಗಳಲ್ಲಿ ಸಮುದ್ರದ ನೀರು ಮತ್ತು ಸುಡುವ ತೀಕ್ಷ್ಣ ಕ್ಷಾರಗಳ ಪ್ರತಿಕ್ರಿಯೆಯ ನಿರೋಧಕ ಶಕ್ತಿಯೂ ಒಂದು. ಇಂಡಿಯಂನ ಅಂಶವನ್ನು ಹೊಂದಿರುವ ತಾಮ್ರದ ಮಿಶ್ರಲೋಹಗಳೂ ಅದೇ ಗುಣವನ್ನು ಪಡೆಯುತ್ತವೆ. ಈ ಮಿಶ್ರ ಲೋಹಗಳಿಂದ ಮಾಡಿದ ಹಡಗುಗಳ ಕೋಶಗಳು ಸಮುದ್ರದ ನೀರಿನಲ್ಲಿ ಹಾಳಾಗದಂತೆ ಬಹಳ ದಿನ ಬಳಕೆಗೆ ಬರುತ್ತವೆ.

ವಿಮಾನದ ಎಂಜಿನ್‌ಗಳಲ್ಲಿನ ಬೇರಿಂಗ್‌ಗಳು ಉಗ್ರತರವಾದ ಪರಿಸರದಲ್ಲಿ ಕೆಲಸ ಮಾಡುತ್ತವೆ. ಅದರಲ್ಲಿಯ ಕಾವು (Shaft) ನಿಮಿಷಕ್ಕೆ ಹಲವಾರು ಸಾವಿರ ಸುತ್ತು ತಿರುಗುವುದರಿಂದ ಉಷ್ಣತೆ ಹೆಚ್ಚುವುದಲ್ಲದೆ ಯಂತ್ರದ ಘರ್ಷಣೆಯನ್ನು ತಪ್ಪಿಸುವುದಕ್ಕೆ ಬಳಸುವ ಎಣ್ಣೆಯ ಕ್ರಿಯೆಯನ್ನು ನಿರೋಧಿಸುವ ಶಕ್ತಿ ಕ್ಷೀಣಿಸುತ್ತದೆ. ಬೇರಿಂಗ್‌ಗಳು ಸವೆಯುವುದನ್ನು ಕಡಿಮೆ ಮಾಡಲು ಇಂಡಿಯಂನ ತೆಳುವಾದ ಪದರವನ್ನು ಕೊಡಲು ವಿಜ್ಞಾನಿಗಳು ಸಲಹೆ ಕೊಡುತ್ತಾರೆ. ಯಂತ್ರದ ಭಾಗಗಳ ಉಜ್ಜುವ ಮೇಲ್ಮೈಯಲ್ಲಿ ಗಟ್ಟಿಯಾದ ಪದರವನ್ನು ನಿರ್ಮಿಸುವುದಲ್ಲದೆ ಇಂಡಿಯಂನ ಪರಮಾಣುಗಳು ಹಿನ್ನೆಲೆ ಲೋಹದ ಒಳಭಾಗವನ್ನು ಹೊಕ್ಕು ಗಡುತರವಾದ ಮಿಶ್ರ ಲೋಹವನ್ನು ರೂಪಿಸುತ್ತದೆ. ಯಂತ್ರದ ಘರ್ಷಣೆಯನ್ನು ತಪ್ಪಿಸುತ್ತದೆ. ಬಳಸುವ ಎಣ್ಣೆಯ ಕ್ರಿಯೆಯನ್ನು ನಿರೋಧಿಸುವ ಶಕ್ತಿಯನ್ನು ಇದು ಪಡೆದಿರುವುದಲ್ಲದೆ ಬೇರಿಂಗ್‌ಗಳ ಆಯುಷ್ಯವನ್ನು ಕಡೇ ಪಕ್ಷ ಐದು ಪಟ್ಟಿನಷ್ಟು ಹೆಚ್ಚಿಸುತ್ತದೆ.

ದಂತಶಾಸ್ತ್ರದಲ್ಲಿಯೂ ಇಂಡಿಯಂನ್ನು ಬಳಸಲಾಗುತ್ತಿದೆ. ಹಲ್ಲಿನ ರಂಧ್ರಗಳನ್ನು ತುಂಬುವಲ್ಲಿ ಅದರ ಮಿಶ್ರಲೋಹಗಳು (ಬೆಳ್ಳಿ, ತವರ, ತಾಮ್ರ ಮತ್ತು ಸತುವಿನೊಡನೆ) ಹೆಚ್ಚು ಬಲವಾಗಿ ನಿಲ್ಲುವುದರಿಂದಲೂ, ನಶಿಸುವುದನ್ನು ತಡೆಯುವ ನಿರೋಧಕ ಶಕ್ತಿಯನ್ನು ಹೊಂದಿರುವುದರಿಂದಲೂ ಅತ್ಯಂತ ಪ್ರಯೋಜಕವಾಗಿದೆ. ಈ ಮಿಶ್ರಲೋಹಗಳಲ್ಲಿರುವ ಇಂಡಿಯಂ ರಂಧ್ರಗಳನ್ನು ತುಂಬಿದ ಮಿಶ್ರಲೋಹ ಗಟ್ಟಿಯಾದಾಗ ಕುಗ್ಗುವುದನ್ನು ಕಡಿಮೆ ಮಾಡುತ್ತದೆ.

ವಿಮಾನದ ಮಾದರಿಗಳನ್ನು ತಯಾರಿಸುವ ಇಂಜಿನಿಯರುಗಳಿಗೆ ಸತುವು-ಇಂಡಿಯಂನ ಮಿಶ್ರ

ಲೋಹ ಬಹಳ ಉಪಯುಕ್ತವಾಗಿ ಕಂಡಿದೆ. ಮುಂದಕ್ಕೆ ನೂಕಲು ಸಹಾಯಕವಾದ, ತಿರುಗುವ ಅಲಗುಗಳುಳ್ಳ ಉಕ್ಕಿನ ಚಕ್ರ( Propeller ) ಗಳು ನಶಿಸುವುದನ್ನು ತಡೆಯಲು ಈ ಮಿಶ್ರ ಲೋಹದ ಪದರವನ್ನು ಕೊಡುತ್ತಾರೆ. ಅತ್ಯಂತ ತೆಳುವಾದ, ತವರ ಮತ್ತು ಇಂಡಿಯಂ ಆಕ್ಸೈಡಿನ ಮಿಶ್ರಲೋಹದ ಪದರ ಗಾಳಿಗೆ ವಿರುದ್ಧ ರಕ್ಷಣೆ ನೀಡುವುದರಲ್ಲಿ ನೆಚ್ಚಬಹುದಾಗಿದೆ. ಈ ರೀತಿಯ ಹೊದಿಕೆ ಅಡಿಯಲ್ಲಿ ಗಾಜು ಮಸುಕಾಗುವುದಿಲ್ಲ ಹಾಗೂ ಮಂಜುಗಡ್ಡೆ ಶೇಖರವಾಗದಂತೆ ತಡೆಗಟ್ಟುತ್ತದೆ. ನಿರ್ವಾತ (vacuum) ಇಂಜನಿಯರಿಂಗ್‌ನಲ್ಲಿ ಗಾಜು ಮತ್ತು ಗಾಜು–ಲೋಹಗಳನ್ನು ಬಂದು ಮಾಡಿ, ಜೋಡಿಸಿ ಬೆಸೆಯಲು ಇಂಡಿಯಂ ಮಿಶ್ರಲೋಹಗಳನ್ನು ಉಪಯೋಗಿಸುತ್ತಾರೆ.

ಇಂಡಿಯಂನ ಕೆಲವು ಮಿಶ್ರಲೋಹಗಳು ಸುಂದರವಾಗಿರುವುದರಿಂದ ಅವುಗಳಿಂದ ಆಭರಣಗಳನ್ನು ತಯಾರಿಸುತ್ತಾರೆ. ೭೫% ಚಿನ್ನ, ೨೦% ಬೆಳ್ಳಿ ಮತ್ತು ೫% ಇಂಡಿಯಂ ಹೊಂದಿರುವ ಮಿಶ್ರಲೋಹ 'ಹಸಿರು ಚಿನ್ನ'ವೆಂದು ಹೆಸರು ಪಡೆದಿದೆ. ಮೋಟಾರುಗಾಡಿಗಳಲ್ಲಿ ಹೊರತೆರೆದ ಭಾಗಗಳಿಗೆ ಮುಲಾಮು (plating) ಕೊಡುವುದಕ್ಕೆ ಕ್ರೋಮಿಯಂನಿಂದ ಇಂಡಿಯಂಗೆ ಬದಲಿಸುವುದರಲ್ಲಿ ಅಮೇರಿಕದ 'ಸ್ಟುಡ್‌ಬೇಕರ್' ಕಂಪೆನಿ ಮೊದಲಾಗಿದೆ. ಅದರಿಂದ ಭಾಗಗಳ ಬಾಳಿಕೆ ಗಮನೀಯವಾಗಿ ಹೆಚ್ಚಿದೆಯೆಂದು ವರದಿಯಾಗಿದೆ.

ಅಣುಶಕ್ತಿ ಕೇಂದ್ರಗಳಲ್ಲಿ ಇಂಡಿಯಂ ಲೋಹದ ತಗಡುಗಳನ್ನು ಉಷ್ಣಕ್ಕೆ ಸಂಬಂಧಪಟ್ಟ ನ್ಯೂಟ್ರಾನ್ ಸಾಮರ್ಥ್ಯ ಪ್ರವಾಹದ ತೀವ್ರತೆಯನ್ನು ಅಳೆಯಲು ಉಪಯೋಗಿಸುತ್ತಾರೆ. ಇಂಡಿಯಂನ ದೃಢವಾದ ಐಸೋಟೋಪ್‌ಗಳಲ್ಲಿ ಧನ ಮತ್ತು ಋಣ ವಿದ್ಯುದಂಶಗಳು ಸೇರಿ ಉಂಟಾದ ವಿದ್ಯುತ್ಕಣದ ಕೇಂದ್ರ (Nucleus) ಗಳೊಡನೆ ಡಿಕ್ಕಿ ಹೊಡೆದಾಗ ಶೂನ್ಯಕಣಗಳು (Nutron) ಸ್ವಯಂಪ್ರಭೆಯುಳ್ಳವನ್ನಾಗಿ ಮಾರ್ಪಡಿಸುತ್ತವೆ. ಅದರಿಂದ ಪರಿವರ್ತಿತವಾಗಿ ಹೊರಬೀಳುವ ಋಣ ವಿದ್ಯುತ್ತಿನ ಅವಿಭಾಜ್ಯ ಕಣಗಳ ರಶ್ಮಿಪ್ರಸಾರ( Electron radiation)ದ ವಿಕಿರಣ ಶಕ್ತಿ ಮತ್ತು ತೀವ್ರತೆ ಶೂನ್ಯಕಣಗಳ ಪ್ರವಾಹಕ್ಕೆ (Flux) ಅನುಗುಣವಾಗಿರುತ್ತದೆ.

ಆದರೆ ಎಲ್ಲಕ್ಕಿಂತ ಇಂಡಿಯಂನ ಹೆಚ್ಚಿನ ಉಪಯೋಗ ಅರ್ಧ ವಿದ್ಯುತ್‌ವಾಹಕ (Semi-conductor) ಗಳ ಕೈಗಾರಿಕೆಯಲ್ಲಿಯಾಗಿದೆ. ಜರ್ಮೇನಿಯಂ ಉತ್ತೇಜಕ (Amplifier) ಮತ್ತು ರೆಕ್ಟಿಫೈಯರ್‌ಗಳ ತಯಾರಿಕೆಯಲ್ಲಿ ಶುದ್ಧ ಇಂಡಿಯಂ ಅತ್ಯವಶ್ಯವಾಗಿದೆ. ಜರ್ಮೇನಿಯಂನ ಕುಂಡಿವಾಹಕತ್ವ (Hole conduction) ವನ್ನು ಭದ್ರಪಡಿಸುವುದರಲ್ಲಿ ಬೆರಕೆ (Impurity)ಯಾಗಿ ಇಂಡಿಯಂ ಉಪಯುಕ್ತವಾಗಿದೆ. ಹೀಗೆ ಬಳಸಲಾಗುವ "ಬೆರಕೆ" ಸ್ವತಃ ಬಹುಮಟ್ಟಿಗೆ ಶುದ್ಧವಾಗಿರಬೇಕು. ರಸಾಯನ ಶಾಸ್ತ್ರಜ್ಞರು ಅದರ ಶುದ್ಧತೆಯನ್ನು "ಆರು-ಒಂಭತ್ತು" ಶೇಕಡಾ (೯೯.೯೯೯೯)ಗಳಲ್ಲಿ ಸೂಚಿಸುತ್ತಾರೆ. ಇಂಡಿಯಂನ ಕೆಲವು ಸಂಯುಕ್ತ ಪದಾರ್ಥಗಳು ಸಲ್ಫೈಡ್ ಸೆಲೆನೈಡ್, ಆ್ಯಂಟಿಮೊನೈಡ್ ಮತ್ತು ಫಾಸ್ಫೈಡ್‌ಗಳು ಸಹ ಅರೆ ವಿದ್ಯುತ್‌ವಾಹಕಗಳಾಗಿವೆ. ಅವುಗಳನ್ನು ಉಷ್ಣ ಮಾಪಕಗಳಲ್ಲಿ ಬಳಸುವ ಜೋಡಿ (Thermo-couple) ಮತ್ತಿತರ ಸಾಧನಗಳಲ್ಲಿ ಉಪಯೋಗಿಸುತ್ತಾರೆ. ಬೆಚ್ಚನೆಯ ಉಷ್ಣತೆಯುಳ್ಳಂಥ ವಸ್ತುಗಳನ್ನು ಕತ್ತಲಲ್ಲಿ "ಕಾಣಲು" ಉಪಯೋಗಿಸುವ ರೋಹಿತ ಕಿರಣಗಳನ್ನು ಪತ್ತೆ ಹಚ್ಚುವ ಸಾಧನಗಳಿಗೆ ಇಂಡಿಯಂ ಆ್ಯಂಟಿಮೊನೈಡ್ ಮೂಲಭೂತ ಆಧಾರವಾಗಿದೆ.

ಬಾಹ್ಯಾಕಾಶಕ್ಕೆ ಕಳುಹಿಸಲ್ಪಟ್ಟ ಕೆಲವೇ ಮೂಲ ವಸ್ತುಗಳಲ್ಲಿ ಇಂಡಿಯಂ ಒಂದು. ನಿರವಯವ ಪದಾರ್ಥಗಳ ಕೈಗಾರಿಕೆಯಲ್ಲಿ ಹೊಸದೊಂದು ಅಧ್ಯಾಯಕ್ಕೆ ಮುನ್ನುಡಿಯನ್ನು ಬರೆಯುವುದರಲ್ಲಿದೆ–ಇಂಡಿಯಂ. ಸೋವಿಯತ್–ಅಮೇರಿಕದ ಬಾಹ್ಯಾಕಾಶ ಜಂಟಿ ಯೋಜನೆ ಸೋಯುಜ್–ಅಪೋಲೋವಿನ ೧೯೭೫ರ ಗಗನಯಾನಕ್ಕೆ ಮುಂಚೆ, ಟಾಸ್ ವಾರ್ತಾಸಂಸ್ಥೆಯ ಬಾತ್ಮೀದಾರರು ಮಾಡಿದ ಸಂದರ್ಶನದಲ್ಲಿ

ತಂಡದ ಮುಖ್ಯಸ್ಥರಾದ ಅಲೆಕ್ಸಿ ಲಿಯೊನೋವ್ ಮತ್ತು ಥಾಮಸ್ ಸ್ಟಾಫರ್ಡ್ ಕಕ್ಷೆಯಲ್ಲಿರುವ ಗಗನನೌಕೆಯೊಳಗೆ ಅಗತ್ಯವಾಗಿ ಮಾಡಬೇಕಾದ ಪ್ರಯೋಗಗಳಲ್ಲಿ ಲೋಹಗಳ ದ್ರವೀಕರಣ ಮತ್ತು ವಿವಿಧ ವಸ್ತುಗಳ ಹರಳುಗಳನ್ನು (Crystals) ಬೆಳಸುವುದರ ಮಹತ್ವವನ್ನು ವಿವರಿಸಿದ್ದರು. "ಹೊಸ ವಸ್ತುಗಳು, ಲೋಹಗಳು ಮತ್ತು ಅರ್ಧ ವಿದ್ಯುತ್ ವಾಹಕಗಳನ್ನು ಪತ್ತೆ ಮಾಡುವ ಸಾಧ್ಯತೆಯನ್ನು ಪರಿಶೀಲಿಸುತ್ತೇವೆ." ಎಂದಿದ್ದರು ಅಲೆಕ್ಸಿ ಲಿಯೊನೋವ್.

ಸೋವಿಯತ್ ಮತ್ತು ಅಮೇರಿಕದ ಗಗನ ಯಾನಿಗಳು ಭೂಮಿಯ ಮೇಲೆ ಕರಗಿಸಲಸಾಧ್ಯ ವಾದ ಪದಾರ್ಥಗಳನ್ನು ಬಾಹ್ಯಾಕಾಶದಲ್ಲಿ ಕರಗಿ ಸಬಹುದೆಂದು ನಂಬುತ್ತಾರೆ. ಹಾಗಯೇ ಉಷ್ಣತೆ ಯನ್ನು ನಿರೋಧಿಸುವ ಗುಣವನ್ನು ಹೊಂದಿ ರುವ ಪದಾರ್ಥಗಳನು (Refractories) ಸೃಷ್ಟಿಸಬಹುದೆಂದು ಹೇಳುತ್ತಾರೆ.

"ಸ್ಕೈಲ್ಯಾಬ್" ಠಾಣೆಯಲ್ಲಿದ್ದ ಅಮೇರಿಕದ ಗಗನಯಾನಿಗಳು ಇಂಡಿಯಂ ಆ್ಯಂಟಿಮೊನೈಡ್ ಹರಳುಗಳನ್ನು ಬೆಳೆಸುವ ಪ್ರಯೋಗಗಳನ್ನು ನಡೆಸಿ ಭೂಮಿಯ ಮೇಲೆ ಬೆಳೆಸಲು ಸಾಧ್ಯವಾಗ ದಿದ್ದ ಅತ್ಯಂತ ಸ್ವಚ್ಛ ಹಾಗೂ ಬಲವಾದ ಹರಳು ಗಳನ್ನು ಬೆಳೆಸುವುದರಲ್ಲಿ ಯಶಸ್ವಿಯಾದರು.

ತದನಂತರ ೧೯೭೮ರಿಂದ ೧೯೮೦ರ ಅವಧಿಯಲ್ಲಿ ತೆರಳಿದ ಬಾಹ್ಯಾಕಾಶ ನೌಕೆ ಸಾಲ್ಯುತ್–೬ ರ ನಾವಿಕರ ತಂಡ, ಇಂಡಿಯಂ' ಮತ್ತು ಅದರ ಸಂಯುಕ್ತ ವಸ್ತುಗಳನ್ನು ಒಳಗೊಂಡ ಹೊಸ ಪ್ರಯೋಗಗಳನ್ನು ನಡೆಸಿತು.

ಭೂಮಿಯ ಮೇಲೂ ಇಂಡಿಯಂ ಸಂಯುಕ್ತ ವಸ್ತುಗಳನ್ನೊಳಗೊಂಡ ಪ್ರಯೋಗಗಳು ಮುಂದುವರೆದವು. ವಾಯುಮಂಡಲದ ೩೦,೦೦೦ ಪಟ್ಟು ಹೆಚ್ಚಿನ ಒತ್ತಡಕ್ಕೆ ಒಳಪಡಿಸಿದಾಗ ಇಂಡಿಯಂ ಆ್ಯಂಟಿಮೊನೈಡ್ ತನ್ನ ಸ್ಫಟಿಕದ ಜಾಲಕ ರೂಪ (Crystalline lattice) ವನ್ನು ಬದಲಿಸುವುದರಿಂದ ಅದರ ವಿದ್ಯುತ್ ವಾಹಕ ಶಕ್ತಿ ಹತ್ತು ಲಕ್ಷ ಪಟ್ಟು ಏರುತ್ತದೆ ಎಂಬುದು ಪತ್ತೆಯಾಯಿತು.

ಇದುವರೆಗೆ ಪ್ರಪಂಚದಾದ್ಯಂತ ಇಂಡಿಯಂನ ವಾರ್ಷಿಕ ಉತ್ಪಾದನೆ ಕೇವಲ ಕೆಲವೇ ಡಜನ್ ಟನ್‌ಗಳಿಗಿಂತ ಹೆಚ್ಚಾಗಿಲ್ಲ. ಸತುವು, ಸೀಸ, ತಾಮ್ರ ಹಾಗೂ ತವರದ ಅದುರುಗಳನ್ನು ಪ್ರತಿ ಕ್ರಿಯೆಗಳಿಗೆ ಒಳಪಡಿಸುವಾಗ ಮುಖ್ಯ ಪದಾರ್ಥ ಗಳೊಡನೆ ಉತ್ಪತ್ತಿ ಹೊಂದುವ ಉಪ ಪದಾರ್ಥ ವಾಗಿ, ಬಹಳ ಅಮೂಲ್ಯವಾದ ಈ ಲೋಹ ವನ್ನು ಸಾಮಾನ್ಯವಾಗಿ ಪಡೆಯುತ್ತಾರೆ. ಸ್ಲೇಟು ಕಲ್ಲಿನಂತಿರುವ ಆದರೆ ಅದಕ್ಕಿಂತ ಮೃದುವಾದ, ತಾಮ್ರದ ಅಂಶವಿರುವ, ಒಂದು ಬಗೆಯ ಜೇಡಿ ಮಣ್ಣಿನ ಕಲ್ಲಿನಿಂದ ಇಂಡಿಯಂನ್ನು ತಯಾರಿಸಲು ಪೂರ್ವ ಜರ್ಮನಿಯ ವಿಜ್ಞಾನಿಗಳು ಕುತೂಹಲ ಕರವಾದ ವಿಧಾನ ಕ್ರಮವೊಂದನ್ನು ಸೂಚಿಸಿ ದ್ದಾರೆ. ಅದರ ಪ್ರಕಾರ ಮೇಲಿನ ಬಗೆಯ ಕಲ್ಲನ್ನು ಪುಡಿ ಮಾಡುವ ಕಾರ್ಖಾನೆಗಳಲ್ಲಿ ಶೇಖರ ವಾಗುವ ಧೂಳಿನಿಂದ ಇಂಡಿಯಂನ್ನು ಪಡೆಯ ಬಹುದು, ಗಂಧಕಾಮ್ಲವನ್ನು ಈ ಧೂಳಿನ ಮೇಲೆ ಹಾಯಿಸಿ ಜಟಿಲವಾದ ರಸಾಯನಿಕ ಕ್ರಿಯೆಗಳಿಗೆ ಒಳಪಡಿಸಿ ಶುದ್ಧವಾದ ಲೋಹವನ್ನು ಹೊರ ತೆಗೆಯಬಹುದು.

ಇಂಡಿಯಂನ ಬಗ್ಗೆ ಹೆಚ್ಚು ಹೆಚ್ಚು ತಿಳಿದು ಬಂದಂತೆ ಅದರ ಬಗ್ಗೆ ಆಸಕ್ತಿ ದಿನೇ ದಿನೇ ಹೆಚ್ಚುತ್ತಿದೆ. ಅದರ ಬೀಜಾಣು (Nucleus) ಫುಟ್‌ಬಾಲನ್ನು ಹೋಲುತ್ತದೆ ಹಾಗೂ ಅದರ ಸಮಭಾಜಕ ವೃತ್ತದ ಮೇಲೆ ಪಟ್ಟಿಯೊಂದು ಇರುವುದೆಂಬುದನ್ನು ಅಮೇರಿಕದ ಭೌತಶಾಸ್ತ್ರ ಜ್ಞರು ಕೆಲವೇ ವರ್ಷಗಳ ಹಿಂದೆ ಕಂಡುಹಿಡಿ ದಿದ್ದಾರೆ.

ನಿಸರ್ಗದಲ್ಲಿ ಇಂಡಿಯಂ ಲೋಹ ಅತಿ ಅಪ ರೂಪವಾಗಿ ದೊರೆಯುವುದಾದಾಗ್ಯೂ ಔದ್ಯೋ ಗಿಕವಾಗಿ ಅದರ ಪಾತ್ರ ವರ್ಷಗಳು ಕಳೆಯು ತ್ತಿದ್ದಂತೆ ಹೆಚ್ಚುತ್ತಾ ಹೋಗುವುದೆಂಬುದರಲ್ಲಿ ಸಂದೇಹವಿಲ್ಲ.



ಗಿರಿಜಾ ಶಂಕರ ಪಿಂಗಳೆ

# ಜಪಾನಿನಲ್ಲಿಯೂ ಹರಿಜನರಿದ್ದಾರೆಯೇ?

ಜಪಾನಿನಲ್ಲಿಯೂ ಹರಿಜನರಿದ್ದಾರೆಯೇ?" ಎಂದು ಯಾರಾದರೂ ನಿಮ್ಮನ್ನು ಕೇಳಿದರೆ ನೀವು ಖಂಡಿತವಾಗಿ ತಬ್ಬಿಬ್ಬಾಗುತ್ತೀರಿ. "ಛೇ ಛೇ ಏನು ನನ್ನನ್ನೇ ತಮಾಷೆ ಮಾಡುತ್ತಿದ್ದೀರಾ? ಜಪಾನ್ ಅಂದರೇನು? ಅದು ಎಷ್ಟು ಮುಂದುವರಿದ ದೇಶ! ಅಲ್ಲಿನ ಕಾರು, ಟೇಪ್ ರೆಕಾರ್ಡರು, ಟಿ.ವಿ., ಕೈಗಡಿಯಾರಗಳು ಎಷ್ಟು ಚೆನ್ನಾಗಿರುತ್ತವ! ಎರಡು ಆಟಂ ಬಾಂಬುಗಳು ಬಿದ್ದು ಅರ್ಧ ರಾಷ್ಟ್ರ ನೆಲಸಮವಾದರೂ ಮೂವತ್ತೇ ವರ್ಷಗಳಲ್ಲಿ ಹೇಗೆ ಮುಂದೆ ಬಂದಿದ್ದಾರೆ. ಅವರು ಈಗೇನು ಜಪಾನೀಯರು ಅಮೇರಿಕದವರನ್ನೇ ವ್ಯಾಪಾರದ ಯುದ್ಧದಲ್ಲಿ ಸೋಲಿಸಿ ಬಿಡೋ ತರಹ ಇದ್ದಾರೆ. ಅಲ್ಲಿನ ಜನ ಎಷ್ಟು ಬುದ್ಧಿವಂತರು? ಅವರ ಕಾರ್ಯ ತತ್ಪರತೆ ಎಷ್ಟು ಉನ್ನತ ಮಟ್ಟದಲ್ಲಿದ? ಅಂತಹ ಜನರಲ್ಲೂ ನಮ್ಮಲ್ಲಿರೋ ತರಹ ಹರಿಜನರಿದ್ದಾರೆಯೇ ಅಂತ ಕೇಳ್ತಾ ಇದ್ದೀರಲ್ಲಾ? ಏನು ಹುಡುಗಾಟ ಆಡ್ತಾ ಇದ್ದೀರಾ?" ಎಂದು ನೀವು ನನ್ನ ಮೇಲೆ ಹರಿಹಾಯುವುದು ಸಹಜವೇ. ನಿಮಗೇ ಏಕೆ ಇಡೀ ಜಗತ್ತಿಗೇ ಜಪಾನಿನ ಬಗ್ಗೆ ಈ ಬಗೆಯ ಕಲ್ಪನೆ ಇದೆ. ಆದರೆ ಪ್ರತಿ ದೀಪದ ಹಿಂದೆಯೇ ಕತ್ತಲಿರೋ ಹಾಗೆ ಜಪಾನಿನಂತಹ ಮುಂದುವರೆದ ದೇಶದಲ್ಲೂ ಹರಿಜನ-ಸಮಾನ ಜನರಿರುವ ಸೂರ್ಯ ಚಂದ್ರರಷ್ಟೇ ಸತ್ಯ.

ಮುಖ ಚಹರೆ, ವೇಷ ಭೂಷಣಗಳಲ್ಲಿ ಮಿಕ್ಕ ಯಾವನೇ ಜಪಾನೀಯನಿಗಿಂತ ಭಿನ್ನವಾಗಿ ಕಾಣದ ಈ ನತದೃಷ್ಟ ವರ್ಗ ತನ್ನನ್ನು 'ಬುರಕೂಮಿನ್' (ಹೊಲಗೇರಿ ಜನ (Ghetto people) ಎಂದು ಕರೆದುಕೊಳ್ಳುತ್ತದೆ. ಆದರೆ ಸರಕಾರ ಇವರನ್ನು 'ದೊವಾ' (ಅಸಮ್ಮಿಳಿತ ಅಲ್ಪಸಂಖ್ಯಾತರು) ಎಂದು ಸಂಬೋಧಿಸುತ್ತದೆ ಜನಸಾಮಾನ್ಯರ ಪಾಲಿಗಂತೂ ಇವರು 'ಎತಾ'ರೇ! (ಅಸ್ಪೃಶ್ಯ, ಹೊಲೆಯ, ಮ್ಲೇಚ

ಯುವ). ಅಮೇರಿಕದ ನಿಗ್ಗರ್ (ಕರಿಯ), ಉತ್ತರ ಭಾರತದ ಚೋತಿಯಾ, ದಕ್ಷಿಣ ಭಾರತದ ಶೂದ್ರ ಮುಂತಾದ ಪದಗಳಂತೆ, ಎತಾ ಸಹ ಜಪಾನಿನ ರಾಜಕೀಯ–ಸಾಮಾಜಿಕ ಅಸಹಿಷ್ಣುತೆಯ ದ್ಯೋತಕವಾಗಿದೆ.

ನಮ್ಮ ಹರಿಜನರಿಗೆ ಹೋಲಿಸಿದರೆ, ಬುರಕೂಮಿನ್ನರು ಬಹಳ ಇತ್ತೀಚಿನವರು. ಇವರ ಉಗಮವನ್ನು ನಾವು ಹದಿನೇಳನೇಯ ಶತಮಾನದ ಆದಿ ಭಾಗದಲ್ಲಿ ಕಾಣ ಬಹುದು. ಜಪಾನಿನ ರಾಜ್ಯಾಡಳಿತವನ್ನು ಟೋಕುಗುವಾ ಮನೆತದ ಪಾಳೆಗಾರರು ವಹಿಸಿಕೊಂಡು, ನಮ್ಮ ವರ್ಣ ಪದ್ಧತಿಯನ್ನು ಹೋಲುವ ಬಿಗಿ ಸಮಾಜದ ಪುನರ್ರಚನೆಯನ್ನು ಕೈಗೊಂಡಾಗ ಈ ಬುರಕೂಮಿನ್ನರು ಉದ್ಭವವಾದರು. ಯೋಧ ಸಮುದಾಯಗಳು ಅಂದಿನ ಸಾಮಾಜಿಕ ವ್ಯವಸ್ಥೆಯ ಶೃಂಗದಲ್ಲಿದ್ದರೆ, ರೈತ-ಕುಶಲಕರ್ಮಿಗಳು ಹಾಗೂ ವ್ಯಾಪಾರಿ ವರ್ಗ ತದನಂತರದ ಎರಡು ಶ್ರೇಣಿಗಳನ್ನು ಆಕ್ರಮಿಸಿಕೊಂಡರು. ಈ ಮೂರೂ ವೃತ್ತಿಗಳಿಗೆ ಸೇರದವರು 'ಬುರಕು'ಗಳಾದರು. ಬೌದ್ಧ ಧರ್ಮದ ಅಹಿಂಸೆಯ ಸಾತ್ವಿಕ ಹಿನ್ನೆಲೆಯಲ್ಲಿ, ಪ್ರಾಣಿಗಳನ್ನು ಕೊಲ್ಲುವ ಕಟುಕರು, ಅವುಗಳ ಚರ್ಮವನ್ನು ಸುಲಿಯುವ, ಅದರಿಂದ ಪಾದರಕ್ಷೆಗಳನ್ನು ತಯಾರಿಸುವ ಚಮ್ಮಾರರು, ಮುಂತಾದ (ಅಂದಿನ ಸಾಮಾಜಿಕ ದೃಷ್ಟಿಯಲ್ಲಿ) ನೀಚ ವೃತ್ತಿಗಳನ್ನು ಕೈಗೊಂಡವರು 'ಬುರಕು'ಗಳಾದರು. ಜಪಾನಿನ ಉದಾರವಾದಿ ಮೈಜಿ ಚಕ್ರವರ್ತಿಯು ಕ್ರಿಸ್ತಶಕ ೧೮೭೧ರಷ್ಟು ಹಿಂದೆಯೇ, 'ಎತಾ' ಎಂಬ ಅವಹೇಳನಕರ ಶಬ್ದದ ಬಳಕೆಯನ್ನು ನಿಷೇಧಿಸಿ, ಎಲ್ಲಾ ಜಪಾನೀಯರ ನಡುವೆ ಸಮಾನತೆ ಇದೆಯೆಂದು ಘೋಷಿಸಿದ್ದನು. ಆದರೆ, ಜಾತಿವಾದಿ, ಸಂಪ್ರದಾಯವಾದಿ ಜಪಾನೀ ಸಮಾಜದಲ್ಲಿ 'ಎತಾ'ದ ಬಳಕೆ ಇನ್ನೂ ನಿಂತಿಲ್ಲ.




"ಅಯ್ಯ, ನಿಮ್ಮ ಕಾಳ ಇಂಜನೀಯರ ಬುದ್ಧಿಗೆ ಬೆಂಕಿ ಹಾಕ್ಲಿ. ಮಗು ಬಿಲ್ಲು ಮಾಡಿಕೊಡಲು ಕೇಳಿದರೆ, ಎಷ್ಟು ಪರ್ಸೆಂಟೇಜ್ ಕೊಡ್ತೀಯೋ ಅಂದ್ರಂತಲ್ಲ."

'ಬುರಕು ವಿಮೋಚನಾ ಸಂಘ'ದ ಅಂದಾಜಿನಂತೆ ಇಂದು ಜಪಾನಿನಲ್ಲಿ ಶೇಕಡಾ ೫ರಷ್ಟು (ಸುಮಾರು ೩,೦೦೦,೦೦೦) ಬುರಕುಗಳಿದ್ದಾರೆ. ಇವರಲ್ಲಿ ಬಹುತೇಕ ಮಂದಿ ಟೋಕಿಯೋ, ಒಸಾಕ, ಕ್ಯೋಟೋ ಮುಂತಾದ ಮಹಾನಗರಗಳಲ್ಲಿನ ಸುಮಾರು ೬,೦೦೦ ಹೊಲಗೇರಿಗಳಲ್ಲಿ ವಾಸಮಾಡುತ್ತಿದ್ದಾರೆ. ಆದರೆ, ಸರಕಾರದ 'ದೋವಾ' ವಿಭಾಗದ ಇತ್ತೀಚೆಗೆ ನಡೆಸಿದ ಜನಗಣತಿಯಲ್ಲಿ ಕೇವಲ ೧,೨೦೦,೦೦೦ ದೋವಾರ ಲೆಕ್ಕ ಮಾತ್ರ ಸಿಕ್ಕಿದೆ. ಈ ದೊಡ್ಡ ವ್ಯತ್ಯಾಸಕ್ಕೆ ಕಾರಣಗಳೇನೂ ಇಲ್ಲದಿಲ್ಲ. ಘೋರ ಸಾಮಾಜಿಕ ರಾಜಕೀಯ ತಾರತಮ್ಯವನ್ನು ತಪ್ಪಿಸಿಕೊಳ್ಳಲು ಬಹುತೇಕ ಬುರಕುಗಳು ತಮ್ಮ ನಿಜ ಮೂಲವನ್ನು ಎಣಿಕೆದಾರರಿಂದ ಮುಚ್ಚಿಡುವುದು ಉಂಟು. ಅಮೇರಿಕದ ನೀಗ್ರೋಗಳಿಗಿಂತ, ಇಲ್ಲಿ ಬ್ರಿಟನ್ನಿನ ಭಾರತೀಯ ಸಂಜಾತರಿಗಿಂತ ಈ ಬಗೆಯ ಮರೆಮಾಚಿಕೆ ಬುರುಕು. ಕ್ಷಮಿಸಿ 'ದೋವಾ'ರಿಗೆ

ಬಹಳ ಸುಲಭ. ಆದರೆ, ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದರೆ ಬೇರೆಯವರಿಗೇನೂ ಗೊತ್ತಾಗುವುದಿಲ್ಲವೇ? ಹಾಗೆಯೇ ಇವರ ಪಾಡು ಬಹು ಪ್ರಸಿದ್ಧ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗಳಿಗಾಗಿ ಅರ್ಜಿ ಹಾಕಿಕೊಂಡಾಗ ಅಥವಾ ವಿವಾಹ ಸಂಬಂಧ ಬೆಳೆಸಲು ಪ್ರಯತ್ನಿಸಿದಾಗ, ಖಾಸಗಿ ಪತ್ತೇದಾರರು ಇವರ ಕುಲಗೋತ್ರಗಳನ್ನು ಜಾಲಾಡಿಸಿ, ಇವರ ನಿಜ ಸ್ವರೂಪವನ್ನು ಹೊರಗೆಡವುತ್ತಾರೆ.

ಹೀಗಾಗಿ ಇವರಿಗೆ ಒಳ್ಳೆಯ ಉದ್ಯೋಗಾವಕಾಶಗಳೂ, ಇತರ ಸಾಮಾಜಿಕ ವರ್ಗಗಳೊಂದಿಗೆ ಬೆರೆಯುವಿಕೆಗಳೂ ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ. ಹೀಗಾಗಿ ಇವರ ಔದ್ಯೋಗಿಕ-ಸಾಮಾಜಿಕ ಚಲನವಲನಗಳು ಕೇವಲ ಅವರವರ ಹೊಲಗೇರಿಗಳಿಗೇ ಸೀಮಿತವಾಗಿದೆ. ಇವರಲ್ಲಿ ಬಹುತೇಕ ಮಂದಿ ಬುಟ್ಟಿ ಹೆಣಿಕೆ, ಹೊಲಿಗೆ, ಚಮ್ಮಾರಿಕೆ ಮುಂತಾದ ಅಲ್ಪ ಆದಾಯ ತರುವ ಗೃಹ ಕೈಗಾರಿಕೆಗಳಲ್ಲಿ ನಿರತರಾಗಿದ್ದಾರೆ. ಇವರ ಪರಿಣಾಮ ಎಷ್ಟು ಭೀಕರವಾಗಿದೆ ಎಂದರೆ ಪ್ರತಿ ಐದು ದೊವಾ ಕುಟುಂಬಗಳಲ್ಲಿ ಒಂದಕ್ಕೆ ಸರಕಾರ ಧನಸಹಾಯ ನೀಡಿ ಜೀವನಾಧಾರ ಕೊಡಬೇಕಾಗಿದೆ.

ದೊವಾರ ಪರಿಸ್ಥಿತಿ ಸುಧಾರಿಸಲು ಜಪಾನ್ ಸರಕಾರ ೧೯೬೯ರಲ್ಲಿ ಸುಮಾರು ೫.೦೦೦ ಕೋಟಿ ರೂಪಾಯಿ ಸಮಾನದ ದಶವಾರ್ಷಿಕ ಯೋಜನೆಯೊಂದನ್ನು ರೂಪಿಸಿತ್ತು. ಇವರ ಉದ್ಯೋಗ, ವಸತಿ, ಶಿಕ್ಷಣ, ಹಾಗೂ ಆರೋಗ್ಯವನ್ನು ಸುಧಾರಿಸುವ ಯೋಜನೆಯೇನೋ ನಮ್ಮ ಪಂಚವಾರ್ಷಿಕ ಯೋಜನೆಗಳಂತೇ ಭವ್ಯವಾಗಿದ್ದವು. ಆದರೆ ೧೫ ವರ್ಷಗಳಲ್ಲಿ ನಿಜವಾಗಿ ಸಾಧಿಸಿದ ಪರಿಣಾಮ ಮಾತ್ರ ಶೂನ್ಯ. ಅದಕ್ಕಾಗಿಯೇ ಈ ವರ್ಷದ ಮಾರ್ಚ್ ೩೧ ರಂದು ಈ ಯೋಜನೆ ಅಂತ್ಯಗೊಳ್ಳುತ್ತಿದ್ದಂತೆಯೇ ಮತ್ತೊಂದು ಪಂಚವಾರ್ಷಿಕ ಯೋಜನೆಯನ್ನು ತರಾತುರಿಯಲ್ಲಿ ಜಾರಿಗೆ ತರಲಾಯಿತು. ಈ ಸಲ ದೊವಾರ ಜೀವನ ಮಟ್ಟವನ್ನು ಮಿಕ್ಕಿತರ ಜಪಾನೀಯರ ಸಮಕ್ಕೆ ತರಲು ಪ್ರಯತ್ನಿಸಲಾಗುತ್ತಿದೆ.

ಇಷ್ಟು ಅಗಾಧ ಪ್ರಮಾಣದ ಯೋಜನೆಗಳ ಫಲ ದೊವಾರಿಗೆ ತಲಪದಿರಲು ಕಾರಣಗಳು ಇಲ್ಲದೇ ಇಲ್ಲ. ನಮ್ಮಲ್ಲಿನ ಹರಿಜನರಂತೆ, ದೊವಾರು ಸಹ ಜಪಾನಿನ ಆಡಳಿತ ಪಕ್ಷ-ವಿರೋಧಿ ಪಕ್ಷಗಳ ರಾಜಕೀಯ ಸೆಣಸಾಟದಲ್ಲಿ ಚದುರಂಗದ ಕಾಯಿಗಳಾಗಿದ್ದಾರೆ. ದೊವಾರ ಉದ್ಧಾರಕ್ಕಾಗಿ ಆಡಳಿತ ಪಕ್ಷ ವಿರೋಧಿ ಪಕ್ಷಗಳೆರಡೂ ಕಂಕಣಬದ್ಧರಾಗಿದ್ದಾರೆ. ಆದರೆ, ಸವರ್ಣೀಯರ ವಿರೋಧ ಕಟ್ಟಿಕೊಳ್ಳುವ ಈ ಬಗೆಯ ಶಾಸನವನ್ನು ಯಾರು ಮಂಡಿಸಬೇಕೆಂಬುದರ ಬಗ್ಗೆ ಪರಸ್ಪರ ದೋಷಾರೋಪಣೆ ಕೇಳಿ ಬರುತ್ತಲೇ ಇದೆ. ಆದ್ದರಿಂದಲೇ, ದೊವಾರಿಗೆ ಭವ್ಯ ಗಾಳಿ ಗೋಪುರಗಳೂ ಬಾಯುಪಚಾರಗಳೂ ವಿಪುಲವಾಗಿ ದೊರೆಯುತ್ತಿವೆ.

ಈ ಬಗೆಯ ಸಮಸ್ಯೆ ಇಂದು ಜಪಾನಿನಲ್ಲಿ ಕೇವಲ 'ದೋವಾ'ರನ್ನು ಮಾತ್ರ ಕಾಡುತ್ತಿಲ್ಲ. ನಮ್ಮ 'ಮುಂಡಾ' ಗಿರಿಜನರಂತೆ, ಜಪಾನಿನ ಮೂಲ ಪುರುಷರೆನ್ನಲಾದ ಐನು ಜನಾಂಗ (ಜನಸಂಖ್ಯೆ ೧೫,೦೦೦), ಸುಮಾರು ಐವತ್ತು ವರ್ಷದ ಹಿಂದೆ ಜಪಾನಿನ ಕೈಗಾರಿಕೆಗಳಲ್ಲಿ ದುಡಿಯಲು ಕರೆತಂದ ಕೋರಿಯಾದ ಜೀತದಾಳುಗಳು, ಮತ್ತವರ ಸಂಸಾರ (೭೦,೦೦೦), ವಿಯತ್ನಾಮಿನ ಶರಣಾರ್ಥಿಗಳು (೭೦,೦೦೦) ಇಂದಿಗೂ ದುರ್ಭರ ಜೀವನ ನಡೆಸುತ್ತಿದ್ದಾರೆ. ತಮಗೆ ಎಷ್ಟೇ ಕುಶಲತೆ, ಜಾಣ್ಮೆಗಳಿರಲಿ, ಜಾತ್ಯಾಭಿಮಾನ ಜಪಾನಿ ಸಮಾಜದಲ್ಲಿ ಈ ಬಗೆಯ ದುರ್ಬಲ ವರ್ಗದವರು ಮುಂಬರಲಾಗುತ್ತಿಲ್ಲ; ಬಹುಶಃ ಅವರು ಮುಂದೆ ಬರಲಾರರು ಕೂಡ ಮಹಾಭಾರತದ ಕರ್ಣ, ಏಕಲವ್ಯರಂತೆ. ◆



# ಎರಡು ಪತಂಗಗಳು

**ಧ್ಯೇಯವಾದಿ ಮತ್ತು ಸುಖವಾದಿಗಳ ಮನೋವೃತ್ತಿಯಲ್ಲಿ ಕಂಡು ಬರುವ ವಿರೋಧವನ್ನು ಸೂಚಿಸುವ ಒಂದು ರೂಪಕ ಕಥೆ ಇದು. ಎರಡೂ ಪತಂಗಗಳೇ. ಆದರೆ ಜೀವನದ ಬಗ್ಗೆ ಇರುವ ತತ್ತ್ವಜ್ಞಾನದಲ್ಲಿ ಎಂಥ ಅಂತರ!**

**ಮೂಲ : ವಿ. ಸ. ಖಾಂಡೇಕರ**
**ಕನ್ನಡಕ್ಕೆ : ಪಾಂ. ದಾ. ಶಹಾಣೆ**

ಒಂದು ಪತಂಗ ಗೂಟಕ್ಕೆ ನೇತಾಡುತ್ತಾ ಇತ್ತು. ಇನ್ನೊಂದು ಪತಂಗ ದೀಪದ ಸುತ್ತ ಕುಣಿದಾಡುತ್ತಾ ಇತ್ತು. ಮೇಲಿನ ಪತಂಗದಿಂದ ಧ್ವನಿ ಹೊರಟಿತು: "ಪತಂಗ". ಅಗ್ನಿಗೆ ಪ್ರದಕ್ಷಿಣೆ ಹಾಕುತ್ತಿರುವ ಋತ್ವಿಜನಂತೆ ದೀಪದ ಸುತ್ತಲೂ ಪ್ರದಕ್ಷಿಣೆ ಹಾಕುತ್ತಿರುವ ಚಿಕ್ಕ ಪತಂಗವು ಆ ಧ್ವನಿಯನ್ನು ಕೇಳಿ ಒಮ್ಮೆಲೇ ನಿಂತು ತಲೆಯೆತ್ತಿ ಮೇಲೆ ನೋಡಿತು. ಗೂಟದ ಮೇಲಿದ್ದ ಪತಂಗ ಹೇಳಿತು: "ಹುಚ್ಚು, ಹುಚ್ಚನಂತೆ ದೀಪದ ಸುತ್ತಲೂ ಕುಣಿಯಬೇಡ."

ಚಿಕ್ಕ ಪತಂಗ ನಕ್ಕು ಕೇಳಿತು "ಹುಚ್ಚ ಯಾರು? ನಾನೋ? ನೀನೋ?"

ದೊಡ್ಡ ಪತಂಗ ಸಿಟ್ಟಿಗೆದ್ದು ಹೇಳಿತು: "ನಾನೂ ಪತಂಗ. ನೀನೂ ಪತಂಗ ಇಬ್ಬರ ಹೆಸರೂ ಒಂದೇ. ಆದ್ದರಿಂದ ನಿನಗಾಗಿ ನನ್ನ ಜೀವ ಮರುಗುತ್ತದೆ. ಹುಚ್ಚಾ. ಆ ದೀಪವೆಂದರೆ ಬೆಂಕಿ ಅಲ್ಲವೆ?"

"ಛೇ, ಈ ಜ್ಯೋತಿ ಎಷ್ಟು ಸುಂದರ! ಪ್ರತಿಯೊಬ್ಬರ ಹೃದಯ ಜ್ಯೋತಿಯೂ ಹೀಗೆಯೇ ಸುಂದರವಾಗಿರುವುದಿಲ್ಲವೆ?" ಚಿಕ್ಕ ಪತಂಗ ನುಡಿಯಿತು.

"ನೀನೊಬ್ಬ ಮಹಾಮೂರ್ಖ," ಗೂಟದ ಮೇಲಿನ ಪತಂಗ ಹೇಳಿತು, "ಮೋಜಿನಿಂದ ಗಾಳಿ ಸವಾರಿ ಮಾಡುತ್ತಾ ಅಡ್ಡಾಡುವದಕ್ಕಾಗಿ ಪತಂ-ಗದ ಜನ್ಮ, ತಿಳಿಯಿತೇನು? ಹುಚ್ಚಾ. ನಾನೆಷ್ಟು ಮೇಲಮೇಲಕ್ಕೆ ಹಾರುತ್ತೇನೆಂಬುದನ್ನು ನೀನೆಂದಾದರೂ ನೋಡಿರುವಿಯೇನು? ತೆಂಗಿನ ಜುಟ್ಟು, ಗುಡಿಯ ಶಿಖರ ಇವೆಲ್ಲವೂ ನನಗೆ ತೀರಾ ಚಿಕ್ಕದಾಗಿ ಕಾಣುತ್ತವೆ. ಇನ್ನು ಕೆಲವೇ ದಿನಗಳಲ್ಲಿ ಆಗಸವೂ ಚಿಕ್ಕದಾದೀತು." ಚಿಕ್ಕ ಪತಂಗದ ಮನಸ್ಸು ಈ ವರ್ಣನೆಯಿಂದ ತೂಗಾಡ ಹತ್ತಿತ್ತು. ದೊಡ್ಡ ಪತಂಗ ಇಂದಲ್ಲ ನಾಳೆ ಆಕಾಶಕ್ಕೆ ಹತ್ತೀತು. ಸೂರ್ಯನ ಸಮೀಪ ಹೋದೀತು ಮತ್ತೆ ನಾನು? ಭೂಮಿ ಮೇಲಿದ್ದ ಚಿಕ್ಕ ದೀಪದ ಸುತ್ತ. ಇಡೀ ಜಗತ್ತನ್ನೇ ಬೆಳಗುವ ಸೂರ್ಯನೆಲ್ಲಿ? ತನ್ನ ಬುಡದಲ್ಲಿಯ ಕತ್ತಲೆಯನ್ನು ಕಳೆಯದ ಈ ಚಿಕ್ಕ ದೀಪವೆಲ್ಲಿ? ಚಿಕ್ಕ ಪತಂಗ ದೊಡ್ಡ ಪತಂಗದ ಬಗ್ಗೆ ಗೌರವ ತಾಳಿತು.

ಗಾಳಿಯ ತಾಕತ್ತು ತಟ್ಟನೆ [illegible] ಹತ್ತಿತು. ಕ್ಷಣ, ಅಕಾಲದ ಮಿಂಚು ಹೊಳೆದಂತೆ ಆ ದೀಪವು ಕಂಪಿಸಿತು. ಆ ದೀಪ[illegible]



ಯಂತೆ ಪತಂಗದ ಹೃದಯವೂ ಮೇಲೆ ಕೆಳಗೆ ಕುಣಿಯುಹತ್ತಿತು. ಅದರ ಪ್ರತಿಯೊಂದು ಭಂಗಿಯೂ ತನ್ನ ಹೃದಯ ಸಂಗೀತವಲ್ಲಿಯ ಮಧುರ ರೇಖೆಯೋ ಎಂಬ ಕಲ್ಪನೆ ಆ ಚಿಕ್ಕ ಪತಂಗದ ಮನಸ್ಸಿಗೆ ಹೊಳೆಯಿತು. ಅದು ಆಸೆ ಗಣ್ಣಿನಿಂದ ಮೇಲೆ ನೋಡಿತು. ಮೇಲಿದ್ದ ದೊಡ್ಡ ಪತಂಗವು ಕೆಳಗಿದ್ದ ಚಿಕ್ಕ ಪತಂಗವನ್ನು ನಿಂದಿಸ ತೊಡಗಿತು. ಕೆಳಗಿದ್ದ ದೀಪವು ಚಿಕ್ಕ ಪತಂಗವನ್ನು ಸನ್ನೆಮಾಡಿ ತನ್ನ ಕಡೆ ಬರುವಂತೆ ಕೇಳಿಕೊಳ್ಳು ತ್ತಿತ್ತು.

ಚಿಕ್ಕ ಪತಂಗವು ದೊಡ್ಡ ಪತಂಗಕ್ಕೆ ಕೇಳಿತು: "ಪತಂಗಣ್ಣಾ ನಿನ್ನ ಹಾರಾಟವನ್ನು ನಾನಿನ್ನೂ ನೋಡಿಲ್ಲ. ನೀನೆಷ್ಟು ಎತ್ತರಕ್ಕ ಹಾರುತ್ತಿ ಯೆಂಬುದನ್ನು ನನಗೀಗ ತೋರಿಸಬಲ್ಲೆಯಾ?"

"ಈಗ ಛೇ!" ಮೇಲಿಂದ ಬಂತು ಅಸ್ಪಷ್ಟ ಉತ್ತರ.

"ಹೂಂ ಈಗಲೇ. ಈಗ ಅನುಕೂಲವಾಗಿ ಗಾಳಿ ಬಿಟ್ಟಿದೆ."

"ಅದು ಸರಿ...ಆದರೆ ಆದರೆ..."

"ಆದರೇನು?"

"ನನ್ನ ದಾರ ಹಿಡಿದುಕೊಳ್ಳುವ ಕೈ ಈಗ ಇಲ್ಲ ಇಲ್ಲವಲ್ಲ!"

"ನಿನ್ನ ದಾರ?" ತಾತ್ಸಾರದಿಂದ ಚಿಕ್ಕಪತಂ ಹೇಳಿತು, "ಹೂಂ ನಿನ್ನ ದಾರ ಹಿಡಿಯಲು ಇನ್ನೊ ಬ್ಬರ ಕೈ ಇದ್ದಾಗ ಮಾತ್ರ ನೀನು ಮೇಲಮೇಲ ಹಾರಾಡುವವನೇನು? ಥೂ! ಇನ್ನೊಬ್ಬರ ಕೈ ಗೊಂಬೆಯಾಗಿ ಎತ್ತರಕ್ಕೆ ಹಾರಾಡುವದಕ್ಕಿಂತ..

ಸೊಯ್ ಎಂದು ಹೊರಟ ಬಿರುಗಾಳಿ ಜೊತೆಯಲ್ಲಿ ದೀಪದ ಹೃದಯದೊಳಗೆ ಪತಂ ಗವು ಮತ್ತು ಗಾಳಿಯ ಹೃದಯದೊಳಗೆ ದೀಪ ಮಾಯವಾಯಿತು. ಆ ಕತ್ತಲೆಯಲ್ಲಿ ಗಾಳಿ ಮೇಲೆ ಜೊತಾಡುತ್ತಿದ್ದ ಪತಂಗದ ಪಟ ಸಪ್ಪಳ ಮಾತ್ರ ಕೇಳಿಸುತ್ತಿತ್ತು.

# ನಮ್ಮ ಬಾಸ್

ಹತ್ತಿಮತ್ತೂರು ನರಸಿಂಹಮೂರ್ತಿ

**ನವೆಂಬರ್ 'ಕಸ್ತೂರಿ'ಯಲ್ಲಿ ಬಂದ 'ನಮ್ಮ ಸರಕಾರ'ಕ್ಕೆ ಇದು 'ಗೃಹಿಣಿ'ಯೊಬ್ಬಳ ಪ್ರತಿಕ್ರಿಯೆ.**

ಹೆಣ್ಣು ಮಕ್ಕಳಿಗೆ ಸಾಲಿ ಕಲಿಯೋತನಕ ಅಭ್ಯಾಸದ ಚಿಂತಿ. ಆದ್ರ ನಾನು ಎಸ್.ಎಸ್.ಸಿ ಆದ ಕೂಡ್ಲೆ "ಕಾಲೇಜ್ಗೆ ಹೋಗಿ ಇಕಿ ಏನು ಉದ್ಧಾರ ಮಾಡಿಕೋಬೇಕು [illegible] ಅದ" ಅಂತ ನಮ್ಮ ತಂದಿ ಮುಂದಿನ [illegible]. ಅಭ್ಯಾಸ [illegible] [illegible] ಹಾದಿ ಬ್ಯಾರೆ ಆಗ್ತದ ನೋಡ್ರಿ. ಇನ್ಯಾವ ವಿಚಾರ? ಲಗ್ನದ್ದು. ಎಲ್ಲಾರ ಹಂಗ ನಾನೂ ನನಗ ಮುಂದೆ ಸಿಗೋಂವ ಹಿಂಗ [illegible] ಅಂತ [illegible] ಮುಂದಿಗೆ ಮಾಡ್ತಿದ್ದೆ. ಆದ್ರ ನಾವು ಲೆಕ್ಕ ಹಾಕೋದು ಒಂದು, ಆಗೋದು ಮತ್ತೊಂದು ನೋಡ್ರಿ. ಇವರಾಗ ನಮ್ಮದೇನು ನಡೀತದ! ವರಕ್ಕ ಕನ್ಯಾ ಪಾಸ ಆದ್ರ ಕನ್ಯಾದ ಮದಿವಿ ಆಗಬೇಕು. ಕನ್ಯಾಕ್ಕ ವರ ಪಾಸ ಆದs ಇಲ್ಲೋ ಯಾರು ಕೇಳ್ತಾರs? ಅಪ್ಪಾ, ಅವ್ವ, ಪಾಸ ಮಾಡಿದ ವರಕ್ಕ ತೆಕ್ಕಿ ಬೀಳೋದು ಒಂದs ಹಾದಿ.

[illegible] ತಂದಿ [illegible] ಕುಂಡಲಿ [illegible] ನೋಡಿದ್ರು. ಆದ್ರ ಇವರ ಕುಂಡಲಿ ಭಾಳ ಮನಸ್ಸಿಗೆ ಬಂದು ನಮ್ಮ ಅಪ್ಪಗ "ಏನs ಈ ಕುಂಡಲಿ ಭಾಳ ಛಲೋ ಅದ ಅಂತ. ಇಪ್ಪತ್ತಾರು ಗುಣ ಕೂಡಿ ಬಂದಾವ" ಅಂತ ಹೇಳಿ ನನ್ನ ಮದಿವಿ ಮಾಡಿದ್ರು. ಆದ್ರ ಆ ಇಪ್ಪತ್ತಾರು ಗುಣದಾಗಿನ ಒಂದsರ ಇವರ ಹತ್ರ ಇರಬೇಕು? ಊಂಹುಂ, ಕೇಳಬ್ಯಾಡ್ರಿ. ಅದ್ರ ಅವರಾಗ ಇಲ್ಲದವಿಲ್ಲ ಅದ.

ಲಗ್ನ ಆಗಿ ಬಂದೇನಿ. ಒಂದು ದಿವಸರs ನಕ್ಕೋತ ಮಾತಾಡ್ಯಾರ? ಹೊಸತಾಗಿ ಲಗ್ನ ಆತಂದ್ರ ಇಬ್ಬರೂ ನಾಟಕ ಅಂತಾರ, ಸಿನೆಮಾ ಅಂತಾರ. ಇಲ್ಲದs ಇದ್ರ ಎಲ್ಲಾರ ಘಾರ ಊರು ನೋಡಲಿಕ್ಕೆ ಅಂತರ ಹೋಗ್ತಾರೆ. ನನಗ ಬ್ಯಾರೆ ಏನು ಇಲ್ಲದs ಇದ್ರೂ ಸಂಜೀಮುಂದ ಅಡ್ಡಾಡಲಿಕ್ಕೆ, ಇಲ್ಲಾಂದ್ರ ಪ್ಯಾಟ್ಯಾಗ ಖರೀದಿ ಮಾಡಲಿಕ್ಕೆ ಇಬ್ಬರೂ ಕೂಡಿಹೋಗಬೇಕು ಅಂತ ಅನಸ್ತದ. ಆದ್ರ ಇವರು ಮನೀಗೆ ಬರೋ ಹೊತ್ತಿಗೆ ಸೂರ್ಯ ತಾಯಿ ಹೊಟ್ಟೆ ಸೇರಿರ್ತಾನ, ಮತ್ತ ಬರೋದು ಬರ್ತಾರ ಅಂದ್ರ ನಾಕ ಮಂದಿನ್ನ ಕರಕೊಂಡು ಬರ್ತಾರ. ಅಲ್ಲೀಂದನs ಒದರ್ತಾರ "ಏನs ಉಪ್ಪಿಟ್ಟು ಚಹಾ ಮಾಡು" ಅಂತ. ರವಾ ಇಲ್ಲಾಂದ್ರ "ಅವಲಕ್ಕಿ ಹಚ್ಚು" ಅಂತಾರ, ಮನ್ಯಾಗ ಧನ, ಧಾನ್ಯ, ಐಶ್ವರ್ಯ ತುಂಬಿತುಳುಕ್ತದ ಅಂಬೋವ್ಹಂಗ. ಮನ್ಯಾಗ

ನೋಡಿದ್ರು ರಾಮರಕ್ಷೆ. ದ್ರೌಪದಿ ಹತ್ತರ ಅಕ್ಷಯ ಪಾತ್ರಿ ಇತ್ತು ಅಂತ ಕುತ್ತು ಬಂದಾಗೆಲ್ಲ ಪಾರ ಆಗ್ತಿದ್ದಳು. ಇಲ್ಲೇನದ ಮನ್ಯಾಗ, ಆಲಿ-ಮನಿ ಭಾಂಡಿ ಒಂದು ಬಿಟ್ರ? ಒಳಗ ಬಂದು ಏನ ಅದ ಏನ ಇಲ್ಲಾಂತ ಕೇಳೋದು ಭೂರ ಉಳೀತು. ಪ್ರೆಸಿಡೆಂಟರು ಸುಗ್ರೀವಾಜ್ಞೆ ಬಿಟ್ಹಾಂಗ ಕೂತಲ್ಲಿಂದನಽ ಆರ್ಡರ್.

ಎಲ್ಲಾದಕ್ಕೂ ನಾನಽ ಸಾಯಬೇಕು ನೋಡ್ರಿ. ರೇಶನ್‌ಕ್ಕೂ ನಾನಽ ಲಾಯಿನ ಹಚ್ಚಬೇಕು. ಕಿರಾಣಿ ಸಾಮಾನ ನಾನಽ ತರಬೇಕು. ಇಷ್ಟೆಲ್ಲ ಸತಗೋತ ಮಾಡಿದ್ರು ಏನರ ಕಿಮ್ಮತ್ತು ಅದ ಅಂತೀರೇನು ಈ ಮನ್ಯಾಗ? ಕೇಳಬ್ಯಾಡ್ರಿ. ಏನಂದ್ರಿ? ಪ್ರೀತಿ ಮಾತಽ? ಆಡ್ತಾರ, ಕುತ್ತು ಬಂದಾಗಷ್ಟಽ ಪತ್ನಿ ನೆನಪಾಗ್ತದ ಇವರಿಗೆ. ನನಗೂ ಒಮ್ಮೊಮ್ಮೆ ತಡ ಕೊಂಬೋದು ಆಗೂದಿಲ್ಲಾ. ಸಿಟ್ಟು ಬಂತಂದ್ರ "ನೋಡ್ರಿ ಮೊದ್ಲಽ ಹೇಳ್ತೀನಿ. ಮನ್ಯಾಗ ಒಂದು ಕಾಳು ಅಕ್ಕಿ ಇಲ್ಲಾ, ಬ್ಯಾಳಿ ಇಲ್ಲಾ. ಫಕೀರಪ್ಪನ ಅಂಗಡಿಗೆ ನೀವಽ ಹೋಗಿ ಸಾಮಾನ ತಂದು ಹಾಕಿದ್ರ ಸಂಜಿ ಅಡಿಗಿ. ನನಗೂ ತಲಿ ಹೊಡೀತದ ಹೋಗಿ ಥಣ್ಣಗ ಮಲಕೋತೀನಿ" ಅಂತ. ಅಂದಮ್ಯಾಲ ತಾವು ಭೂಮಿಮ್ಯಾಲ ಇದ್ದದ್ದು ಪರಿವಿ ಆಗ್ತದ. ಇಲ್ಲದ್ದಽ ಪ್ರೇಮ, ಉಕ್ಕಿ ಬರ್ತದ. ಬೆನ್ನ ಮ್ಯಾಲ ಕೈ ಆಡಸ್ತಾರ. ಗಲ್ಲಾ ಹಿಡದು ರಮಸ್ತಾರ. ಮತ್ತ ಅಂತಾರ, ನಾ ಇದ್ದೇನಿ ಅಂತ. ತಮ್ಮ ಸಂಸಾರ ಸುರಳೀತ ಸಾಗೇದ ಅಂತ ನನ್ನ ಅಟ್ಟಕ್ಕ ಏರಸ್ತಾರ.

ಅಂಗಡಿ ಫಕೀರಪ್ಪ ಇವರಿಗೆ ಗರುಡನ ಗರಿ ಇದ್ದಾಂಗ. ಅಂಗಡಿ ಮುಂದ ಹಾಯೋ ಹಾಂಗ ಇಲ್ಲ. ಎರಡೆರಡು ತಿಂಗಳ ಉದ್ರಿ ಮುಟ್ಟಿಸೋ ಹಾಂಗಿಲ್ಲ. ಕೇಳತಾನಽ ಅಂವ? ಕರುಣಾ ಕಕುಲಾತಿ ಅಂಬೋದು ದೇವರು ಹೆಣ್ಣು ಮಕ್ಕಳ ಕೊರಳಿಗೆ ಕಟ್ಟಿದ್ಹಾಂಗ ಕಾಣಸ್ತದ. ಎಷ್ಟಽ ಅಂದ್ರೂ ಅವರು ನನಗ ಯಜಮಾನ್ರು ನೋಡ್ರಿ. ನಾನಽ ಸೋಲಬೇಕು. ನಾನಽ ಫಕೀರಪ್ಪಗೆ ಅಪ್ಪಾ ಅಣ್ಣಾ ಅಂದು ಸಾಮಾನ ತರಬೇಕು.

ಇಷ್ಟೆಲ್ಲ ಮಾಡಿ ಸಂಸಾರ ತೂಗಿಸಿಕೊಂಡು ಹೋದ್ರೂ ಮಂದಿ ಮುಂದೆ ನನ್ನ ಅಡಿಕೊಂಬೋದು ಏನೂ ಬಿಟ್ಟಿಲ್ಲ. ಮತ್ತ ಓಣಿ ಸೀತಾಬಾಯರು ಮನ್ಯಾಗ ಹ್ಯಾಂಗ ಬೇಕು ಹಾಂಗ ಹೇಳ್ತಾರ. "ನಮ್ಮ ಮನಿ ಆಕೀಗೆ ಮನಿ ಹ್ಯಾಂಗ ಇಡಬೇಕು ಗೊತ್ತಿಲ್ಲ. ಅಡಿಗಿ ಮನ್ಯಾಗ ಅನಕ ಸಾಮಾನ ಎಲ್ಲಿ ಬೇಕು ಅಲ್ಲಿ ಬಿದ್ದಿರತಾವ. ವಾಮನಾವತಾರದಾಗ ದೇವರಿಗೆ ಮೂರನೆ ಪಾದ ಎಲ್ಲಿಡಬೇಕು ತಿಳೀದ್ಹಾಂಗ ಆದ್ರ ಇವರಿಗೆ ಎರಡನೇದಽ ಎಲ್ಲಿಡಬೇಕು ಅಂಬೋ ಪ್ರಶ್ನಿ ಬರತದ ಅಂತ. ಸಾಸಿವಿ ಒಂದು ಕಡೆ ಮಸಾಲಿ ಒಂದು ಕಡೆ. ಒಂದು ಸಿಕ್ಕರ ಮತ್ತೊಂದ ಸಿಗೋಹಾಂಗಿಲ್ಲ. ಒಂದು ವ್ಯಾಳ್ಯಾ ಉಪ್ಪಿನ ಭರಣಿ ಸಿಗದೆಽ ಇದ್ರೂ ಇಕೀ ಅಡಿಗಿ ಏನು ನಿಂದ್ರೂ ಹಾಂಗಿಲ್ಲ," ಅಂತ ಸಿಕ್ಕಾಪಟ್ಟಿ ಹೇಳ್ತಾರ. ಒಮ್ಮೊಮ್ಮೆ ಉಪ್ಪು ಹಾಕಲಿಕ್ಕೆ ಮರೀತದ. ತಾಟಿನಾಗ ಗುಡ್ಡದಷ್ಟು ಉಪ್ಪು ಹಾಕಿರ್ತದ. ಒಂದು ಚಿಮಿಟಗಿ ಹಚಗೊಂಡು ಉಣಲಿಕ್ಕೆ ಏನ ಆಗ್ತದ? ಸೀತಾಬಾಯರಿಗೆ ನನ್ನ ಸ್ವಭಾವ ಗೊತ್ತದ ಅಂತ ನೆಟ್ಟಗಾತು. ಮತ್ತ ಅಂತಾರ ಎರಡು ಖೋಲಿ ಚೊಕ್ಕಾಗಿ ಇಡಲಿಕ್ಕೆ ಬರೋದಿಲ್ಲ, ಇಂಥಾಕಿನ್ನ ದೇಶದ ಪ್ರಧಾನಿ ಮಾಡಿದ್ರ ಕಾಗಿ ಕೈಯಾಗ ಕಾರಭಾರ ಕೊಟ್ಹಾಂಗ ಆಗ್ತದ ಅಂತ. ಅಲ್ರೀ. ಇಲ್ಲೀ ತನಕಾ ಹೆಣ್ಣ ಮಗಳು ಪ್ರಧಾನಿ ಇದ್ಲಂತ ಇವರಿಗೆ ಆರಾರು ತಿಂಗಳಿಗೊಮ್ಮೆ ಡಿ.ಎ. ಬಡತಿ ಆಗತ್ತಿತ್ತು. ಹುಣ್ಣಿವಿಗೊಮ್ಮೆ ಅಮಾಸಿಗೊಮ್ಮೆ ಬೋನಸ್ ಅಂತ ಸಿಗತಿತ್ತು. ಈಗ ಬಂದಾನಲ್ಲ. ಗಂಡಸು ಪ್ರಧಾನಿ ಏನ ಸುರಕೋತಾರೊ ತಿಳೀತದ.

ಹರಿಕಥ್ಯಾಗ ದಾಸರು ಹೇಳ್ತಾರೆ ಗಂಡಹೆಂಡ್ತಿ ಅಂದ್ರ ಸಂಸಾರ ಅಂಬೋ ರಥದ ಎರಡು ಗಾಲಿ ಇದ್ಹಾಂಗ ಅಂತ. ಎರಡೂ ಸಮ ಇರಬೇಕು ನೋಡ್ರಿ. ಆದ್ರ ಈ ಮನ್ಯಾಗ ತಮ್ಮದ ನಡೀಬೇಕು ಅಂತಾರ. ತಾವು ಹಾಕಿದ ಉಗುಳು ನಾ ದಾಟಬಾರ್ದು. ನಾ ಅಂದ್ರ ಕಸಪಕುತಾ ಕಡೀ ಮಾಡ್ತಾರ. ಅಲ್ರೀ, ಅವರ ನಾಕು ಮಾತು ನಾನು ಕೇಳಿದ್ರ ಅವರು ನನ್ನ ಒಂದರಽ ಮಾತು ನಡಸ್ಬೇಕೋ ಬ್ಯಾಡೋ? ಊಹುಂ. ಮತ್ತ ಅಂತಾರ ಅವರ ಮಾತ ನಡಸೋದು ಬೇಕಂತ.

ಅವ್ರು ನಂದು ಒಂದು ಮಾತು ನಡ್ಸೀದ್ರು ಮನಿ ತೊಳಕೊಂಡು ಹೋಗ್ತದಂತ. ಅಲ್ರಿ ನಾ ಭಾಳ ಅವ್ರು ಸೀರಿ ಕೇಳೇನು ಇಲ್ಲಾಂದ್ರು ಒಬಸಕ್ಕ ಒಂದು ಅರಿಬಿ ಕೇಳೇನು. ಇತ್ತಿತ್ತಲಾಗ ಕೇಳೋದಽ ಬಿಟ್ಟೇನಿ ಅನ್ರಿ. ಉಟ್ಟ ಸೀರಿನ ಉಟ್ಟುಟ್ಟು ಅಲ್ಲಲ್ಲೇ ಹರದು ಮೈ ಕಾಣಲಿಕ್ಕೆ ಹತ್ತಿತಾದ್ರು ತಮಗಽ ನಾಚಿಗಿ ಬಂದು "ಸೀರಿ ಹರದ್ವಾಂಗ ಕಾಣಸ್ತದ. ಒಂದು ಸೀರೀ ತೊಗೊಂಡು ಬಾ" ಅಂತ ಅಳೋ ಮಕ್ಕಳಿಗೆ ಚಾಕಲೇಟು ಕೊಟ್ಟ್ಹಾಂಗ ಐವತ್ತು ರೂಪಾಯಿ ಕೊಡಲಿಕ್ಕೆ ಬರ್ತಾರ. ಅಲ್ರೀ, ಈಗಿನ ದಿನದಾಗ ಐವತ್ತು ರೂಪಾಯಕ್ಕ ಏನು ಬರ್ತದಽ ಹೇಳ್ರಿ. "ಐವತ್ತು ರೂಪಾಯಿಗೆ ಅಂಗಡಿಯಾವ ಒಂದು ಲಂಗೋಟಿ ಸುದ್ದಾ ಕೊಡುದಿಲ್ಲಾ. ನೀವ ತಿಳದಂತಾದ್ದ ತರ್ರಿ ಅವನ್ನಽ ಉಟಗೊಂಡು ಮೆರೀತೀನಿ" ಅಂದು ಥಣ್ಣಗ ಕೂಡ್ತೇನಿ.

ಅವಕ್ಕಽ ಹೊಡುದ್ದೂ ನವಕ್ರಿ ಮಾಡಿದ್ರು. ಇಂಥ ಭವಣಿ ತಪ್ಪತದ ಅಂತೀರಾ? ಅದ್ರಾಗೂನು ಏನ ಸುಖ ಇಲ್ಲ ಏಳ್ರಿ. ಮೊನ್ನೆ ಕುಲಕರ್ಣಿ ಬಾಯಿ ಕೂಡಿದ್ರು. ನವಕ್ರ್ಯಾಗ ಏನು ಸುಖ ಇಲ್ಲ ಅಂತಿದ್ರು. ಅವ್ರ ಬಾಸ್ ಆಫೀಸಿನ್ಯಾಗ ಭಾಳ ತ್ರಾಸ ಕೊಡತಾನಂತ. ಏನರ ತಪ್ಪು ತಗಿಯೋದು ನಾಕ ಮಂದಿ ಮುಂದ ಸಿಕ್ಕ್ಯಾಪಟ್ಟೆ ಒದರಾಡೋದು. ಯಾವಾಗ ನೋಡಿದ್ರೂ ಗಂಟ ಮಾರಿ ಅಂತ. ಸಿಟ್ಟನಕಾ ಮೂಗಿನ ತುದೀಗೆ ಅಂತ. ನವಕರಿ ಸಾಕಾಗಿ ಹೋಗೇದ ಅಂತ ಅಕಿ ಕಣ್ಣಾಗ ನೀರು ತಂದ್ಲು. ಅಕಿ ಬಾಸ್ ಆತು ನಮ್ಮ ಇವರಾತು ಇಬ್ಬರೂ ಒಂದ ಸರದಾಗಿರ ಮಣಿ ನೋಡ್ರಿ. ಅದಕ್ಕ ಇವರಿಗೂ ಬಾಸ್ ಅಂತ ಕರೀತಿರ್ತೇನಿ. ಏನೂ ಕೇಳಿಲ್ಲಾ ಅಂತೀರಾ? ಅದು ಇನ್ನೂ ಖಾಸಗಿ ಅದ. ನಾವಿಬ್ಬರಽ ಇದ್ದಾಗ "ಬಾಸ್ ಚಹಾ ಆಗೇದ" "ಬಾಸ್ ಸ್ನಾನಕ್ಕ ಏಳ್ರಿ"ಅಂತ.

ಏನಽ ಅನ್ರಿ ಶಾಂತಾಬಾಯರ್ರಿ, ನೀವು ಪುಣ್ಯವಂತರು ನೋಡ್ರಿ. [illegible] ಮನಿಯವರು ಉರೀತಿರಲಿಕ್ಕಿಲ್ಲ. ಏನಂದ್ರಿ? ಒಲ್ಲಾದ ಮನಿ ದ್ವಾರಿಗೂ ತೂತಽ ಅಂತ! ಆತೇಳ್ರಿ [illegible] ನೋಡ್ರೆ ಹೆಣ್ಣ ಮಕ್ಕಳ್ದು. ಲಗ್ನ ಆಗೋತನಕಾ ಮೊಪ್ಲ ಆ ವ್ರತಾ, ಈ ವ್ರತಾ, ಮೌನ ಗೌರಿ ವ್ರತಾ ಅಂತ ಮಾಡತಾವ. ಗೌರೀಪೂಜಾ ಮಾಡತಾವ. "ವರವ ಕೊಡೆ, ತಾಯಿ, ವರವ ಕೊಡೆ" ಅಂತ ಮಂಗ್ಳಾರತಿ ಬೇಡಕೋತಾವ. ಅದ್ರು ಅಕಿ ಕೊಡೋದು ಇಂಥಾ 'ವರ ವರ' ಅನ್ನೋ ವರಽ ನೀವಂಬೋದೂ ಖರೇನ. ನೆಗೋವ ಇಂಥಾ ವರಾ ಅಂದ ಮ್ಯಾಲೆ ಗೌರವ್ವಂದಾದ್ರೂ ಏನು ತಪ್ಪು. ಯಾವದೋ ದಾಸರು ಅಂದಾರ "ಭೂಪರ್ಕೈವರಿದ್ದೇನು ಫಲ?" ಅಂತ. ಹೆಣ್ಣಗಳು ಹಣಿ ಮುಟಿಗೊಂಡಳಂತ. ಖರೇ ಅದ. ಒಬ್ಬರ ಕೈಯಾಗ ಸಿಕ್ಕಽ ಜೀವ ಹಣ್ಣಾ ಹಣ್ಣಾಗ್ತದ. ಪಾಪ, ಐದು ಮಂದಿ ಗಂಡಂದ್ರು ಕೈಯ್ಯಾಗ ಅಕಿ ಗತಿ ಏನಾಗಿರಬೇಕು ನೀವ ಲೆಕ್ಕಾ ಹಾಕ್ರಿ.

ಅಜ್ಜ ನೂತದ್ದಲ್ಲಾ ಮೊಮ್ಮಗನ. ಉಡದಾರಕ್ಕನ ಸಾಲಲಿಲ್ಲ. "ಅಂಬೋ ಹಾಂಗ ಇವರ ಪಗಾರ ಎಲ್ಲ ನಾನು ಹಬ್ಬ ಹುಣ್ಣಿವಿಗೆ ಖರ್ಚ ಮಾಡ್ತೇನಂದ. ಅಲ್ರೀ, ಇವೆಲ್ಲ [illegible] ಬರ್ತಾವ. [illegible] ಬ್ರಾಹ್ಮಣ ಅಂತಽ ಬೇಕು, ಮುತ್ತೈದಿ ಬೇಕು. ಇವೆಲ್ಲ ಬಿಡಲಿಕ್ಕೆ ಹ್ಯಾಂಗ ಬರ್ತದ? ಇವರ ಒಳಗ ಸಣ್ಣದಲ್ಲ ನೋಡ್ರಿ. ಹಬ್ಬದಾಗ ಯಾರರಽ ಇದ್ದಽ ಇರ್ತಾರ. ಹುಡುಗರಿಗೆ ಸೂಟಿ ಅದ್ರಸಕಾ ಮಾಗೀತು. ಮಕ್ಕಳನ್ನ ಕಳಸಲಿಕ್ಕೆ ಅಂತ ತಾಯಂದ್ರು ಬರತಾರ. ಆ ಮ್ಯಾಲ [illegible] ಮಕ್ಕಳನ್ನ ಕರಕೊಂಡು ಹೋಗಲಿಕ್ಕೆ ಯಾಜ ಮಾಸ್ರು ಬರತಾರ. ಬಂದ ಮ್ಯಾಲ ನಾಕ ದಿವಸ ಇರೋವ್ರಽ ನೋಡ್ರಿ. ಬಂದವರಿಗೆ ಏನ ಚಟ್ನಿ ಭಕ್ಕರಿ ಹಾಕಲಿಕ್ಕೆ ಬರ್ತದ?ಽ ಯಥಾ ಪ್ರಕಾರ ಎಲ್ಲಾ ಆಗಬೇಕು. ಅಂದ ಮ್ಯಾಲ ಇವರು ಎಷ್ಟು ತಂದು ಹಾಕಿದರೂ ಒಕ್ಕಳ ಆಗೋದಽ. ಎಲ್ಲಾದಕ್ಕೂ ನನ್ನ ತಲೀ ಮ್ಯಾಲ ಮೆಣಸು ಅರೀ ಬೇಕು ಅಂತಾರ. ನಮ್ಮ ಮನಿ ಅಂದ್ರ ಒಂದು ಹಾಲಿಡೇ ಕ್ಯಾಂಪ್ ಆಗೇದ. ನನಗೂ ಕಂಡಾ ಬಟ್ಟ ಸಿಟ್ಟ ಬರ್ತದ. ಅದೂ ಗಂಡಸರ ಬಾಯಿಗೆ ಬಾಯಿ ಹಚ್ಚೋದು ನಾಕ

ಮುಂದ್ಯಾಗ ಛಂದ ಕಾಣೂದಿಲ್ಲ ನೋಡ್ರಿ. ನಗ್ತಿರಲ್ಲ. ಬಾಯಿಗೆ ಬಾಯಿ ಹಚ್ಚೋದು ಅಂದ್ರ ಮಾತು ಬೆಳಸೋದು ಬ್ಯಾಡಾ ಅಂದೆ.

ಇವರ ಸಡಗ್ರ ಏನು ಹೇಳ್ಲಿ. ಪಗಾರ ಬಂದ ದಿವಸ ಏನಾರ ಒಂದು ಪುಡಿಕಿ ಕೈಯಾಗ ಇದ್ದ ಇರ್ತದ. ಏನು ಅಂದ್ರ, "ಛಲೋ ಕಾಣಸ್ತ. ಅಂದ ಟೆರಲಿನ್ ಶರ್ಟ್ ಪೀಸು, ಟೆರಿಕಾಟ್ ಪ್ಯಾಂಟ್ ಪೀಸ್" ಅಂತ ಅರ್ಧಾ ಪಗಾರ ಅಂಗಡ್ಯಾಗ ಇಟ್ಟು ಬಂದಿರ್ತಾರ. ನಮ್ಮ ಬಜೆಟ್ಟಿದ ಕಥಿ ಹಿಂಗ ಇದ್ದ ಮ್ಯಾಲ ನಾಟಕಾ ಸಿನೇಮಾ ಅನಕಾ ಕನಸಿನ್ಯಾಗs.

ಆದ್ರೂ ನಾಟಕ ಅಂದ್ರ ನೆನಪು ಆತು. ಒಮ್ಮೆ ಮಜಾ ಆತೇನ್ರುಹಾ ನಮ್ಮ ಮುಂಧೋಳ್ಕರ ಬಾಯಿ ಕೊಡಿದ್ರು. ಅವರು 'ಸಂಗೀತ ಸೌಭದ್ರ' ನಾಟಕ ಭಾಳ ಛಲೋ ಅದ. ಹಾಡನಕಾ ಕೇಳೋಹಾಂಗ ಅದ, ನಾಳಿನ ಶನಿವಾರ ಗಡ ಕರಿ ಥೇಟರನ್ಯಾಗ ಅದ ನೋಡಿ ಬರ್ರಿ." ಅಂದಿದ್ರು. ನನ್ನ ಮನಸ್ಸಿದ್ರೂ ಇವರು ಹೂಂ ಅನಬೇಕಲ್ಲ. ನಾಟಕಾ, ಸಿನೇಮಾ ಅಂದ್ರ, ಊರ ಹೊರಗಿನ ಹನುಮಪ್ಪನ್ಹಾಂಗ, ಇವರ ಮಾರಿ ಆ ಕಡೆ ಆಗ್ತದ. ಯಾರರs ಇಸ್ಪೇಟು [illegible] ಊಟದ [illegible] ಹೋಗ್ತಾರ. ಆದ್ರ ಯೋಗಾಯೋಗ ಹಿಂಗ [illegible]. ನಮ್ಮ [illegible] ಅವರs ನಾಟಕದ ಎರಡು ತಿಕೀಟು ತಗಿಸಿದ್ರು. ಏಕಾಏಕಿ ಅವರಿಗೆ ಊರಿಗೆ ಹೋಗೋದು ಬಂತು ಅಂತ "ನೀವು ಹೋಗಿ ಬರ್ರಿ" ಅಂತ ಶನಿವಾರ ಮುಂಜಾನೆ ನನಗ ಕೊಟ್ರು. ಅವತ್ತ ರಾತ್ರಿ ಊಟ ಆದ ಕೂಡ್ಲೆ ಇವರಿಗೆ ಹೇಳ್ದೆ ಇವತ್ತ ಸೌಭದ್ರ ನಾಟಕದ ಎರಡು ತಿಕೀಟು ಸಿಕ್ಯಾವ. ನಮ್ಮಿಬ್ಬರಿಗೂ ಹೋಗೊದು ಅದ. ಅದಕ್ಕs ಲಗೂನ ತಯಾರಾಗ್ರಿ" ಅಂದೆ.

"ನನಗ ಕೆಲಸ ಅದ. ತಮ್ಯಾನ್ನ ಕರಕೊಂಡು ಹೋಗು" ಅಂದ್ರು. ನಾನೂ ಸ್ವಲ್ಪ ಧನಿ ಎತ್ತರಿಸಿ ಹೇಳ್ದೆ "ಈ ತಿಕೀಟು ಮಿಸ್ಟರ್ ಮತ್ತ ಮಿಸೆಸ್ ಸಲುವಾಗಿ ಅದ. ನಾನು ಮಿಸೆಸ್ ಆದ್ರೂ, ತಮ್ಯಾ ನನ್ನ ಮಿಸ್ಟರ್ ಆಗೂದಿಲ್ಲ" ಅಂತ ಹೇಳಿ ಡ್ರೆಸ್ ಹಾಕ್ಸಿ, ಕೈ ಹಿಡಕೊಂಡ ನಡದೆ. ನಗತೀರಲ್ರಿ- ಇನ್ನೂ ಮಿಜಿಮಿಜಿ ಮಾಡಿದ್ರು, ಇವರೂ ಸ್ವಲ್ಪ ತೆಳ್ಳಗ ಇದ್ದಿದ್ರ ಬಗಲಾಗs ಕರಕೊಂಡು ಹೊಗಾಕಿ. ಧಿಟ್ಟಿ ಅಂತೀರ್ಯಾ ನನ್ನ ಧಿಟ್ಟತನಕ್ಕೆ ನಾ ಸಣ್ಣಾಕಿ ಇದ್ದಾಗ ನಮ್ಮ ಅಜ್ಜ ಅಂತಿದ್ರು, "ರಂಗೂ ನಿನ್ನ ಈ ಥರಾ ವಾಗಣೂಕ ನೋಡಿದ್ರ. ನಾಳೆ ನೀ ಮದಿವಿ ಆದೆಂದ್ರ ಮಾಡಿಕೊಂಡವನ್ನ ಮಾರ್ಕೇಟಿನ್ಯಾಗ ಮಾರಿಕೊಂಡು ಬರಾಕಿ" ಅಂತ.

ಖರೆ ಅಂದ್ರೂ ನಾಟಕಾ ಭಾಳ ಛಂದ ಇತ್ತು. ಸುಭದ್ರಾ ಅನಕಾ ಮಾತಿಗೊಮ್ಮೆ ಹಾಡಾಕಿ. ಹಾಡು ಯಾಕರೆ, ಮುಗಸ್ತಾಳ ಅನಸಬೇಕು. ಎಲ್ಲಾರೂ ಚಪ್ಪಾಳಿ ಬಾರಸವ್ರs ಗೋಣು ಹಾಕವ್ರs ಆದ್ರ ನನ್ನ ಬಾಜೂಕ ಇವರು ತಳಗ ಹಾಕಿದ ತಲಿ ಮ್ಯಾಲ ಎತ್ತಿದ್ದರೋ ಅಂತಾರಲ್ಲ '...ಮುಂದೆ ಕಿನ್ನರಿ ಬಾರಿಸಿದ್ಹಾಂಗ' ಅಂತ.

ಹೆಂಡ್ತಿ, ಅಂದ್ರ ಏನಾತು. ಅಕಿಗೂ ಸುಖ ದುಃಖ ಅಂಬೋವು ಇದ್ದs ಇರ್ತಾವ. ಅವನ್ನ ಮನಿಮಂದಿರ ಮುಂದ ಹೇಳ್ದ ಯಾರ ಮುಂದ ಹೇಳ್ಬೇಕು. ಯಾವಾಗಾರ ಶನಿವಾರ ರಾತ್ರಿ ಲಗೂ ಊಟ ಆಗಿತ್ತಂದ್ರ ಇವರಿಗೆ "ಇವತ್ತ ಇಸ್ಪೇಟು ಗಿಸ್ಪೇಟು ಅಂತ ಹೋಗೋದು ಬ್ಯಾಡಾ. ನಾಳೆ ನಿಮಗೂ ಸೂಟಿ ಅದ. ಒಂದರ ದಿವಸ ಭಾಳೋತ್ತನಕಾ ಏನಾರ ಮಾತಾಡ್ಕೋತ ಮಲಗೋಣು" ಅಂತ ಹೇಳಿದ್ರ ವಿಶ್ವಾಮಿತ್ರ ಮೇನಕಾಗ ಕೈಎತ್ತಿದ್ಹಾಂಗ ಕೈತೋರ್ಸಿ ನಡದs ಬಿಡ್ತಾರ. ಮುಂದೇನು? ದಿನದ್ಹಾಂಗ, ಎಣಿಸಿದ ಜಾತೀನ ಎಣಿಸಿಗೋತ ಹಗಲು ಕಾಣೋದು. ◆

# ನಿಂವಿಲ್ಲದ ಮನುಷ್ಯ



ಮಲಯಾಳಂ ಮೂಲ: ಕೇಶವದೇವ್

ಸಂಗ್ರಹಾನುವಾದ: ಕೆ. ಕೆ. ನಾಯರ್

# ಸಾವಿಲ್ಲದ ಮನುಷ್ಯ

**ಗಡಿ ಕಾಯುವ ಜವಾನರ ಬದುಕಿನ ವಿವಿಧ ಮುಖಗಳನ್ನು ಪರಿಚಯಿಸುತ್ತ, ಅಲ್ಲಿನ ಆದಿವಾಸಿಗಳೊಂದಿಗೆ ಜವಾನರ ಸಂಪರ್ಕದ ಪರಿಯನ್ನು ಹೇಳುತ್ತ ಸಾಗುವ ಈ ನೀಳ್ಗತೆ ಕಾಲ್ಪನಿಕವೆನಿಸುವುದೇ ಇಲ್ಲ. ನಿರೂಪಣೆಯಲ್ಲಿ ಅಂಥ ವಿಶಿಷ್ಟ ಶೈಲಿಯನ್ನು ಹೊಂದಿರುವ ಈ ಕಾದಂಬರಿ ನಿಮ್ಮನ್ನು ಆ ರಾಮಚಂದ್ರ-ಬಿನ್ನಿಯರ ಸಮೀಪ ಒಯ್ದು ನಿಲ್ಲಿಸುತ್ತದೆ.**

ಚೇಕ್ಕೆ ಎಂಬ ಗ್ರಾಮದಲ್ಲಿ ನಡೆದದ್ದು ಈ ಘಟನೆ. ವ್ಯಾಪಕಾರ್ಥದಲ್ಲಿ ಅದೊಂದು ಗ್ರಾಮ ವಲ್ಲವಾದರೂ ಅನುಕೂಲಕ್ಕಾಗಿ ಕಾಡು ಮನುಷ್ಯರ ಆ ಕೊಂಪೆಯನ್ನು ಗ್ರಾಮವೆಂದೇ ಕರೆಯೋಣ. ಆ ಕಾಡರೂ ಅದನ್ನು ಗ್ರಾಮವೆಂದೇ ತಿಳಿದಿದ್ದು ತಮ್ಮ ಹಿರಿಯನನ್ನು ಗ್ರಾಮದ ಮುಖಂಡ ಎಂಬ ಅರ್ಥದಲ್ಲಿ 'ಗಾಂಭಡೆ' ಎಂದೇ ಕರೆಯುತ್ತಿದ್ದರು. ಮರದ ಬೃಹತ್ ಕಂಬಗಳ ಮೇಲೆ ಹಾಕಲ್ಪಟ್ಟ ಬಿದಿರಿನ ಅಟ್ಟಣಿಗೆಯ ಮೇಲೆ ಎಬ್ಬಿಸಲ್ಪಟ್ಟಿರುವ ದೊಡ್ಡ ದೊಡ್ಡ ಗುಡಿಸಲುಗಳಲ್ಲಿ ಅವರು ಗುಂಪು ಗುಂಪಾಗಿ ವಾಸಿಸುತ್ತಿದ್ದರು. ಹಂದಿ, ಕೋಳಿಗಳೂ ಆ ಗುಡಿಸಲುಗಳ ಕೆಳಗೆ ಇರುತ್ತಿದ್ದುವು. ಸದಾಕಾಲವೂ ಹಿಮ ಬೀಳುತ್ತಿರುವ ಈ ಹಿಮಾಲಯ ಸೀಮೆಗಳಲ್ಲಿ ಬೆಂಕಿಯ ಬಳಿಯಲ್ಲಷ್ಟೇ ಮಲಗಿ ನಿದ್ರಿಸಲು ಸಾಧ್ಯ. ಅಟ್ಟಣಿಗೆಯ ಮೇಲೆ ಅಲ್ಲಲ್ಲಿ ಮಣ್ಣು ಮೆತ್ತಿ ಕಟ್ಟಿಗೆ ಹಾಕಿ ಬೆಂಕಿ ಉರಿಸುತ್ತಾ ತಾವು ಮಕ್ಕಳೂ ಅಲ್ಲೇ [illegible] [illegible] ಕೊಂಡು ನಿದ್ರಿಸುತ್ತಿದ್ದರು.

[illegible] ವಾಸಿಸುತ್ತಿದ್ದ ಈ ಆದಿವಾಸಿಗಳ ತಾಣಗಳಿಗೆ ಭಾರತದ ಸೇನೆಯ ಚಿಕ್ಕ ತುಕಡಿಯೊಂದು ಭೇಟಿ ಕೊಟ್ಟಿತು. ತುಕಡಿಯಲ್ಲಿ ಹದಿನಾಲ್ಕು ಮಂದಿ ಇದ್ದರು. ಫೀಲ್ಡ್ ಸರ್ವೇಯಿಂಗ್ ಕಂಪೆನಿಯೊಂದರಿಂದ ಒಬ್ಬ ಕ್ಯಾಪ್ಟನ್, ಒಬ್ಬ ನಾಯಕ್ ಹಾಗೂ ಮೂವರು ಸಿಪಾಯಿಗಳು. ಸಿಗ್ನಲ್ಸಿನಿಂದ ಒಬ್ಬ ರೇಡಿಯೋ ಮೆಕ್ಯಾನಿಕ್ ಹಾಗೂ ಒಬ್ಬ ಆಪರೇಟರ್ ಇವರ ನೆರವಿಗಾಗಿ ಅಸ್ಸಾಂ ರೈಫಲ್ಸಿನಿಂದ ಆರು ಮಂದಿ ಸಿಪಾಯಿಗಳಲ್ಲದೆ ಒಬ್ಬ ಹವಿಲ್ದಾರೂ ಇದ್ದರು. ಈಗ ಹದಿನಾಲ್ಕು ಮಂದಿ ಆದರೋ ಇಲ್ಲವೋ ಎಂಬುದನ್ನು ಮನಸ್ಸಿದ್ದರೆ ಎಣಿಸಿ ನೋಡಬಹುದು. ಅಲ್ಲದೆ ಇವರ ಜೊತೆ ಆದಿವಾಸಿಗಳ ಭಾಷೆ ಬಲ್ಲ ಒಬ್ಬ ದುಭಾಷಿಯೂ ಇದ್ದ.

ಈಶಾನ್ಯ ಗಡಿ ಪ್ರದೇಶಗಳ ತಪ್ಪಲುಗಳಲ್ಲೂ ದಟ್ಟ ಕಾಡುಗಳಲ್ಲೂ ವಾಸಿಸುತ್ತಿದ್ದ ಈ ಆದಿವಾಸಿಗಳ ಕೊಂಪೆಯಿಂದ ಕೊಂಪೆಯ ಕಡೆಗೆ ಪ್ರಸ್ತುತ ತುಕಡಿ ಪ್ರಯಾಣ ಮುಂದುವರಿಸುತ್ತಲೇ ಇದ್ದು ಬೆಟ್ಟ, ಕಾಡು, ಕಣಿವೆ, ನದಿ ದಂಡೆಗಳಲ್ಲೆಲ್ಲಾ ಅವರು ಒಂದು [illegible] ವರ್ಷದಷ್ಟು ಕಾಲ ಕಳೆದಿದ್ದರು. ಆ ಬಳಿಕವೂ ತುಕಡಿಯಲ್ಲಿದ್ದ ಅನೇಕರಿಗೆ ತಾವು ಯಾಕೆ ಈ ಸ್ಥಳಗಳಲ್ಲಿ ಸಂಚರಿಸುತ್ತಿದ್ದೇವೆ ಎಂಬ ಬಗ್ಗೆ ಸಂದೇಹವಿತ್ತು. ಗಡಿಯನ್ನು ನಿಖರವಾಗಿ ಗುರು

ತಿಸಿ ಸರ್ವೆ ಮಾಡಲೆಂದೂ ಟಿಬೇಟಿನ ಮೂಲಕ ದುರುದ್ದೇಶದಿಂದ ಒಳನುಗ್ಗುತ್ತಿದ್ದ ವಿದೇಶಿಯರನ್ನು ಪತ್ತೇ ಹಚ್ಚಲಿಕ್ಕೆಂದೂ ಅವರು ವಿಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದರು. ದೇಶದ ಎಲ್ಲೆಯೊಳಗೇ ವಾಸಿಸುತ್ತಿರುವ ಈ ಅನಾಗರಿಕ ಜನಾಂಗಗಳಿಗೆ ತಾವು ಸ್ವತಂತ್ರ ಭಾರತದ ಶುಭ ಕಾಮನೆಗಳನ್ನೂ ಸ್ನೇಹ ವಿಶ್ವಾಸಗಳನ್ನೂ ತಲಪಿಸುತ್ತಿರುವುದಾಗಿಯೂ ಅವರು ಅಂದುಕೊಂಡಿದ್ದರು. ಯಾಕೆಂದರೆ ಪ್ರಸ್ತುತ ತುಕಡಿ ಪ್ರತಿಯೊಂದು ಗ್ರಾಮಕ್ಕೂ ಬಹಳಷ್ಟು ಉಡುಗೊರೆಗಳನ್ನೂ ಗ್ರಾಮಸ್ಥರು ಅತಿಯಾಗಿ ಹಂಬಲಿಸುತ್ತಿದ್ದ ಬಿಳಿ ಉಪ್ಪನ್ನೂ ತನ್ನೊಂದಿಗೆ ಒಯ್ಯುತ್ತಿತ್ತು. ಹಿಂದೆ ಅಸ್ಸಾಂ ರೈಫಲ್ಸಿನಲ್ಲಿ ನೌಕರಿಯಲ್ಲಿದ್ದ ದುಭಾಷಿ ತಿತ್ತೋರಿಪ, ಗ್ರಾಮದ ಹಿರಿಯರೊಂದಿಗೆ ಮಾತನಾಡುತ್ತಾ ತುಕಡಿಯ ಭಾರೀ ಹೊರೆಗಳನ್ನು ಸಾಗಿಸಲು ಹೊರೆಯಾಳುಗಳನ್ನು ಸಂಗ್ರಹಿಸುತ್ತಿದ್ದನು. ತುಕಡಿಯು, ಬಹಳ ಕಾಲ ಕಾದಿರಿಸಬಲ್ಲ ಆಹಾರ ವಸ್ತುಗಳನ್ನೂ ಡೇರೆಗಳನ್ನೂ ಕ್ಯಾನ್‌ವಾಸ್‌ಗಳನ್ನೂ ತನ್ನೊಂದಿಗೆ ಒಯ್ದಿದೆ. ಇನ್ನೂ ಅಗತ್ಯವಾದ ವಸ್ತುಗಳನ್ನು ಭಾರತದ ವಾಯು ದಳದ ವಿಮಾನಗಳು, ತುಕಡಿ ಶಿಬಿರ ಹೂಡಿದ ಕಡೆಗಳಲ್ಲಿ ಗಾಳಿ ಕೊಡೆಗಳ ಮೂಲಕ ಎಸೆಯುತ್ತಿದ್ದವು. ಗಡಿ ಪ್ರದೇಶಗಳಲ್ಲಿ ಸೇವೆಯಲ್ಲಿರುವಷ್ಟು ಕಾಲವೂ ಈ ಸೈನಿಕ ಕುಟುಂಬಗಳೊಂದಿಗೆ ಅವರ ಯೂನಿಟ್ ಕಮಾಂಡರ್‌ಗಳೇ ಪತ್ರವ್ಯವಹಾರ ನಡೆಸುತ್ತಿದ್ದರಲ್ಲದೆ ಹಣವನ್ನೂ ಕಳುಹಿಸಿಕೊಡುತ್ತಿದ್ದರು.

"ನಿಮ್ಮ ಮಗನು ರಾಷ್ಟ್ರಕ್ಕೆ ಮಹತ್ತಾದ ಸೇವೆ ಸಲ್ಲಿಸುತ್ತಿದ್ದಾನೆ. ಏನೂ ಗಾಬರಿಯಾಗಬೇಡಿ."

"ನಿಮ್ಮ ಧೀರನಾದ ಪತಿ ತಾಯ್ನಾಡಿನ ಸೇವೆಗಾಗಿ ತ್ಯಾಗಮಾಡುತ್ತಿದ್ದಾನೆ ಎಂದು ತಿಳಿಯುವಾಗ ನಿಮಗೆ ಹೆಮ್ಮೆಯೆನಿಸುವುದಿಲ್ಲವೆ? ನಿಮಗೆ ಶುಭ ಹಾರೈಕೆಗಳು."

ರಾಮಚಂದ್ರನ ತಾಯಿಗೂ ಶುಭಹಾರೈಕೆಗಳು ದೊರೆಯುತ್ತಲೇ ಇದ್ದವು. ಅವನಾದರೋ ಚೇಕ್ಕೆ ಎಂಬ ಗ್ರಾಮದಲ್ಲಿ ಜ್ವರ ಪೀಡಿತನಾಗಿ ಆಚೆಯೋ ಈಚೆಯೋ ಎಂದು ಗೊತ್ತಾಗದ ಹಂತದಲ್ಲಿ ಬಿದ್ದುಕೊಂಡಿದ್ದ.

ತನ್ನ ವಿಚಾರವಾಗಿ ಯಾರಾದರೂ ತನ್ನ ತಾಯಿಗೆ ಬರೆಯುತ್ತಿದ್ದಾರೆಯೋ ಎಂದು ರಾಮಚಂದ್ರನಿಗೆ ತಿಳಿಯದು. ತಿಳಿದರೂ ಆತನ ತಕರಾರುಗಳೇನೂ ಇರಲಾರದು. ಆತ ಯಾವತ್ತೂ ತಾಯಿಯನ್ನು ಮೋಸಗೊಳಿಸುತ್ತಲೇ ಇದ್ದ. ಒಬ್ಬ ಪಾರಾಶೂಟ್ ಭಟನ ಬದುಕಿನ ಬಗ್ಗೆ ಆಪ್ತ ಜನರಿಗೆ ಏನೊಂದೂ ತಿಳಿದಿರಲಾರದು. ತೆರೆಯಲ್ಪಡುತ್ತಿರುವ ರೇಶಿಮೆ ಕೊಡೆಯೊಂದಿಗೆ ಅನಂತ ಗಗನದಿಂದ ಆತ ಕೆಳಗೆ ಧುಮುಕುತ್ತಿರುವಾಗಲೇ ನಾನು ಸುಖವಾಗಿದ್ದೇನೆ ಎಂಬ ನಾಲ್ಕು ದಿನದ ಹಿಂದಿನ ಆತನ ಪತ್ರವನ್ನು ಆತನ ತಾಯಿ ಓದುತ್ತಿರಲೂ ಬಹುದು. ಆಗಸದಿಂದ ಕೆಳಗೆ ಧುಮುಕುತ್ತಿರುವಾಗಲೆಲ್ಲ ಈ ತಮಾಷೆಯ ಕುರಿತೇ ರಾಮಚಂದ್ರ ಯೋಚಿಸುತ್ತಿದ್ದ.

ಗುಂಗುರುಗೂದಲೂ ಸಾಮಾನ್ಯ ಎತ್ತರವೂ ಮಸುಕು ಮೈಬಣ್ಣವೂ ಇದ್ದ ಈ ಯುವಕ ಯಾವತ್ತೂ ಯಾವುದಕ್ಕೂ ತಯಾರಾಗಿಯೇ ಇರುತ್ತಿದ್ದ. ಯಾವುದೇ ಗಂಡಾಂತರದಲ್ಲೂ ಒಮ್ಮೆ ತಲೆಹಾಕಿ ನೋಡಬೇಕೆಂಬ ಆತುರ ಆತನ ಕಪ್ಪಗಿನ ಕಣ್ಣುಗಳಿಂದ ಇಣುಕುತ್ತಿರುವಂತೆ ಭಾಸವಾಗುತ್ತಿತ್ತು. ಇದನ್ನು ಹವಿಲ್ದಾರ್ ಗಂಗಾಪ್ರಸಾದ ಚೆನ್ನಾಗಿ ಮನಗಂಡಿದ್ದ. ಆದುದರಿಂದ ತಾನು ಹೋಗುವಲ್ಲೆಲ್ಲ ರಾಮಚಂದ್ರನೂ ತನ್ನ ಜೊತೆಯಲ್ಲಿರಬೇಕೆಂದು ಆತ ಆಗ್ರಹಿಸುತ್ತಿದ್ದ. ಸ್ಪೆಷಲ್ ತುಕಡಿಯಲ್ಲಿ ಹವಿಲ್ದಾರರ ಜೊತೆ ಸಹಜವಾಗಿಯೇ ರಾಮಚಂದ್ರನೂ ಹೊರಡಬೇಕಾಯಿತು.

ಜೀವನವನ್ನು ಹಸಿಯಾಗಿಯೇ ಸವಿಯಲು ಆತ ಹಾತೊರೆಯುತ್ತಿದ್ದ ಜೀವನವನ್ನು ಅಂಗೈಯಲ್ಲಿಟ್ಟು ಆಡಿಸುತ್ತಿರುವಾಗ ಮಾತ್ರವೇ ಈ ದರಿದ್ರ ಯುವಕನಿಗೆ ತೃಪ್ತಿ. ಆತನ ಮುಂದೆ ತಾಯಿಯು ನೂರಾರು ತಕರಾರುಗಳನ್ನು ಎತ್ತು

ತ್ತಿದ್ದಳು. "ನಿನ್ನ ಮುಖ ನೋಡ್ತಾನೇ ನನ್ನ ಕಣ್ಣು ಮುಚ್ಚಬೇಕು ಕಣೋ?" ಎಂದು ಆಕೆ ಹೇಳಿದರೆ "ನಾನೇನು ಈಗಲೇ ಸಾಯುತ್ತೇನೆಯೋ?" ಎಂದು ಈತ ತಟಕ್ಕನೆ ಮರುಪ್ರಶ್ನೆ ಹಾಕುತ್ತಿದ್ದ.

ಈಗಲಾದರೋ ರಾಮಚಂದ್ರ ಸಾವಿನ ದವಡೆಯಲ್ಲಿ ಸಿಲುಕಿದ್ದಾನೆ. ಕ್ಯಾಪ್ಟನ್ ಹಾಗೂ ಸಂಗಡಿಗರು ಆಗಲೇ ಆತನ ಆಸೆಯನ್ನು ಬಿಟ್ಟಿದ್ದಾರೆ.

ಅನೇಕ ತಿಂಗಳುಗಳ ಕಾಲ ಅವರು ಯಾವುದೇ ಗಂಡಾಂತರಗಳಿಗೆ ಗುರಿಯಾಗದೆ ತಮ್ಮ ಪ್ರವಾಸವನ್ನು ಯಶಸ್ವಿಯಾಗಿ ಮುಂದುವರಿಸಿದ್ದರು. ಪದರುಪದರಾಗಿ ಬಿದ್ದುಕೊಂಡಿದ್ದ ಬೆಟ್ಟಗಳನ್ನು ಹತ್ತಿ ಇಳಿದೂ ನದಿಗಳನ್ನೂ ತೊರೆಗಳನ್ನೂ ಅಡ್ಡಕ್ಕೆ ದಾಟಿದೂ ಅವರು ಒಂದು ಗ್ರಾಮದಿಂದ ಇನ್ನೊಂದು ಗ್ರಾಮಕ್ಕೆ ಭೇಟಿ ಕೊಡುತ್ತಾ ಹೋಗಿದ್ದರು. ಅಲ್ಲೆಲ್ಲಾ ಪ್ರಕೃತಿ ಮಾತ್ರವಲ್ಲ ಮನುಷ್ಯನ ರೀತಿರಿವಾಜುಗಳೂ ವ್ಯತ್ಯಸ್ಥವಾಗಿದ್ದವು. ತಮಗೆ ರೂಢಿಯಾಗಿದ್ದ ಪ್ರತಿಯೊಂದು ಸಾಮಾಜಿಕ ಕಟ್ಟಳೆಗಳನ್ನೂ ಮೋಹನ್‌ವಾಡಿ ಕ್ಯಲು ನಿಲ್ದಾಣದಲ್ಲೇ ಅವರು ಬಿಟ್ಟುಬಿಟ್ಟಿದ್ದರು. ಬಣ್ಣ ಬಣ್ಣದ ಅಂಗಿಗಳಂಥ ಕುಚಾವರಣಗಳನ್ನು ಕಟ್ಟಿಕೊಂಡಿದ್ದ ಹೆಣ್ಣುಮಕ್ಕಳು ದೊಡ್ಡ ಕತ್ತಿಗಳಿಂದ ನೆಲವನ್ನು ಅಗೆದು ಕೆಸರು ಮಾಡಿ ಅಗಿ ನೆಡುತ್ತಿದ್ದರು. ಅವರ ಮೂಗುಗಳ ಇಬ್ಬದಿಯಲ್ಲೂ ತೂತು ಮಾಡಿ ಕಡ್ಡಿಗಳನ್ನು ಹಾಕಿಕೊಂಡಿರುತ್ತಿತ್ತಲ್ಲದೆ ಮುಖಗಳೂ ಮೂರ್ತಿ ಹಚ್ಚೆ ಚುಚ್ಚಿದ್ದ ಕಾರಣ ಗಲೀಜಾಗಿರುತ್ತಿದ್ದವು.

ಕಾಡರ ಕೊಂಪೆಯನ್ನು ತಲಪಿದೊಡನೆ ತಿತ್ತೋರಿಪ ಗಾಂಬಡೆಯನ್ನು ಕರೆಯುತ್ತಿದ್ದ. ಅದರ ಮೊದಲೇ ತುಕಡಿಯು ಆಗಮನದ ಸುದ್ದಿ ಇಡೀ ಗ್ರಾಮಕ್ಕೇ ತಿಳಿದಿರುತ್ತದೆ– ಆದಿವಾಸಿಗಳಿಗೆ ತಮ್ಮದ್ದೇ ಆದ ಸಂದೇಶ ಮಾಧ್ಯಮಗಳಿರುತ್ತವೆ. ಬತ್ತಲೆ ಮೈಯ ಗಂಡಸರು ಗುಡಿಸಲುಗಳಿಂದ ಇಳಿದು ಬರುತ್ತಿದ್ದರು. ಹೆಂಗಸರು ಅಲ್ಲೆಲ್ಲೂ ಇರುವ ಯಾವುದೇ ಕುರುಹೂ ಕಾಣಿಸಲಾರದು. ಆಕ್ರಮಿಗಳಾದ ನಾಗರಿಕ ಮನುಷ್ಯರಿಗೆ ಹೆದರುತ್ತಾ ಹೆಂಗಸರು ಗುಡಿಸಿಲಿನೊಳಗೇ ಅವಿತುಕೊಂಡಿರಬಹುದು.

ಮೊದಲು ಡೇರೆಯ ನಿರ್ಮಾಣಕ್ಕಾಗಿ ಮಟ್ಟಸವಾದ ಸ್ಥಳದ ಆಯ್ಕೆಯಾಗುತ್ತದೆ. ಬಳಿಕ, ಅವರು ತಂದಿದ್ದ ಸಲಕರಣೆಗಳನ್ನು ಬಳಸಿ, ಆದಿವಾಸಿಗಳು ಬಿದಿರ ಕಾಲುಗಳನ್ನು ನೆಟ್ಟು, ಅವುಗಳ ಮೇಲೆ ಬಿದಿರುಗಳನ್ನೇ ಬಿಗಿದು ಮಂಚಗಳನ್ನು ತಯಾರಿಸುತ್ತಾರೆ. ಇನ್ನೊಂದು ಕಡೆ ಸಾಮಾನುಗಳನ್ನು ಜೋಡಿಸಿ ಇಡುತ್ತಾರೆ. ಅವರಲ್ಲೇ ಕೆಲವರು ಬೆಂಕಿಯನ್ನು ಹೊತ್ತಿಸಿ ಒರತೆಯಿಂದ ನೀರು ತಂದು ಕುದಿಸುತ್ತಾರೆ. ರಾಮಚಂದ್ರ ಹಾಗೂ ಗಂಗಾಪ್ರಸಾದ್ ವಯರ್‌ಲೆಸ್ಸನ್ನು ತೆರೆದು ತಮ್ಮ ಆಗಿನ ಸ್ಥಿತಿಗತಿಗಳನ್ನು ಕೇಂದ್ರ ಕಛೇರಿಗೆ ತಿಳಿಸುತ್ತಾರೆ.

ದುಭಾಷಿಯು ನೆರವಿನೊಂದಿಗೆ ಕ್ಯಾಪ್ಟನ್ ಹಂದು ಹಾಗೂ ಗಾಂಬಡೆಯು ಮಾತುಕತೆ ಸಾಗುತ್ತದೆ.

ತುಕಡಿ ಇಲ್ಲಿ ಎರಡೋ ಮೂರೋ ದಿನ ಬೀಡುಬಿಡುತ್ತದೆ. ಕಟ್ಟಿಗೆ ಮತ್ತು ನೀರು ಬೇಕಾಗುತ್ತದೆ. ಆದಿವಾಸಿಗಳು ಬೇಟೆಗೆ ಹೋಗುತ್ತಿದ್ದರೆ, ಜಿಂಕೆ ಮಾಂಸ ಸಿಗುವುದಾದರೆ ಸಂತೋಷ. ಅಥವಾ ತುಡ ನಾಳೆಯೋ ಇಲ್ಲಿಂದ ಹೊರಡುತ್ತದೆ. ಹೊರೆ ಸಾಗಿಸಲು ಕೂಲಿಯಾಳುಗಳು ಬೇಕಾಗಿದ್ದಾರೆ. ಇವತ್ತಿನ ಕೂಲಿಗಳು ತಮ್ಮ ಗ್ರಾಮಕ್ಕೆ ಹಿಂತಿರುಗುತ್ತಾರೆ. ಗಾಂಬಡೆ ಎಲ್ಲಾ ಅನುಕೂಲತೆಗಳನ್ನೂ ಒದಗಿಸುವುದಾಗಿ ವಾಗ್ದಾನ ಮಾಡುತ್ತಾನೆ. ಕ್ಯಾಪ್ಟನ್, ಗಾಂಬಡೆಗೆ ಪ್ರತ್ಯೇಕವಾಗಿಯೂ ಗ್ರಾಮಸ್ಥರಿಗೆ ಸಾರ್ವತ್ರಿಕವಾಗಿಯೂ ಬಿಳಿಲು ಉಪ್ಪು ಮತ್ತು ಬಟ್ಟೆಗಳನ್ನು ಉಡುಗೊರೆ ಮಾಡುತ್ತಾನೆ.

ಎಲ್ಲಾ ವ್ಯವಸ್ಥೆಗಳೂ ಪೂರ್ತಿಯಾಗುತ್ತಲೇ ಕ್ಯಾಪ್ಟನ್, ಹವಿಲ್ದಾರ್ ಹಾಗೂ ನಾಯಕ್‌ಗಳು ಒಂದೆಡೆ ಕುಳಿತು ಮದ್ಯಪಾನವನ್ನು ಪ್ರಾರಂಭಿಸುತ್ತಾರೆ. ಅಂತಸ್ತಿನ ತಾರತಮ್ಯಗಳೆಲ್ಲಾ ಎಂದೋ ಮಾಯವಾಗಿದ್ದವು. ಕುಡಿದು ಸ್ಮಿಮಿತ ತಪ್ಪಿದಾಗ ಹವಿಲ್ದಾರ್ ಗಂಗಾಪ್ರಸಾದ್ ಕ್ಯಾಪ್ಟನ್‌ನ ತೊಡೆಯ ಮೇಲೆ ಉರುಳುತ್ತಾ ಬಿಕ್ಕಳಿಸು

ತ್ತಾನೆ:

"ಸಾಬ್."

"ಏನು ಗಂಗಾಪ್ರಸಾದ್?"

"ನನ್ನ ಬಂಗಾರದಂಥ ಸಾಬ್. ತಮ್ಮಂಥ ಒಬ್ಬ ಸಾಹೇಬ್ರ ಜೊತೆ ಕೆಲಸ ಮಾಡೋ ನಾವೇ ಅದೃಷ್ಟವಂತರು ಸಾಬ್."

ಆತ ಕ್ಯಾಪ್ಟನ್‌ನ ಬೆಳೆದು ದಟ್ಟವಾಗಿರುವ ಗಡ್ಡವನ್ನು ನೇವರಿಸತೊಡಗುತ್ತಾನೆ. ಕೆದರಿಕೊಂಡಿರುವ ಗಡ್ಡದ ಕೂದಲುಗಳನ್ನು ಚಿವುಟಿ ಎಳೆಯುತ್ತಾನೆ. ಆತನ ಕಣ್ಣುಗಳಿಂದ ಕಣ್ಣೀರೂ ಧಾರೆ ಧಾರೆಯಾಗಿ ಹರಿಯುತ್ತಾ ಇರುತ್ತದೆ. ಈ ಹೊಸ ವರಸೆಯನ್ನು ಕಂಡು ರಾಮಚಂದ್ರ ಸೋಜಿಗ ಪಡುತ್ತಾನೆ. ಬುಟ್ಟಿಗೆ ಹಾಕುವುದರಲ್ಲಿ ಗಂಗಾಪ್ರಸಾದ್ ನಿಸ್ಸೀಮನಾಗಿದ್ದ. ಹೊಸ ಸ್ಥಳದಲ್ಲಿ ಹೊಸ ವರಸೆ!

ರಾಮಚಂದ್ರ ತನ್ನನ್ನು ನೋಡುತ್ತಿರುವುದನ್ನು ಗಂಗಾಪ್ರಸಾದ್ ಗಮನಿಸಿದ್ದ.

"ನನ್ನ ಬಂಗಾರದಂಥ ಸಾಬ್!" ಆತ ಬಿಕ್ಕಳಿಸುತ್ತಾ ಕರೆದ.

"ಏನು ಗಂಗಾಪ್ರಸಾದ್?"

"ನನ್ನ ರಾಮಚಂದ್ರನನ್ನ ನೋಡಿ ಸಾಬ್. ಎಂಥ ಜವಾನ್! ಎಂಥ ಮೆಕೇನಿಕ್! ಅವನು ಮುಟ್ಟಿದರೆ ಹಾಳಾದ ಸೆಟ್ಟು ಕೂಡ ಹಾಡುತ್ತದೆ ಅವನು ಇಲ್ಲದೆ ಹೋದರೆ ನಾನು ವಯರ್‌ಲೆಸ್ ಸೆಟ್ಟನ್ನು ವಹಿಸಿಕೊಳ್ಳುತ್ತಾನೇ ಇರಲಿಲ್ಲ. ತಾವು ರಾಮಚಂದ್ರನನ್ನ ಮರೀಬಾರದು. ಅವನಿಗೆ ಭಡ್ತಿ ಕೊಡಬೇಕು ಸಾಬ್. ಅವನ ತೋಳಿಗೆ ಗೆರೆ ಹಾಕಿದ್ದನ್ನ ನಾನು ನೋಡಬೇಕು ಸಾಬ್. ಇದೊಂದೇ ನನ್ನ ಆಸೆ ಸಾಬ್. ತಾವು ಎಷ್ಟೊಂದು ಒಳ್ಳೆಯವರು ಸಾಬ್."

ಕ್ಯಾಪ್ಟನ್ ಹುಡುಗನ ತಲೆಗೂ ಏರಿರಬಹುದು. ತನಗೆ ಬೇಕಾದವರನ್ನು ಅಂಕೆಯಲ್ಲಿಟ್ಟುಕೊಳ್ಳುವ ಕಲೆಯೂ ಆತನಿಗೆ ಚೆನ್ನಾಗಿ ಗೊತ್ತು.

"ಆಗಲಿ, ಪ್ರಸಾದ್‌ಜಿ." ಕ್ಯಾಪ್ಟನ್ ಹೇಳುತ್ತಾನೆ.

"ಹೆಡ್ ಹವಿಲ್ದಾರ್ ಕೋಡ್, ನಾಯಕ್ ಬಾಘೂರಾವ್; ನೀವಿಬ್ಬರೂ ಪ್ರತಿಯೊಬ್ಬ ಸಿಪಾಯಿಯ ಹೆಸರನ್ನೂ ಇವತ್ತೇ ನನಗೆ ಬರೆದು ಕೊಡಬೇಕು. ನಮ್ಮ ಈ ಮಹತ್ತರ ಸೇವೆ ಮುಗಿಯುತ್ತಲೇ ಇವರನ್ನೆಲ್ಲಾ ಪ್ರಮೋಟ್ ಮಾಡೋಣ. ರಾಮಚಂದ್ರ, ಹಂಸರಾಜ್, ಬಿಕ್ಕು–ಎಲ್ಲರೂ ಗೆರೆ ಹಾಕಿಕೊಳ್ಳಲಿ. ಅಳಬೇಡಿ ಗಂಗಾಪ್ರಸಾದ್. ನೀವು ಅಳೋದನ್ನ ನೋಡುವಾಗ ನನಗೆ ನನ್ನ ಅಪ್ಪನ ನೆನಪಾಗುತ್ತದೆ. ಮತ್ತೆ ನಾನೂ ಅತ್ತು ಬಿಟ್ಟೇನು. ಕ್ಯಾಪ್ಟನ್ನೊಬ್ಬ ಅಳೋದಾದ್ರೂ ಹೇಗೆ?..."

ಅಷ್ಟರಲ್ಲೇ ಅಸ್ಸಾಂ ರೈಫಲ್ಸ್‌ನ ಬಿಕ್ಕು ಹಾಗೂ ಹಂಸರಾಜ್ ಕಾಡರ ಭಾಷೆಯಲ್ಲಿ ಸಂಭಾಷಣೆ ಶುರು ಮಾಡಿರುತ್ತಾರೆ.

"ಅವ ಅಲಯ."

"ಅಲುದ ಅಲುದ ಅಲು ಅಯ..."

ಬಿಕ್ಕುವಿಗೆ ಪೂರ್ತಿ ಹೇಳಲಿಕ್ಕೆ ಬಾರದು; ಉಪ್ಪು ಕೊಟ್ಟು ಹೆಣ್ಣುಗಳನ್ನು ಒಲಿಸಬಹುದೆಂದೇ ಆತ ಮಿತ್ರನಿಗೆ ಬೋಧಿಸುತ್ತಿದ್ದ.

ಒಲೆಯಲ್ಲಿ ಕಟ್ಟಿಗೆ ಸಿಡಿಯುತ್ತಿದ್ದ ಶಬ್ದವನ್ನನು ಕರಿಸುತ್ತಾ ಒಬ್ಬಾತ ಟಪ್ ಟಪ್‌ನಿಂದ ತೊಡಗಿ ಲೆಫ್ಟ್ ರೈಟಿನಲ್ಲಿ ಕೊನೆಗೊಂಡ ಪದವೊಂದನ್ನು ರಚಿಸಿ ಹಾಡಿದ. ಪ್ರತಿಯೊಬ್ಬರೂ ಬಂದು ದಿನದ ಆಯಾಸವನ್ನೂ ಬಹು ದಿನಗಳ ಚಟಪಟಿಕೆಯನ್ನೂ ಅಷ್ಟರಲ್ಲೇ ಮರೆತಿದ್ದರು.

ಕತ್ತಲೆ ಕವಿಯತೊಡಗಿದಾಗ ಕಾಡರು ಗ್ರಾಮದ ಬಳಿ ಕಟ್ಟಿಗೆಯನ್ನು ರಾಶಿ ಹಾಕಿ ಬೆಂಕಿ ಹೊತ್ತಿಸಿದರು. ಬೇಟೆಗೆ ಹೋದವರು ಮರಳಿ ಬರುವ ಹೊತ್ತಾಗಿತ್ತು. ಮಾಂಸದ ತುಂಡುಗಳನ್ನು ಬೆಂಕಿ ಹಾಕಿ ಸುಡುತ್ತಾ ಅವರು ಭಗ್ಗನೆ ಉರಿಯುತ್ತಿರುವ ಬೆಂಕಿಯ ಸುತ್ತಲೂ ಕುಣಿದಾಡುತ್ತಾರೆ. ಮೊದಮೊದಲು ನಿಮಗೆ ಭಯವಾದೀತು. ಯಾವುದೋ ನರಭಕ್ಷಕ ಕಿರಾತವರ್ಗದ ನೆನಪೂ ಆದೀತು. ಅಸ್ಸಾಂ ರೈಫಲ್ಸಿನ ಯೋಧರು ತುಂಬು ಬಂದೂಕುಗಳೊಂದಿಗೆ ಕಾವಲು ನಿಂತಿರುವರೆಂದು ಮತ್ತೆ ಸಮಾಧಾನ ತಂದುಕೊಳ್ಳಬಹುದು. ಇವರು ಬಿಲ್ಲು ಬಾಣಗಳನ್ನೇ ಬಳಸುತ್ತಾರೆ. ಸ್ವತಃ

ಕಡಿದ ತಲೆಯ ಬುರುಡೆಗಳನ್ನು ಕಲಾಕೃತಿಗಳ ಹಾಗೆ ಜೋಪಾನವಾಗಿ ಕಾದಿರಿಸುತ್ತಿದ್ದ ಕೆಲವು ಜನಾಂಗಗಳ ಬಗ್ಗೆ ಹಿಂದೆ ಓದಿದ್ದ ಸಂಗತಿಗಳು ನೆನಪಿಗೆ ಬರುತ್ತವೆ. ಕಾಡರ ಹಾಡು, ಕುಣಿತ, ಕೇಕೆ, ಆರ್ಭಟೆಗಳು ನಿಲುಗಡೆಗೆ ಬರುವತನಕ ನೀವು ಮುಸುಕೆಳೆದು ಮಂಚದ ಮೇಲೆ ಬಿದ್ದುಕೊಂಡಲ್ಲಿಂದಲೇ ಆಗಸವನ್ನೂ ನಕ್ಷತ್ರಗಳನ್ನೂ ಎವೆಯಿಕ್ಕದೆ ದಿಟ್ಟಿಸುತ್ತಾ ಇರುತ್ತೀರಿ. ಇಲ್ಲವೆ ನಿದ್ರೆಯಲ್ಲಿ ಭೀಕರ ಕನಸುಗಳನ್ನು ಕಂಡು, ಬೊಬ್ಬೆ ಹೊಡೆಯುತ್ತೀರಿ.

ಮರುದಿನ, ಮರದ ತೊಗಟೆಯಿಂದ ಮಾನ ಮುಚ್ಚಿರುವ ಹೆಣ್ಣು ಮಕ್ಕಳು ಗುಡಿಸಲುಗಳಿಂದ ಅವಿತವಿತು ಇಣುಕುತ್ತಾ ಇರುವುದು ನಿಮಗೆ ಗೋಚರಿಸೀತು. ಅವರ ದಷ್ಟಪುಷ್ಟವಾದ ಬೆಳ್ಳನ ಕಣಕಾಲುಗಳು ಕಡೆದು ತೆಗೆದ ಲಾವಣ್ಯದ ಹಾಗೆ ಕಂಡೀತು. ತುಕಡಿ ಎರಡೋ ಮೂರೋ ದಿನಗಳ ಕಾಲ ಅಲ್ಲೇ ಮೊಕ್ಕಾಂ ಹೂಡುತ್ತಿದ್ದರೆ ಈ ಹೆಣ್ಣುಗಳೂ ಮೆಲ್ಲಮೆಲ್ಲನೆ ಬಳಿ ಸಾರುತ್ತಾರೆ. ಅವರ ಪುಷ್ಟವಾದ ಎದೆಯನ್ನೂ ಆ ರಕ್ತ ತುಟಿಗಳನ್ನೂ ಕೆಂಪಡರಿದ ಕೆನ್ನೆಗಳನ್ನೂ ನೀಲಿ ಕಣ್ಣುಗಳನ್ನೂ ಬಿಟ್ಟು ಬಿಟ್ಟು ನೋಡುತ್ತಲೇ ನೀವು ಮುಖ ಮುಖ ನೋಡುತ್ತೀರಿ. ಮೊದ ಮೊದಲು ದಿಗಿಲು ಬೀಳುತ್ತೀರಿ. ತಮ್ಮ ಗಂಡಸರೊಂದಿಗೆ ಅವರೂ ಸೈನಿಕರೊಡನೆ ಬೆರೆಯುತ್ತಾರೆ. ಇಡಿಯ ದೇಹವನ್ನು ಉಣ್ಣೆಬಟ್ಟೆಗಳಿಂದ ಮುಚ್ಚಿರುವ, ಮುಖ ತುಂಬ ಬೆಳೆದ ಗಡ್ಡ ಮೀಸೆಗಳಿರುವ ಈ ಪರಿಣ್ಯಾರಿಗಳೂ ಅದ್ಭುತ ಜೀವಿಗಳೂ ಆದ ಮನುಷ್ಯರು ಆಕ್ರಮಿಗಳಲ್ಲ ಎಂದು ಅವರಿಗೆ ಮನವರಿಕೆಯಾಗಬೇಕು, ಅಷ್ಟೇ. ಅವರಿಗೂ ಕುತೂಹಲವೆ. ಯಾವತ್ತೂ ಚಳಿ ಬಿಡದ ಈ ಹಿಮಾಲಯ ಸೀಮೆಯ ಗಂಡಸರಿಗೆ ಗಡ್ಡ ಮೀಸೆಗಳೇ ಇರುತ್ತಿರಲಿಲ್ಲ. ಹುಬ್ಬುಗಳು ಕೂಡ ಇಲ್ಲದ ಮುಖಗಳೂ ಕೆಲವೊಮ್ಮೆ ಕಣ್ಣಿಗೆ ಬೀಳುತ್ತವೆ. ಕೊಳೆ ಮುಸುಕಿದ ಬಂಗಾರದ ಹಾಗಿರುವ ಅವರ ಮೈಯನ್ನು ಮೈ ತುಂಬಾ ಬಟ್ಟೆ ತೊಟ್ಟು, ರೋಮಾವೃತವಾಗಿರುವ ಹೊಸ ಮನುಷ್ಯರ ಒಡಲನ್ನೂ ಬಿಟ್ಟು ಬಿಟ್ಟು ಎಷ್ಟೇ ಹೊತ್ತು ನೋಡಿದರೂ ಆ ಹೆಣ್ಣುಗಳ ಕುತೂಹಲ ತಣಿಯುತ್ತಿರಲಿಲ್ಲ.

ಹೆಂಗಸರೊಂದಿಗೆ ರಹಸ್ಯವಾಗಿ ವ್ಯವಹರಿಸಬಾರದೆಂಬ ಕಟ್ಟಾಜ್ಞೆ ಇದೆ. ಆದಿವಾಸಿಗಳೆಡೆಯಲ್ಲಿ ವ್ಯಭಿಚಾರ ಹಾಗೂ ಅತ್ಯಾಚಾರಗಳು ಅತಿ ದೊಡ್ಡ ಅಪರಾಧಗಳಾಗಿವೆ. ಆದರೂ ಒಲಿದ ಹೆಣ್ಣನ್ನು ನೀವು ಬಹಿರಂಗವಾಗಿ ಲಗ್ನ ಮಾಡಬಹುದು. ಸೈನಿಕರ ಬಳಿಯಲ್ಲಿರುವ ಬಹಳಷ್ಟು ವಸ್ತುಗಳನ್ನು ಅವರು ಈ ತನಕ ಕಂಡಿರಲಾರರು. ಬೆನ್ನು ಚೀಲಗಳ ಹಿತ್ತಾಳೆ ಬಕ್ಕಲುಗಳನ್ನು ಕಿವಿಯಲ್ಲಿ ಜೋತಾಡಿಸಲು ಕತ್ತರಿಸಿ ಕೊಡಿ ಎಂದು ಅವರು ಸನ್ನೆಮಾಡಿ ಬೇಡಿಕೊಂಡಾರು. ಒಬ್ಬಾಕೆಗೆ ಉಪ್ಪು ಜೋಪಾನವಾಗಿರಿಸಲಿಕ್ಕೆ ಅಲುಮಿನಿಯಮಿನ ಸಾಬೂನು ಪೆಟ್ಟಿಗೆಯೇ ಬೇಕಾಗುತ್ತದೆ. ಅವರನ್ನೊಮ್ಮೆ ಸಂತಸಪಡಿಸಲು ಸಾಧ್ಯವಾದರೆ, ಆ ಪಾಪದ ಹೆಣ್ಣುಗಳು ಆಡಿನ ಮರಿಗಳ ಹಾಗೆ ನಿಮ್ಮ ಬಳಿಯಲ್ಲೇ ಬಿದ್ದಿರುತ್ತಾರೆ. ಆಗ ಸೈನಿಕರು ಅವರೊಂದಿಗೆ ಆಡುತ್ತಾ ಅವರನ್ನು ಕಚಕುಳಿಯಿಟ್ಟು ನಗಿಸುತ್ತಾ ಮುದ್ದಿಸುತ್ತಾ ಎದೆಗೊತ್ತಿ ಬಿಗಿಬಿಗಿದಪ್ಪುತ್ತಾ ಇರುತ್ತಾರೆ.

ಅಥವಾ ತುಕಡಿ ಮರುದಿನವೇ ಹೊರಟುಬಿಡುತ್ತಿದ್ದರೆ ಗಾಂಬಡೆ ಹೊರೆಯಾಳುಗಳನ್ನು ಕರೆದು ತರುತ್ತಾನೆ. ಹೆಂಗಸರೂ ಇರುತ್ತಾರೆ. ಮರದ ತೊಗಟೆಯನ್ನಾಗಲಿ ಹೆಣೆದ ಹುಲ್ಲನ್ನಾಗಲಿ ಬಳಸಿ ಅವರು ಮಾನ ಮುಚ್ಚಿರುತ್ತಾರೆ. ಅವರತ್ತ ಕಣ್ಣು ಹಾಯಿಸುತ್ತಲೇ ಸೈನಿಕರು ಪರಸ್ಪರ ಮುಖ ನೋಡುತ್ತಾ ತಲೆ ತಗ್ಗಿಸಿಬಿಡುತ್ತಾರೆ.

"ಓ ದೇವರೇ!"

"ನಿಲ್ಲಿ ನಿಲ್ಲಿ!" ಕ್ಯಾಪ್ಟನ್ ಕೂಗಿ ಹೇಳುತ್ತಾನೆ.

"ಏನಾಯ್ತು, ಸಾಬ್?" ದುಭಾಷಿಯ ಪ್ರಶ್ನೆ।

"ಅವರಿಗೆ ಕೊಂಚ ಬಟ್ಟೆ ಕೊಡಬೇಕು."

ಗಾಂಬಡೆ ಹೆಂಗಸರನ್ನಟ್ಟಿಕೊಂಡು ಗುಡಿಸಲಿಗೆ ಹಿಂತಿರುಗುತ್ತಾನೆ. ಸೈನಿಕರೂ ... ಕಾಡರೂ

ಒಟ್ಟಾಗಿ ಹಳೆ ಬಟ್ಟೆಗಳನ್ನು ಕತ್ತರಿಸಿ ಚಿಕ್ಕಚಿಕ್ಕ ಈ ಉಡುಪುಗಳನ್ನು ಹೊಲಿಯುತ್ತಾರೆ. ಮುಂದೆ, ಮುಂದಿನ ಗ್ರಾಮ ತಲಪಿದ ಬಳಿಕ ಗುಂಬಡೆಯಿಂದ ಹೊರೆ ಸಾಗಿಸಲು ಬರಲಿರುವ ಹೆಂಗಸರ ಲೆಕ್ಕ ಪಡೆಯುತ್ತಾ ಅವರಿಗಾಗಿ ಹಿಂದಿನ ದಿನವೇ ಚಿಕ್ಕ ಉಡುಪುಗಳನ್ನು ಕಳುಹಿಸಿ ಕೊಡುವ ವ್ಯವಸ್ಥೆಯಾಗಿತ್ತು. ಹಾಗಾಗಿ ಸೊಂಟ ಮತ್ತು ಎದೆಯನ್ನು ಮರೆ ಮಾಚಿದ, ಹೊರೆ ಹೊತ್ತ ಹೆಂಗಸರೂ, ಯೋಧರ ಮಧ್ಯದಲ್ಲೇ ಹೆಜ್ಜೆ ಹಾಕಿದರು. ಅನಂತರವೂ ಅವರು, ಪದರು ಪದರಾಗಿ ಬಿದ್ದುಕೊಂಡಿರುವ ಬೆಟ್ಟಗಳನ್ನು ಹತ್ತಿ ಇಳಿದರು. ತೂಗು ಸೇತುವೆಗಳಿದ್ದ ಹೊಳೆಗಳನ್ನೂ ತೊರೆಗಳನ್ನೂ ದಾಟಿದರು. ದೂರದೂರದ ಶುಭ್ರ ನೀಲವಾದ ದಿಗಂತದಲ್ಲಿ ಬೆಳ್ಳಿ ಗುಡಾಣಗಳ ಹಾಗೆ ಹಿಮಾಲಯದ ಬೆಟ್ಟ ಸಾಲುಗಳು ಗೋಚರಿಸುತ್ತಿದ್ದವು. ಸದಾ ಹೊತ್ತು ಮಳೆ ಹನಿಯುತ್ತಾ ಇಲ್ಲವೇ ಹಿಮ ಜಿನುಗುತ್ತಾ ಇರುತ್ತದೆ. ದಾರಿಯುದ್ದಕ್ಕೂ ಕಿರು ತೊರೆಗಳ ಮೂಲಕ ಒಂತೆ ನೀರು ಹರಿಯುತ್ತಾ ಇರುತ್ತದೆ. ತೋಟಾ ತುಂಬಿದ್ದ ಕೋವಿಯನ್ನು ಹೆಗಲಿಗೇರಿಸಿದ ಯೋಧರು ಐದೋ ಆರೋ ಮಂದಿ ಜೊತೆಯಾಳುಗಳೆಡೆಯಲ್ಲಿ ಒಂಟಿ ಹೆಜ್ಜೆ ಹಾಕುತ್ತಾ ತಂತಮ್ಮ ಮನಸ್ಥಿತಿಯನ್ನು ಮನಸ್ಸಿನಲ್ಲೇ ರಚಿಸುತ್ತಿದ್ದರು. ತಮ್ಮ ಕುಟುಂಬದವರ ಬಗೆಗಿನ ಗಾಢ ಚಿಂತೆಯಲ್ಲಿ ಮಗ್ನರಾಗಿ ದಾರಿಯ ಪರಿ

ವೆಯ ಇಲ್ಲದೆ ಮುಂದೆ ಸಾಗಿಸುತ್ತಿದ್ದರು.

ಮುಂದುಗಡೆ ಯಾವತ್ತೂ ರಾಮಚಂದ್ರನೇ ಇರುತ್ತಿದ್ದ. ಕಳೆದ ವಾರಗಳೂ ತಿಂಗಳುಗಳೂ ಬಳಿಕವೂ ಈ ಬದುಕಿನೊಡನೆ ಸಲುಗೆಯೇ ಬೆಳೆದಿದೆ. ಅವಕಾಶ ದೊರೆಯುವುದು ಒಮ್ಮೆ ಮಾತ್ರ. ದೊರೆತ ಅವಕಾಶವನ್ನು ಬಲು ಚೆನ್ನಾಗಿ ಬಳಸಿಕೊಳ್ಳಬೇಕು. ಜೀವನವನ್ನು ಹಸಿ ಹಸಿಯಾಗಿಯೇ ನೋಡಿ ತಿಳಿದುಕೊಳ್ಳಬೇಕೆಂಬ ತನ್ನ ಸಾಹಸ ಪ್ರವೃತ್ತಿಯನ್ನಾತ ಒಮ್ಮೆಯೂ ದಣಿಯಗೊಡಲಿಲ್ಲ.

ದಡಗಳನ್ನು ಕೊಚ್ಚಿ ಹರಿಯುತ್ತಿದ್ದ ನದಿಯೊಂದರ ತೂಗು ಸೇತುವೆಯೊಂದರ ಮುಂದೆ ಆ ಕಾರವಾನ್ (ಪ್ರವಾಸಿ ತಂಡ) ಕೀಲಿಸಿ ನಿಂತುಬಿಟ್ಟಿತು. ಅಲ್ಲಿನ ಆದಿವಾಸಿಗಳು ಬೆತ್ತವನ್ನು ಹೆಣೆದು ನದಿಯ ಇಕ್ಕೆಲಗಳಲ್ಲೂ ಇದ್ದ ಮರಗಳಿಗೆ ತೊಟ್ಟಿಲಿನಂತೆ ಕಟ್ಟಿ ಹಾಕಿದ್ದ ಸೇತುವೆ ಗಾಳಿಯಲ್ಲಿ ಅಲ್ಲಾಡುತ್ತಾ ಇದ್ದರೆ ಕೆಳಗೆ ಸುಗ್ಗಿ ಹರಿಯುತ್ತಿದ್ದ ನದಿಯ ನೊರೆ ಹನಿಗಳು ಸೇತುವೆಯನ್ನು ಮೀರಿ ಎತ್ತರಕ್ಕೆ ಸಿಡಿಯುತ್ತಿದ್ದವು.

ಕ್ಯಾಪ್ಟನ್ ಹಂಡು ತನ್ನ ಸೈನಿಕರೆಡೆಗೆ ನೋಡಿದ. ಸೈನಿಕರು ತಮ್ಮ ಕಾಲಡಿಗಳನ್ನೇ ದಿಟ್ಟಿಸಿದರು. ರಾಮಚಂದ್ರ ಮಾತ್ರ ಮುಂದಕ್ಕೆ ಹೆಜ್ಜೆ ಇರಿಸಿದ್ದ. ಕ್ಯಾಪ್ಟನ್ ತನ್ನ ತಂಡದಲ್ಲಿರುವ ಈ ಏಕಮೇವ ಮದ್ರಾಸಿಯನ್ನು ಆಗಲೇ ಮೆಚ್ಚತೊಡಗಿದ್ದ.

“ದಾಟುತ್ತೀಯಾ?” ಕ್ಯಾಪ್ಟನ್‌ನ ಪ್ರಶ್ನೆ.

“ಜೀ, ಸಾಹೇಬ್!”

ತುಂಟತನ ತುಂಬಿಕೊಂಡಿದ್ದ ರಾಮಚಂದ್ರನ ಕಣ್ಣುಗಳು ಹೊಳೆಯುತ್ತಿದ್ದುದು ಕ್ಯಾಪ್ಟನ್ನನಿಗೆ ಕಾಣಿಸುತ್ತಿತ್ತು.

“ನಾ ದಾಟಬಹುದಾ?” ರಾಮಚಂದ್ರ ಕೇಳಿದ. ಮುಗುಳ್ನಗಲು ತುಸು ತೆರೆದಿದ್ದ ಆತನ ತುಟಿಗಳೆಡೆಯಿಂದ ಕೊಂಚ ಎಡೆ ಬಿಟ್ಟಿರುವ ಎದುರು ಸಾಲಿನ ಹಲ್ಲುಗಳು ಗೋಚರಿಸುತ್ತಿದ್ದುವು. ಕೇವಲ ಕುತೂಹಲದಿಂದಲೇ ಸೇತುವೆ ದಾಟಲು ಹೊರಟಂತಿತ್ತು ಅವನ ವರ್ತನೆ. ಕ್ಯಾಪ್ಟನ್ನನ ಮಟ್ಟಿಗೆ ಮುಗುಳ್ನಗುವುದು ತೀರ ಅನಿವಾರ್ಯವಾಗಿತ್ತು.

“ಓ ದಾಟಬಹುದು.”

ಬಂದೂಕನ್ನು ಬೆನ್ನಿಗೆ ಸರಿಯಾಗಿ ಸಿಗಿಸಿ ಮರವನ್ನೇರಿದ ರಾಮಚಂದ್ರ ತೂಗು ಸೇತುವೆಯ ಮೇಲೆ ಕಾಲಿರಿಸಿದಾಗ ಆತನಿಗೆ ಇಲಿ ಬೋನಿನ ನೆನಪಾಯಿತು. ಜನ ತೂರಿ ಹೋಗದಷ್ಟು ಒತ್ತೊತ್ತಾಗಿ ಬೆತ್ತದಿಂದ ಹೆಣೆಯಲ್ಪಟ್ಟ ಆ ಸೇತುವೆ ತೀವ್ರವಾಗಿ ಕುಲುಕಾಡತೊಡಗಿತು. ನಿಮಿರಿ ನಿಲ್ಲುವಂತಿಲ್ಲ. ಅರೆಬರೆ ಬಗ್ಗಿಕೊಂಡೇ ಅಂಬೆಗಾಲಿಡತೊಡಗಿದ.

ನದಿಯ ಮಧ್ಯಕ್ಕೆ ತಲ್ಪಿದಾಗ ಆತ ತನ್ನನ್ನೇ ಮರೆತಿದ್ದ. ಜೋಕಾಲಿಯಾಡುತ್ತಿರುವ ಸೇತುವೆಯ ಕೆಳಗೆ ಕಂದು ಬಣ್ಣದ ನೊರೆಯುಬ್ಬಿಸಿ ನುಗ್ಗಿ ಹರಿಯುತ್ತಿರುವ ನದಿ. ಆಗ ಆತ ತನ್ನ ತಾಯಿಯ ಕುರಿತೇ ಯೋಚಿಸಿದ. ನಿದ್ದೆ ಬರುವತನಕ ಅಮ್ಮ ಅವನನ್ನು ತೊಟ್ಟಿಲಲ್ಲಿ ತೂಗುತ್ತಿದ್ದಳು. ಅವನಾದರೂ ಉದ್ದೇಶಪೂರ್ವಕ ನಿದ್ದೆ ಮಾಡದೆ ಮಲಗಿರುತ್ತಿದ್ದ. ಅಮ್ಮ ಕಥೆ ಹೇಳುತ್ತಾ ಇದ್ದಾಳೆ, ನಿದ್ದೆ ಮಾಡಿದರೆ ಕಥೆಯನ್ನು ಪೂರ್ತಿ ಕೇಳಲು ಸಾಧ್ಯವಾಗದು. ಎಂದೆಂದೂ ತೊಟ್ಟಿಲಿನಲ್ಲೇ ಮಲಗಲಿಕ್ಕೂ ಸಾಧ್ಯವಾಗದು. ಅವನ ಅರಿವಿಗೆ ಬಾರದೆಯೇ ದೇಹ ಬೆಳೆಯುತ್ತದೆ ಮನಸ್ಸು ಬಲಿಯುತ್ತದೆ. ಅನ್ಯಾಯ! ಎಂಥ ಕೊನೆಯಿಲ್ಲದ ಜೋಕಾಲಿಯಾಟ ಇದು! ಓ ಅಮ್ಮಾ! ಮರುದಡ ಸೇರಿದಾಗ ಆತ ಸಂಪೂರ್ಣ ಬೆವರಿನಲ್ಲಿ ಮಿಂದಿದ್ದ.

ರಾಮಚಂದ್ರನ ಬಳಿಕ ಒಬ್ಬೊಬ್ಬರೇ ಆಗಿ ಉಳಿದವರೂ ಸೇತುವೆ ದಾಟಿದರು. ಆಚೆ ದಡ ತಲಪುತ್ತಲೇ ಪ್ರತಿಯೊಬ್ಬರೂ ನೆಲಕ್ಕುರುಳುತ್ತಿದ್ದರು. ಸುಗ್ಗಿ ಹರಿಯುತ್ತಿದ್ದ ನದಿಯತ್ತ ನೋಡುವಾಗ ಅವರ ಎದೆಯಾಳದಿಂದಲೇ ನಡುಕ ಹುಟ್ಟುತ್ತಿತ್ತು. ಆಚೆಗೊಮ್ಮೆ ದಾಟಬಹುದೆ? ಉಹುಂ ಇನ್ನು ಅಸಾಧ್ಯ.

ವಿಶ್ರಾಂತಿಯನ್ನೂ ಆಹಾರವನ್ನೂ ತೆಗೆದುಕೊಂಡ ಬಳಿಕ ಪುನಃ ಹೊರಟ ಅವರು ಹೋ

ದಂಡೆಯಲ್ಲೇ ಪ್ರಯಾಣವನ್ನು ಮುಂದುವರಿಸಿದರು. ಮುಂದಕ್ಕೆ ಹೋದಂತೆ ಇನ್ನಷ್ಟು ಕಷ್ಟಗಳಿದುರಾದವು. ಕಡಿದಾದ ಬೆಟ್ಟವನ್ನು ತೆವಳುತ್ತಾ ಹತ್ತಿದರು. ನದಿಯು ಬೆಟ್ಟಗಳೆಡೆಯಿಂದಲೇ ಭೋರ್ಗರೆದು ಹರಿಯುತ್ತಿತ್ತು. ಕಡಿದಾದ ಬೆಟ್ಟ ಇಳಿಜಾರಿನಲ್ಲಿ ಜಿನಗುತ್ತಿದ್ದ ಹಿಮಪದರುಗಳು ಥಳಥಳಿಸುತ್ತಿದ್ದುವು. ಬೆಟ್ಟದ ಮೊನಚು ನೆತ್ತಿಯಿಂದ (ಸಮತೋಲ ತಪ್ಪದ ಹಾಗೆ ಹೆಜ್ಜೆ ಎತ್ತ ಬೇಕಾಗುತ್ತದೆ. ಕಿರುಬೆರಳಿಗಿಂತಲೂ ಅಗಲ ಕಮ್ಮಿಯಿದ್ದ ಸ್ಥಳದಲ್ಲಿ ಬೂಟುಗಾಲಿನಿಂದ ತಟಕಾಡುತ್ತಾ ನಡೆಯುತ್ತಿರುವಾಗ ಅವರ ತೊಡೆಗಳು ತತ್ತರಿಸುತ್ತಿದ್ದವು. ತಮಗರಿವಿಲ್ಲದೆಯೇ ಅವರು ಬಗ್ಗಿ ಬಿಡುತ್ತಿದ್ದರು. ಕೊನೆಗೆ ನಡಿಗೆಯನ್ನೇ ನಿಲ್ಲಿಸಿದರು.

ಈಗ ಏನು ಮಾಡಬೇಕು?

ರಾಮಚಂದ್ರ ಹಿಂತಿರುಗಿ ನೋಡಿದ. ಆತನ ಹಿಂದೆ ಹೊರೆಯಾಳುಗಳೇ ಇದ್ದರು. ಕ್ಯಾಪ್ಟನ್ ಅಥವಾ ಹವಿಲ್ದಾರ್ ಕಾಣಿಸುತ್ತಾರೆಯೇ ಎಂದು ವಾಲಿಕೊಂಡು ನೋಡಿದ. ಕಾಣಿಸಿದರು. ಕ್ಯಾಪ್ಟನ್ ಹಿಂದು ಅಂಗೈ ತೋರಿಸಿದ ಕ್ಯಾಪ್ಟನ್ ಮುಖದ ಭಾವನೆ ಏನು ಹೇಳುತ್ತದೆಂದು ನೋಡಲು ಸಾಧ್ಯವಾಗಲಿಲ್ಲ.

"ನಡೀಬಹುದಾ?"

ಕ್ಯಾಪ್ಟನ್ ಸನ್ನೆ ಮಾಡಿದ. ರಾಮಚಂದ್ರ ಕೆಳಕ್ಕೆ ಕಣ್ಣು ಹಾಯಿಸಿದ. ಭೋರ್ಗರೆದು ನುಗ್ಗುತ್ತಿರುವ ನದಿ, ರಭಸದಿಂದ ತಿರುಗುತ್ತಿರುವ ಒಂದು ಬೃಹತ್ ಫ್ಲೈಬೆಲ್ಟಿನಂತೆ ತೋರುತ್ತಿತ್ತು,

ನಾನು ನಡೀತಾ ಇದ್ದೇನೆ.

ಆತ ಸನ್ನೆ ಮಾಡಿದ. ಕೋವಿಯನ್ನು ಊರಿ ಹಿಡಿಯುತ್ತಾ ಹೆಜ್ಜೆ ಹಾಕಿದ. ಶೀಘ್ರ ವೇಗದಲ್ಲಿ ತಿರುಗುತ್ತಿದ್ದ ಬೃಹತ್ ಫ್ಲೈಬೆಲ್ಟೊಂದರ ಮೇಲೆ ಅಡಿಯಿಟ್ಟು ನಡೆಯುತ್ತಿರುವ ಹಾಗೆ! ಭೋರ್ಗರೆದು ನುಗ್ಗುತ್ತಿರುವ ನದಿಯಾಗಲಿ ಕಡಿದಾದ ಬೆಟ್ಟದ ಇಳಿಜಾರಾಗಲಿ ಆತನಿಗೆ ಕಾಣಿಸಲಿಲ್ಲ. ಗದ್ದೆ ಹುಣಿಗಿಂತಲೂ ಅಗಲ ಕಿರಿದಾದ ಗಿರಿನೆತ್ತಿಯ ದಾರಿಯ ಬಗ್ಗೆ ಆತ ಯೋಚಿಸಲಿಲ್ಲ. ಬಂದೂಕಿನಿಂದ ಸಮತೋಲವನ್ನು ಹಿಡಿಯುತ್ತಾ ಅವನು ಒಟ್ಟಡಿ ಇಡುತ್ತಿದ್ದ. ಅಡಿ ತಪ್ಪಿದ್ದು ಆತನ ಅರಿವಿಗೆ ಬರಲಿಲ್ಲ. ಎದೆಯೊಮ್ಮೆ ಧಸಕ್ಕೆಂದಿತು. ಮೊತ್ತ ಮೊದಲ ಬಾರಿ ಪಾರಾಶೂಟಿನಲ್ಲಿ ಹಾರಿದಾಗನ್ನಿಸಿದ ಹಾಗೆ ಆತನ ಆತ್ಮ ನೆತ್ತಿಯ ಮೂಲಕ ಮೇಲಕ್ಕೆ ಹಾರಿ ಹೋಯಿತು.

ರಾಮಚಂದ್ರ ಬಿದ್ದದ್ದನ್ನು ಇಡಿಯ ತಂಡವೇ ನೋಡಿತು. ಹೆಜ್ಜೆ ತಪ್ಪಿ ಬೀಳುತ್ತಲೇ ಆತ ಜಾರಿ ಕೆಳಕ್ಕೆ ತಳ ಸೇರಿಬಿಟ್ಟ. ಪ್ರಜ್ಞೆ ಮರಳಿದಾಗ ಆತ ಅಂಗಾತ ಬಿದ್ದುಕೊಂಡಿದ್ದ. ಹಿಂದೆ ಬಹಳಷ್ಟು ಪಾರಾಶೂಟ್ ಹಾರಾಟ ನಡೆಸಿದ್ದ ಕಾರಣ ಆತನ ಪಂಚೇಂದ್ರಿಯಗಳು ಮೊದಲೇ ಒಂದು ಹದಕ್ಕೆ ಬಂದಿದ್ದವು. ವಿಮಾನದ ಮೆಟ್ಟಲಿನ ಆಸರೆ ತಪ್ಪುತ್ತಲೇ ಗಿಳಿ ಹಾರಿ ಹೋಗುತ್ತದೆ. ರೇಸಿಮೆ ಕೊಡೆ ಮೆಲ್ಲ ಮೆಲ್ಲನೆ ಅರಳುತ್ತಿರುವಾಗಲಷ್ಟೇ ಭಾರದಿಂದ ಜಗ್ಗುತ್ತಿರುವ ದಾರದ ಪರಿವೆ. ತಕ್ಷಣ ಕೈಕೊಡುವುತ್ತಿದ್ದ... ಆತ ಎಲ್ಲವನ್ನೂ ಜ್ಞಾಪಿಸತೊಡಗಿದ. ನದಿಯ ಕರಾಳ ಭೋರ್ಗರೆತ ಕಿವಿಗಳಲ್ಲಿ ಗಡಚಿಕ್ಕುತ್ತಿತ್ತು. ಅವನ ಮೈಮೇಲೆ ತಾಗಿ ತಡೆಯುತ್ತಿದ್ದ ಹಗ್ಗವನ್ನು ಆತ ಅರ್ಥ ಮಾಡಿಕೊಂಡ. ಅದುವರಿಂದ ಪೂರ್ಣ ಅರಿವಿನೊಂದಿಗೇ ಹಗ್ಗದ ತುದಿಯಲ್ಲಿದ್ದ ದಪ್ಪ ಗಂಟಿನ ಮೇಲೆ ಗಟ್ಟಿಯಾಗಿ ಹಿಡಿದುಕೊಂಡನು, ಕೈಗಳಿಗೆ ಬಲವಿರಲಿಲ್ಲ! ಓ ಅಮ್ಮಾ! ಆಗಲೂ ಆತ ತಾಯಿಯನ್ನು ನೆನೆದ! ಬೆರಳುಗಳನು ಇನ್ನಷ್ಟು ಅಮುಕಿ ಹಿಡಿದ. ಹೊರೆಯಾಳುಗಳು ಅವನನ್ನು ಮೆಲ್ಲಮೆಲ್ಲನೆ ಎಳೆದು, ಮೇಲಕ್ಕೆ ಹತ್ತಿಸಿದರು. ಮೇಲೆ ತಲಪುವಷ್ಟರಲ್ಲಿ ಆತ ಪೂರ್ತಿ ನೀರಾಗಿದ್ದ. ನಿಧಾನವಾಗಿ ತೆವಳುತ್ತಾ ಮುಂದೆ ಸಾಗುತ್ತಿದ್ದಾಗ ಹುಚ್ಚೆದ್ದ ನದಿಯ ಮೊರೆತ ಅವನ ಕಿವಿಗಳಲ್ಲಿ ಮೊಳಗುತ್ತಲೇ ಇತ್ತು.

ಅವರು ಅಂದು ಚೇಕ್ಕೆ ಎಂಬ ಗ್ರಾಮವನ್ನು ತಲ್ಪಿದರು. ಹೊರೆಯಾಳುಗಳು ನೆಲವನ್ನು ಮಟ್ಟಸ ಮಾಡಿ ಬಿದಿರ ಕಾಲಗಳ ಮೇಲೆ ಮಂಚಗಳನ್ನು ಸಜ್ಜುಗೊಳಿಸಿದರು. ರಾಮಚಂದ್ರನಿಗೆ

ತಕ್ಷಣ ಮಲಗಬೇಕೆಂದೆನ್ನಿಸಿತು. ಹೊರೆಯಾಳಿಗೆ ಸನ್ನೆ ಮಾಡಿ ಆತ ತನ್ನ ಕಂಬಳಿ ಮೂಟೆಯನ್ನು ಇಳಿಸಕೊಂಡ. ಮಂಚದ ಮೇಲೆ ಕಂಬಳಿಯನ್ನು ಹೊರೆಯಾಳೇ ಹಾಸಿಕೊಟ್ಟ. ಉಡುಪುಗಳನ್ನು ಕಳಚದೆಯೇ ರಾಮಚಂದ್ರ ಮಂಚದ ಮೇಲೆ ಉರುಳಿದ.

ತಿತ್ತೋರಿವನ ಜೊತೆಯಲ್ಲಿ ಗಾಂಬಡೆ ಕ್ಯಾಪ್ಟನ್‌ನ ಭೇಟಿಗೆ ಬಂದ. ಹೆಣೆದ ಹುಲ್ಲಿನಿಂದ ಆತ ಸೊಂಟವನ್ನು ಮರೆಮಾಚಿದ್ದ. ದುಂಡಗೆ ಪುಷ್ಟವಾಗಿದ್ದ ಆತನ ಬಲಿಷ್ಠ ಕೈಗಳಲ್ಲಿ ಬಿಲ್ಲು ಬಾಣಗಳಿದ್ದವು. ಕ್ಯಾಪ್ಟನ್ 'ನಮಸ್ತೆ' ಎಂದಾಗ ಕ್ಯಾಪ್ಟನನೂ ತಂಡವೂ ಭಾರತವೆಂಬ ಮಹಾನ್ ದೇಶವೂ ಗಾಂಬಡೆಗೂ ಗಾಂಬಡೆಯ ಗ್ರಾಮಕ್ಕೂ ವಂದನೆ ಸಲ್ಲಿಸುತ್ತಿರುವುದಾಗಿ ತಿತ್ತೋರಿವ ವಿವರಿಸಿದ. ಆಗ ಮುದಿ ಗಾಂಬಡೆಯ ಚುರುಚುರುಕಾಗಿದ್ದ ಕಣ್ಣುಗಳು ಸಂತಸದಿಂದ ಹೊಳೆದವು. ಕ್ಯಾಪ್ಟನ್ ವರ್ಣರಂಜಿತವಾದ ಬಟ್ಟೆಗಳನ್ನೆತ್ತಿ ಉಡುಗೊರೆ ನೀಡುತ್ತಲೆ ಇವೆಲ್ಲಾ ಭಾರತವೆಂಬ ಮಹಾನ್ ದೇಶದ ಅತ್ಯಂತ ದಯಾಳು ಜನರ...ಯ ಕಾಣಿಕೆಗಳಾಗಿವೆಯೆಂದು ತಿತ್ತೋರಿವ ಹೇಳಿದಾಗ ಗಾಂಬಡೆಯ ಕಣ್ಣುಗಳು ತುಂಬಿ ತುಳುಕುವುದರಲ್ಲಿದ್ದುವು. ಕ್ಯಾಪ್ಟನ್ ಮುದುಕನಿಗಾಗಿ ಒಂದು ಚೀಲ ಉಪ್ಪನ್ನು ಬೆರಳು ಮಾಡಿ ತೋರಿಸಿದ. ಆಹ್ಲಾದಪುಲಕಿತನಾದ ಮುದುಕ ಗುಡಿಸಲುಗಳ ಕಡೆಗೆ ಕಣ್ಣು ಹಾಯಿಸಿದ. ಮರದ ಕಾಲುಗಳ ಮೇಲೆ ಎತ್ತರದಲ್ಲಿ ಕಟ್ಟಲಾದ ಗುಡಿಸಲ ಬಾಗಿಲಲ್ಲಿ ನಿಂತು ಹೆಂಗಸರು ಸೈನಿಕರನ್ನೇ ಕುತೂಹಲದಿಂದ ನೋಡುತ್ತಿದ್ದರು. ಗಾಂಬಡೆ ತುಕಡಿಗೆ ಎಲ್ಲಾ ಸಹಾಯ ಸಹಕಾರಗಳನ್ನು ನೀಡುವುದಾಗಿ ಭರವಸೆ ನೀಡುತ್ತಿದ್ದ. ಆತ ಕ್ಯಾಪ್ಟನ್‌ನ ಜೊತೆಯಲ್ಲಿ ಹೊರೆಯಾಳುಗಳು ನೆಲ ಕೆರೆಸುತ್ತಿದ್ದ ಸ್ಥಳದತ್ತ ಕಾಲು ಹಾಕಿದ. ಈಗ ಗಂಡಸರಾರೂ ಗ್ರಾಮದಲ್ಲಿಲ್ಲ. ಎಲ್ಲರೂ ಬೇಟೆಗೆ ಹೋಗಿದ್ದಾರೆ. ಅವರು ಬಂದ ನಂತರ ತಮ್ಮ ಇಚ್ಛೆಗನುಸಾರವಾಗಿ ಏನು ಬೇಕಾದರೂ ಮಾಡೋಣ.

ಚಿಕ್ಕ ಚಿಕ್ಕ ಬಿಲ್ಲುಬಾಣಗಳನ್ನು ಹಿಡಿದುಕೊಂಡ ಬಡಿವೈಯ ಹುಡುಗರು ಕೊಂಚ ದೂರದಲ್ಲಿ ಕಾತರದಿಂದ ನೋಡುತ್ತಾ ನಿಂತಿದ್ದರು. ತುಸು ಹೊತ್ತಿನ ಬಳಿಕ ತಮ್ಮ ಯೋಚನೆಯಲ್ಲೇ ಮಗ್ನರಾದ ಅವರು ಎತ್ತರವಾದ ಮರದ ರೆಂಬೆಯಲ್ಲಿ ತಮಗಿಷ್ಟವಾದ ಎಲೆಗಳಿಗೆ ಗುರಿ ತೊಟ್ಟು ಬಾಣ ಬಿಟ್ಟು ಆಟವಾಡತೊಡಗಿದರು.

ಆಹಾರ ತಯಾರಾದಾಗ ಕ್ಯಾಪ್ಟನ್ ಹಾಗೂ ಹವಿಲ್ದಾರುಗಳು ಮದ್ಯ ಸೇವನೆಗೆ ಕುಳಿತರು. ಹಂಸರಾಜ್ ಹೋಗಿ ನಿದ್ರಿಸುತ್ತಿದ್ದ ರಾಮಚಂದ್ರನನ್ನು ನೋಡಿದ. ಇದೆಂಥ ನಿದ್ರೆ! ಸದ್ದಿಲ್ಲ. ಚಲನೆಯಿಲ್ಲ. ಉಸಿರಾಟವು ಕೂಡ ಇಲ್ಲವೇನೋ ಅನ್ನಿಸುತ್ತದೆ. ಪಾಪ! ತೀರ ದಣಿದಿರಬೇಕು. ಹಂಸರಾಜ್ ಈ ಮದರಾಸಿ ಮಿತ್ರನನ್ನು ಮೆಚ್ಚಿಕೊಂಡಿದ್ದ. ತಂಡದಲ್ಲಿರುವ ಒಬ್ಬನೇ ಒಬ್ಬ ಮದರಾಸಿ, ಆದರೂ ರಾಮಚಂದ್ರನಿಗೆ ಆ ಬಗ್ಗೆ ಯಾವ ಚಿಂತೆಯೂ ಇರಲಿಲ್ಲ. ಸದಾ ಉಲ್ಲಾಸ ಚುರುಚುರುಕುಗಳಿಂದ ಕೂಡಿರುವ ಇಂಥವನು ಜೊತೆಯಲ್ಲಿರುವಾಗ ತನ್ನ ತಾಪತ್ರಯಗಳೆಲ್ಲಾ ಮರೆತೇ ಹೋಗುತ್ತಿದ್ದವು.

ಮಿತ್ರನನ್ನು ಕೊಂಚ ಹೊತ್ತು ನೋಡುತ್ತಾ ನಿಂತಾಗ ಹಂಸರಾಜ್‌ಗೆ ಏನೋ ಶಂಕೆ ಮೂಡಿತು. ಹೀಗೂ ಒಂದು ನಿದ್ರೆಯೇ! ಆತ ಸುಭಾರ್ಜನ್ ನದಿಯ ಕುರಿತೂ ಕಡಿದಾದ ಬೆಟ್ಟದ ಇಳಿಜಾರಿನ ಕುರಿತೂ ಯೋಚಿಸಿದ.

ಓ ದೇವರೇ!

ಅದೂ ದೇವರ ದಯೆಯೆ.

ತನ್ಮಧ್ಯೆ ತುಸು ಅಲುಗಾಡಿದ ರಾಮಚಂದ್ರ ಸಣ್ಣಗೆ ನರಳಿದ. ಅರೆತೆರೆದಿದ್ದ ತುಟಿಗಳಿಂದ ಉಗುಳೂ ಕಫವೂ ಹರಿಯುತ್ತಿದ್ದವು.

"ರಾಮಚಂದ್ರಾ" ಆತ ಥಟ್ಟನೆ ಕರೆದುಬಿಟ್ಟನಲ್ಲದೆ ಹಣೆಯನ್ನು ಮುಟ್ಟಿನೋಡಿದ.

"ಓ."

ಕೈ ಥಟ್ಟನೆ ಹಿಂದಕ್ಕೆ ಹಿಂದಕ್ಕೆಳೆದುಬಿಟ್ಟಿತು.

ಭಯಂಕರ ಜ್ವರ!

"ರಾಮಚಂದ್ರಾ..." ಆತ ಅಲ್ಲೇ ನಿಂತು ಕರೆದ.

ಹವಿಲ್ದಾರ್ ಗಂಗಾಪ್ರಸಾದ್ ಅಷ್ಟರಲ್ಲೇ ಕ್ಯಾಪ್ಟನ್‌ನ ಮಡಿಲಿಗೆ ಉರುಳಿದ್ದ. ಆತ ಅಳುತ್ತಾ ಎಂದಿನಂತೆಯೇ ತನ್ನ ನೆಚ್ಚಿನ 'ಸಾಬ್'ನ ಬಗ್ಗೆ ಭಟ್ಟಂಗಿತನವನ್ನು ಶುರು ಮಾಡಿದ್ದ.

"ನೋಡಿ ಸಾಬ್, ನನ್ನ ರಾಮಚಂದ್ರನನ್ನ ನೋಡಿ, ನಾ ಹೇಳಿದ್ದೆನಲ್ಲ- ಅವನೇ ನನ್ನ ಜೀವ ಅಂತ?"

ಆಗ ಹಂಸರಾಜ್ ರಾಮಚಂದ್ರನನ್ನು ಕರೆಯುವುದು ಕೇಳಿಸಿತು. ಕ್ಯಾಪ್ಟನ್ ಹಾಗೂ ಹವಿಲ್ದಾರ್ ಕೋಪ, ಹೊರಳಿ ನೋಡಿದರು. ಗಂಗಾಪ್ರಸಾದನಿಗೆ ಯಾವುದರ ಪರಿವೆಯೂ ಇರಲಿಲ್ಲ.

"ನನ್ನ ರಾಮಚಂದ್ರನನ್ನ ನೋಡಿ ಸಾಬ್. ಒಬ್ಬ ಸೈನಿಕ ಅಂದ್ರೆ ಅವನೇನೆ. ಅವನೇ ನಮ್ಮ ಉಸಿರು. ಅಲ್ವೇ ಸಾಬ್?"

ಕ್ಯಾಪ್ಟನ್ ಎದ್ದ. ಏನೋ ಅಸಮರ್ಪಕತೆ ಇದೆ ಎಂಬುದು ಸ್ಪಷ್ಟ. ಆತ ರಾಮಚಂದ್ರನ ಮಂಚದ ಬಳಿಗೆ ನಿಶ್ಶಬ್ದ ನಡೆದ. ಅವರು ಒಬ್ಬೊಬ್ಬರೇ ಆಗಿ ರಾಮಚಂದ್ರನನ್ನು ಮುಟ್ಟಿ ನೋಡಿದ್ದರು. ಕರೆದರು, ಅಲುಗಾಡಿಸಿದರು. ಇಲ್ಲ–ಅವನು ಮಿಸುಕಾಡಲಿಲ್ಲ. ದನಿಯೆತ್ತಲಿಲ್ಲ.

ದೇವರ ಇಚ್ಛೆ!

ಪಕ್ಕದ ಮಂಚದಲ್ಲೇ ಹಂಸರಾಜ್ ಮಲಗಿದ. ಅಸ್ಸಾಂ ರೈಫಲ್ಸಿನ ಸಿಪಾಯಿಗಳು ಕಾವಲು ನಿಂತಿದ್ದ ಆತನ ಮಂಚದ ಬಳಿಯಲ್ಲೆ. ಅವನು ನರಳುತ್ತಿರುವಾಗಲೆಲ್ಲಾ ಅವರು ಗಾಬರಿಯಿಂದ ಬಗ್ಗಿ ನೋಡಿದರು. ಇಲ್ಲ– ಅವನು ಎಚ್ಚರಗೊಳ್ಳಲಿಲ್ಲ.

ಹದಿನಾಲ್ಕು ದಿನಗಳ ಕಾಲ ಅವನು ಅದೇ ರೀತಿ ಮಲಗಿದ್ದ. ಪ್ರಜ್ಞೆ ಮರಳಿದಾಗ ಆತನಿಗೆ ಮೊದಲನ್ನಿಸಿದ್ದು ಬಾಯಿ ಕಹಿಯಾಗಿದೆ ಎಂದು. ಆದರೆ ಕಹಿಯಲ್ಲ, ಉರಿಯಿರಬಹುದು. ಉಗುಳ ಬೇಕೆನಿಸಿತು. ಉಗುಳು ತುಟಿಯ ಮೂಲಕ ಹರಿಯುತ್ತಾ ಇತ್ತು. ತುಟಿಯಲ್ಲಿ ನವೆ ಮತ್ತು ಕಡಿತ. ತುರಿಸಲೆಂದು ಕೈಯೆತ್ತಿದ. ಕೈ! ಕೈ ಏಳುತ್ತಾ ಇಲ್ಲ. ಕೈಗಳೇ ಇಲ್ಲವೇನೋ! ಅಲುಗಾಡಿಸಿ ನೋಡಿದ. ಇವೆ. ಅಲುಗಾಡುತ್ತಾ ಇವೆ! ಆಗ ದೇಹದ ನೆನಪಾಯಿತು. ಪೂರ್ತಿ ಮಂಚಕ್ಕೇ ಅಂಟಿಕೊಂಡಿದೆ. ಕಾಲುಗಳನ್ನೂ ಅಲುಗಾಡಿಸಿ ನೋಡಿದ. ಇಲ್ಲ ಅಲುಗಾಡಿಸಲು ಸಾಧ್ಯವಾಗುತ್ತಾ ಇಲ್ಲ. ನನ್ನ ಕಾಲುಗಳು...! ಏನಿದು ಅವಸ್ಥೆ? ಕಣ್ಣು ತೆರೆದು ನೋಡೋಣ ಕಣ್ಣ ರೆಪ್ಪೆಗಳು ತೆರೆಯುತ್ತಾ ಇಲ್ಲ. ಹಲಸಿನ ಮೇಣ ಅಂಟಿದ ಹಾಗೆ. ಆದರೂ ಏನೇನೋ ಕಾಣಿಸುತ್ತಿರುವಂತೆ ಅನ್ನಿಸಿತು. ಯಾವುದೂ ಸ್ಪಷ್ಟವಾಗುತ್ತಾ ಇಲ್ಲ. ಒಂದುರೀತಿಯ ಮಬ್ಬು ನಸುನೀಲಿ ಅಥವಾ ಹಳದಿ ಮಿಶ್ರಿತ ಮಸುಕು ಮಂಜಾಗಿ ಬಿಟ್ಟಿದೆಜಗತ್ತು.

ಮಂಚ ಅಲುಗಾಡುತ್ತಿರುವಂತೆ ಅನ್ನಿಸಿತು. ನಿದ್ರಿಸಲು ಮಲಗಿದಾಗ ಅಮ್ಮ ಬಂದು ನೋಡುತ್ತಿದ್ದಳು. ಹೊದಿಕೆ ಸರಿಪಡಿಸಿದ ಬಳಿಕ ಮಂಚದ ಮೇಲೆ ಕೈಯ್ಯೂರಿ ಬಗ್ಗಿ ನಿಲ್ಲುತ್ತಾ ಮಗನ ಶಾಂತ ಮುಖವನ್ನು ಸಾಕಷ್ಟು ಹೊತ್ತು ದಿಟ್ಟಿಸಿದ ನಂತರವೇ ಅಮ್ಮ ನಿದ್ರಿಸಲು ಹೋಗುತ್ತಿದ್ದಳು. ಅಮ್ಮ ಬಂದು ಮಂಚವನ್ನು ಅಲುಗಾಡಿಸುತ್ತಿರಬಹುದು. ಅಮ್ಮನನ್ನು ಕುರಿತು ಯೋಚಿಸಿದಾಗ ಅವನ ಬಳಲಿದ್ದ ಕಣ್ಣ ರೆಪ್ಪೆಗಳು ತೆರೆದುಕೊಂಡವು.

ಓ!

ಆತ ರೆಪ್ಪೆ ಬಿಟ್ಟು ನೋಡಿದ್ದು ಅಪ್ಸರೆಯೊಬ್ಬಳ ನೀಲಿ ಕಣ್ಣುಗಳ ಕಡೆಗಾಗಿತ್ತು. ಆಕೆಯ ಬಂಗಾರದಂಥ ಕೆನ್ನೆಗಳು ಆರಕ್ತವಾಗಿ ನೀಲಿ ಕಣ್ಣುಗಳು ಹೊಳೆಯುತ್ತಿದ್ದವು. ರಾಮಚಂದ್ರನಿಗೆ ಮುಖವನ್ನು ಉಜ್ಜಬೇಕೆನಿಸಿತು. ತಾನು ಯಾವುದಾದರೂ ಸವಿಗನಸೊಂದನ್ನು ಕಾಣುತ್ತಿದ್ದೇನೋ ಏನೋ!

ಆತನ ಬಳಲಿದ ಕಣ್ಣೆವೆಗಳು ತೆರೆಯಲ್ಪಟ್ಟಾಗ ಆಕೆ ಕುಳಿತಲ್ಲಿಂದಲೇ ಇನ್ನಷ್ಟು ಬಗ್ಗಿ ನೋಡಿದಳು. ಅವಳ ಕಣ್ಣುಗಳಲ್ಲಿ ಆಹ್ಲಾದ ಹಾಗೂ ಕುತೂಹಲಗಳು ತುಂಬಿ ತುಳುಕಿದವು. ಬೆಕ್ಕಸ ಬೆರಗಾಗಿ ತನ್ನನ್ನೇ ನೋಡುತ್ತಿದ್ದ ಅವನ ಸೊರಗಿದ ಕೆನ್ನೆಗಳ ಮೇಲೆ ಅವಳು ಮೆಲ್ಲ

ಮೆಲ್ಲನೆ ಬೆರಳಾಡಿಸತೊಡಗಿದಳು. ಅವನ ಒಡಲಿಡೀ ರೋಮಾಂಚನಗೊಂಡಿತು. ಅವಳು ಮೆಲ್ಲ ಮೆಲ್ಲನೆ ಅವನ ಗಡ್ಡವನ್ನು ನೇವರಿಸಿದಳಲ್ಲದೆ ಅಕ್ಕರೆಯಿಂದ ತುಟಿಯನ್ನು ಒರೆಸಿದಳು. ಪ್ರಾಯಶಃ ಅವಳಲ್ಲಿ ಅಳು ಉಕ್ಕುತ್ತಿತ್ತು.

"ನಾನು ಯಾರೆಂದು ಗೊತ್ತಾಯ್ತಾ?"

ಇಲ್ಲ. ಅವಳು ಪ್ರಶ್ನಿಸಲಿಲ್ಲ. ಆದರೆ ಅವಳ ಕಣ್ಣುಗಳಲ್ಲಿ ಮನಸ್ಸಿಗೆ ನಾಟುವ ಆ ಪ್ರಶ್ನೆ ಬರೆದಿರಿಸಲ್ಪಟ್ಟಿದೆ. ಪ್ರೀತಿ ಉಕ್ಕುವ ಬೆರಳುಗಳ ತುದಿಯಿಂದ ಅವಳು ಅವನ ಆತ್ಮ ವೀಣೆಯ ತಂತಿಯನ್ನು ಮೀಟಿ ಎಚ್ಚರಗೊಳಿಸುತ್ತಾ ಇದ್ದಾಳೆ.

"ನನ್ನ ದೇವಾ, ಎಚ್ಚರಗೊಳ್ಳು, ಎಚ್ಚರಗೊಳ್ಳು."

ಈ ಸವಿಗನಸಿನಿಂದ ಎಚ್ಚರಗೊಳ್ಳಲೋ ಎಂಬಂತೆ ರಾಮಚಂದ್ರ ಒಮ್ಮೆ ತೇಕಿದ. ಹಾ!




ಪಕ್ಕೆಗಳೂ ಎದೆಯೂ ನೋಯುತ್ತಾ ಇವೆ. ಆದರೂ ಥಟಕ್ಕನೆ ಎಚ್ಚೆತ್ತಿದ್ದ ಅವನ ಮಿದುಳು ತನ್ನ ಕಡೆಗೆ ಬಗ್ಗಿ ನಿಂತಿದ್ದ ಆಕೆಯನ್ನು ಪೂರ್ತಿಯಾಗಿಯೇ ರೂಪಿಸಿ ತಿಳಿದುಕೊಂಡಿತು. ಸ್ವರ್ಣ ಸದೃಶವೂ ನಗ್ನವೂ ಆಗಿದ್ದ ದೇಹದಲ್ಲಿ ಅವನ ಕಣ್ಣುಗಳು ನೆಟ್ಟು ನಿಂತವು. ಆ ಕಡೆದಿರಿಸಿದ್ದ ಲಾವಣ್ಯದಲ್ಲಿ ಅವನ ಕಣ್ಣುಗಳು ಕೀಲಿಸಿ ನಿಂತವು. ಆ ಕಡೆದಿರಿಸಿದ್ದ ಚೆಲುವಿಕೆಯಲ್ಲಿ ಲೀನವಾಗಿದ್ದ ಹೃದಯ ಮುಗುಳ್ನಗೆ ಸೂಸಿತು.

ಓ!

ಆತ ತನ್ನನ್ನು ಕಂಡನೆಂದೂ ಗುರುತಿಸಿದನೆಂದೂ ಅನ್ನಿಸಿದಾಗ ಅವಳ ನೆತ್ತರು ಚಿಮ್ಮುತ್ತಿದ್ದ ಬೆರಳ ಕುಡಿಗಳು ಆತನ ಕೆನ್ನೆಗಳ ಮೇಲೆ ಮೆತ್ತಗೆ ತಟ್ಟಿ ತಡವುತ್ತಾ ಅದುರತೊಡಗಿದವು. ಹದಿನಾಲ್ಕು ದಿನಗಳಿಂದ ಅವಳು ಆತನ ಆರೈಕೆ ಮಾಡುತ್ತಾ ಬಂದಿದ್ದಳು. ಆಪತ್ತಿಗೆ ಗುರಿಯಾಗಿದ್ದ ಈ ಪರದೇಶಿಯನ್ನು ಇವನ ಜನರು ಪೂರ್ತಿ ಕೈ ಬಿಟ್ಟಂತೆಯೇ ಇದ್ದರು. ಒಬ್ಬ ಸಿಪಾಯಿಯ ಜೀವಕ್ಕಿಂತಲೂ ಮಹತ್ವಾದ ಸೇವೆಗಾಗಿ ಅವರು ಮುಂದಕ್ಕೆ ಸಾಗಿದ್ದರು. ಈತನನ್ನು ಸುಟ್ಟು ಬಿಡುವುದೆಂದೇ ಕ್ಯಾಪ್ಟನ್ ನಿರ್ಧರಿಸಿದ್ದ. ಆ ನಿರ್ಧಾರ ಬದಲಾದದ್ದು ಕಟ್ಟಿಗೆ ತಂದು ರಾಶಿ ಹಾಕಲು ಗಾಂಬಡೆಗೆ ಹೇಳಿದಾಗಲೇ. "ಈತನನ್ನು ನಾವು ನೋಡಿಕೊಳ್ತೀವಿ. ತಾವು ಪ್ರಯಾಣವನ್ನು ಮುಂದುವರಿಸಿರಿ."

ಮುದಿ ಗಾಂಬಡೆ ತನ್ನ ಹೆಂಡತಿ ಮತ್ತು ಮಗಳನ್ನು ರಾಮಚಂದ್ರನ ಆರೈಕೆಗಾಗಿ ಕಳುಹಿಸಿಕೊಟ್ಟಿದ್ದ. ತಾಯಿಗೆ ಬೇರೆಯೂ ಕೆಲಸಗಳಿದ್ದವು. ಮಗಳು ಆರೈಕೆ ಮಾಡುತ್ತಾ ಅವನ ಬಳಿಯಲ್ಲೇ ಕುಳಿತಳು. ಕೋಳೆಯನ್ನು ತೊಳೆದಳು. ಹಾಸಿಗೆಯನ್ನು ಸ್ವಚ್ಛಗೊಳಿಸಿದಳು. ಈ ಅನಾಗರಿಕರಿಗೆ ಹೆಣ್ಣು ಗಂಡುಗಳೆಂಬ ವ್ಯತ್ಯಾಸ ಎಂದೂ ಒಂದು ಅಡ್ಡಗೋಡೆಯಾಗಿರಲಿಲ್ಲ. ಅವರು ಸಮಾಜದ ಸಮಾನ ಜೀವಿಗಳಾಗಿದ್ದರು.

ಅವನು ಎಚ್ಚರಗೊಂಡಿರುವನೆಂದು ನಿಚ್ಚಳವಾದಾಗ ಅವಳು ಆಹ್ಲಾದದಿಂದ ಜಗಿವೆದ್ದಳು. "ಕಿಲೊ! ಖಿಲೋ!"

ಅವಳ ಗಿಳಿಯುಲಿಯನ್ನಷ್ಟೇ ಆತ ಆಲಿಸಿದ. ಎಚ್ಚರಗೊಳ್ಳು ಎದ್ದೇಳು ಎಂದೇ ಅವಳು ಹೇಳು ತ್ತಿದ್ದಾಳೆಂದು ಆತನಿಗೆ ಅರ್ಥವಾಗಲಿಲ್ಲ. ತುಂಬು ಬೆರಗಿನಿಂದ ಅವಳ ತೆಳ್ಳಗಿನ ಕೆಂದುಟಿಗಳನ್ನೇ ತದೇಕ ದೃಷ್ಟಿಯಿಂದ ದಿಟ್ಟಿಸುತ್ತಾ ಅವನು ಮಲಗಿದ.

ನವಿರಾದ ಹೆಜ್ಜೆ ದನಿ ಕೇಳಿಸಿತು. ಯಾರದ್ದಿರ ಬಹುದು? ನೋಡೋಣವೆಂದರೆ ಕತ್ತು ಹೊರ ಳುತ್ತಾ ಇಲ್ಲ. ತಾನಿರುವುದೆಲ್ಲಿ? ಆತ ಯೋಚಿ ಸಿದ. ಕಿವಿ ಸಿಳ್ಳು ಹೊಡೆಯುತ್ತಾ ಇವೆ. "ಮರುಹಸಿರಿನ ಮೇಲೆ ಬಂಗಾರ ಕರಗಿಸಿ ಸುರಿದ ಹಾಗೆ... ಗ್ರಹಿಕೆಗಳಾವುದೂ ಸ್ಪಷ್ಟವಾಗುತ್ತಾ ಇಲ್ಲವಲ್ಲ."

"ಅಪ್ಪು, ಅಪು ಖಿಲಾಯಲ್" ಹರ್ಷಾತಿರೇಕ ದೊಂದಿಗೆ ಅವಳು ಮಂಚದಿಂದೆದ್ದಳು. ಬತ್ತಲಾ ಗಿರುವ ಅವಳ ವಕ್ಷಸ್ಥಳ ಏದುಸಿರಿಗೆ ಎದ್ದಿಳಿ ಯಿತು. ಹಂಸರಾಜ್ ಓಡುತ್ತಾ ಬಂದ.

"ಎಚ್ಚರಾಯ್ತಾ?" ಬರುತ್ತಿರುವಾಗಲೇ ಆತ ಪ್ರಶ್ನಿಸಿದ.

"ಖಿಲಾಯಲ್" ಅವಳು ಉಲಿದಳು.

"ನನ್ನ ರಾಮಚಂದ್ರಾ" ಹಂಸರಾಜ್ ಕರೆದ. ಸುಸ್ತಾಗಿ ಕಣ್ಣುಬಿಟ್ಟು ಮಲಗಿದ್ದ ಮಿತ್ರನನ್ನು ಆತ ಸೊಂಟಕ್ಕೆ ಊರಿದ ಕೈಗಳೊಂದಿಗೆ ನೋಡುತ್ತಾ ನಿಂತ. ಬಲು ಹೊತ್ತಿನ ನಂತರವಷ್ಟೇ ಜ್ಞಾಪಿಸಿದ.

"ನೀರು ಕುಡೀಬೇಕಿತ್ತಾ?"

ರಾಮಚಂದ್ರ ಮಾತಾಡಲಿಲ್ಲ. ನರಳಲೂ ಇಲ್ಲ. ಅವನ ಮಿದುಳಿನಲ್ಲಿ ನೆನಪುಗಳ ಹಾಗೂ ಗ್ರಹಿಕೆ ಗಳ ಎಳೆಗಳು ಸಿಕ್ಕುಗಟ್ಟಿ ಬಿಗಿದುಕೊಂಡಿದ್ದವು. ಸಂಪೂರ್ಣ ಸಾಮರ್ಥ್ಯವನ್ನು ಬಳಸುತ್ತಿದ್ದ ಹೈ ಪವರ್ ಟ್ರಾನ್ಸ್‌ಮೀಟರೊಂದರ ಅಸಂಖ್ಯ ವಯ ರಿಂಗಿನಲ್ಲೆಂಬಂತೆ ಆತನ ಮಸ್ತಿಷ್ಕದ ಪ್ರತಿಯೊಂದು ನರದಲ್ಲೂ ವಿದ್ಯುತ್ ಪ್ರವಾಹ ಹರಿಯುತ್ತಾ ಇತ್ತು.

ಹಂಸರಾಜನನ್ನು ಆತ ಗುರುತಿಸಿದ. ಆಗ ಕಿವಿ ಸಿಳ್ಳೆ ಹಾಕುತ್ತಿರುವಂತೆ ಅನ್ನಿಸಿತು. ಹುಚ್ಚೆದ್ದ ಸುಬಾರ್ಜನ್ ನದಿಯ ಕರಾಳ ಆರ್ಭಟೆ ಹಾಗೂ ಮೊರೆತ ಕಿವಿಗಳಲ್ಲಿ ಮೊಳಗುತ್ತಿರುವಂತೆ ಅನ್ನಿ ಸಿತು. ಬೆರಗಿನಿಂದಲೋ ಎಂಬಂತೆ ಆತ ಪ್ರಶ್ನಿಸಿದ.

"ನನ್ನ ಬಂದೂಕು?"

ಹಂಸರಾಜ್ ಸ್ತಬ್ಧನಾಗಿಬಿಟ್ಟ! ಬಂದೂಕು! ಆತನಿಗೆ ಅದರ ನೆನಪಾದದ್ದು ಆಗಲೇನೆ. ಬೆಟ್ಟದ ಇಳಿಜಾರಿನಿಂದ ಬಿದ್ದಾಗಲೇ ಬಂದೂಕು ಕಳೆದುಹೋಗಿತ್ತು. ಯಾರೊಬ್ಬರಿಗೂ ಅದರ ಪರಿವೆಯೇ ಇರಲಿಲ್ಲ. ಹದಿನಾಲ್ಕು ದಿನಗಳ ಕಾಲ ಜ್ವರಪೀಡಿತನಾಗಿ ಪ್ರಜ್ಞೆಯಿಲ್ಲದೆ ಬಿದ್ದು ಕೊಂಡಿದ್ದ ರಾಮಚಂದ್ರ ಇದೀಗ ಎಚ್ಚೆತ್ತೊಡ ನೆಯೇ ಬಂದೂಕಿನ ಬಗ್ಗೆ ಕೇಳುತ್ತಿದ್ದಾನೆ! ಮಾನ ವನ ಮಿದುಳೆಂಬುದು ಎಂಥ ಅದ್ಭುತ ವಸ್ತು!

ಹಂಸರಾಜ್ ಬರುತ್ತಲೇ ತುಸು ಸರಿದು ನಿಂತಿದ್ದ ಆ ಪರಕನ್ಯೆ ಅವರು ಮಾತಾಡತೊಡ ಗಿದಾಗ ಏನನ್ನೋ ಜ್ಞಾಪಿಸಿಕೊಂಡವಳ ಹಾಗೆ ಓಡಿ ಹೋಗಿದ್ದಳು. ತುಸು ಹೊತ್ತಿನ ಬಳಿಕ ಒಂದು ಜನಜಂಗುಳಿಯ ಮಾತುಗಳು ಕೇಳಿ ಬಂದವು. ಇಡಿಯ ಗ್ರಾಮವೇ ರಾಮಚಂದ್ರ ನನ್ನು ನೋಡಲು ಬಂದದ್ದಾಗಿತ್ತು. ಗಾಂಬಡೆ, ಗಾಂಬಡೆಯ ಹೆಂಡತಿ ಹಾಗೂ ಅವರ ಮುಗ್ಧೆ ಯಾದ ಮಗಳು ಗುಂಪಿನ ಮುಂಚೂಣಿಯಲ್ಲೇ ಇದ್ದಳು. ಅವರು 'ಅಪ್ಪು;' 'ಖಿಲಾಯಲ್;' 'ಜಂಜೇಕ್' ಎಂದೆಲ್ಲಾ ನಮಗೆ ಅರ್ಥವಾಗದ ನೂರಾರು ಮಾತುಗಳನ್ನು ಉಸಿರಾಡುವಷ್ಟು ಎಡೆಬಿಡದೆ ಹೇಳುತ್ತಲೇ ಇದ್ದರು. ಗಿಳಿವಿಂಡಿಗೆ ಮರಳಿಸಿಳೆದಂತಿತ್ತು ಆ ಗದ್ದಲ.

ರಾಮಚಂದ್ರನನ್ನೇ ನೋಡುತ್ತಾ ನಿಂತ ಗಾಂಬಡೆ ದೃಷ್ಟಿಯನ್ನು ಮೇಲೆ ಮಾಡಿ ಪ್ರಾರ್ಥಿ ಸಿದ. ತಾನು ತಂದಿದ್ದ ಯಾವುದೋ ದ್ರವವನ್ನು ರಾಮಚಂದ್ರನ ಬಾಯಿಗೆ ಸುರುವಿದ. ಅದನ್ನು ವಿಧೇಯತೆಯಿಂದ ಕುಡಿದ ರಾಮಚಂದ್ರನಿಗೆ ತನ್ನ ಬಾಯಿಯ ಕಹಿ ಹಾಗೂ ಉರಿ ನಿವಾರಣೆಯಾ ದಂತೆನ್ನಿಸಿತು. ಕೆಲವು ದಿನಗಳಿಂದಲೂ ಗಾಂಬಡೆ ಆತನಿಗೆ ಹಾಲು ಮತ್ತು ಮದ್ದನ್ನು ಕೊಡುತ್ತಾ ಬಂದಿದ್ದ. ತನ್ನ ಜೀವನದ ಯಾವುದೋ ಒಂದು ಮಹತ್ಕಾರ್ಯವನ್ನು ಸಾಧಿಸಿದ ಕೃತಕೃತ್ಯತೆ ಯೊಂದಿಗೆ ಆತ ಹೊರಟು ಹೋದ. ಆಗಲೂ

ಸ್ನೇಹಮಯಿಯಾದ ಆ ಹುಡುಗಿ ಎಡವುತ್ತಾ ತಡೆಯುತ್ತಾ ರಾಮಚಂದ್ರನ ಮಂಚದಲ್ಲೇ ಉಳಿದಳು.

ಅಸ್ಸಾಂ ರೈಫಲ್ಸಿನ ಮೂವರು ಸಿಪಾಯಿಗಳನ್ನು ರಾಮಚಂದ್ರ ಗುರುತಿಸಿದ. ಅವರೊಂದಿಗೆ ಬಿಕ್ಕು ಮಾತಾಡುತ್ತಾ ಇರುವಾಗ ಪುನಃ ಮೂರ್ಛೆ ಹೋಗಿಬಿಟ್ಟ. ಆದರೆ ಮುಂದಿನದು ಕನಸುಗಳೇ ಆಗಿದ್ದುವು. ಎಚ್ಚರಗೊಂಡ ಮೇಲೆ ಅವನಿಗೆ ಎಲ್ಲವನ್ನೂ ನೆನಪಿಗೆ ತಂದುಕೊಳ್ಳಲು ಸಾಧ್ಯವಾಗುತ್ತಿತ್ತು.

ಭೋರ್ಗರೆಯುತ್ತಿದ್ದ ನದಿಯಲ್ಲಿ ಆತ ಕಾಗದದ ನೌಕೆಯನ್ನು ತೇಲಿಸಿ ಆಟವಾಡುತ್ತಿದ್ದ. ನದಿಯ ದಂಡೆಗುಂಟ ಸಾಕಷ್ಟು ಮುಂದಕ್ಕೆ ಸಾಗಿದಾಗ ಸಮುದ್ರದ ಗಂಭೀರ ಮೊರೆತ ಕೇಳಿಸತೊಡಗಿತು. ಆತ ಆಗ ಅಳಿವೆಯ ಕುರಿತು ಯೋಚಿಸಿದ. ಪುಟ್ಟ ಚುಕ್ಕಾಣಿಗಳಾವುವೂ ಇಲ್ಲದ ತನ್ನ ದೋಣಿ ಮೂತಿ ಕೆಳಗಾಗಿ ಮುಳುಗಬಹುದೆಂದು ಆತ ಊಹಿಸಿದ. ಮುಳುಗಿದರೆ ಮುಳುಗಲಿ ಅದನ್ನು ಒಮ್ಮೆ ನೋಡಬಹುದಲ್ಲ. ಸಮುದ್ರದ ನೀಲ ವಿಶಾಲತೆಯಲ್ಲಿ ತೆರೆಗಳು ಏರುತ್ತಿರುವುದನ್ನೂ ನೋಡಬಹುದು. ನೌಕೆ ಅಳಿವೆಯನ್ನು ತಲುಪಿತು. ಮೂತಿ ಮಗುಚಿ ಮುಳುಗಿತು. ಥಟ್ಟನೆ ಆಗಸದಿಂದ ಧುಮುಕುತ್ತಿರುವೆನೆಂದೇ ಅನ್ನಿಸಿತು. ಕಣ್ಣು ಬಿಟ್ಟು ನೋಡಿದಾಗ ಆ ವರಕನ್ಯೆ ತನ್ನನ್ನೇ ನೋಡುತ್ತಾ ತೇಕುತ್ತಿದ್ದಳು. ಪ್ರಾಯಶಃ ಅವಳು ಅತ್ತಿರಬೇಕು. ಆತನ ಕಣ್ಣುಗಳು ತಿಳಿಯಾಗುತ್ತಾ ಹೋದಂತೆ ಆಕೆಯ ಮುಖ ಕೆಂಪಡರಿತ್ತು. ಮೆಲ್ಲನೆ ಆನಂದಾತಿರೇಕದಿಂದ ಅವಳು ಮುಗುಳ್ನಕ್ಕಳು.

ಅವಳು ಯಾವತ್ತೂ ಅವನ ಮಂಚದ ಬಳಿ ಇರುತ್ತಿದ್ದಳು. ಅವಳ ತಾಯ್ತಂದೆಯರೂ ಆಗಾಗ ಬಂದು ನೋಡಿ ಹೋಗುತ್ತಿದ್ದರು. ಅವರು ಕೊಡುತ್ತಿದ್ದ ಖಾರವಾದ ದ್ರವ ಹಾಗೂ ಹಾಲನ್ನು ಅವನು ತೃಪ್ತಿಯಿಂದ ಸೇವಿಸುತ್ತಿದ್ದ.

ಕುಳಿತಿರುವಷ್ಟು ತ್ರಾಣ ಬಂದಾಗ ಆತ ಆಕೆಯ ದಷ್ಟಪುಷ್ಟವಾದ ತೋಳನ್ನಾಧರಿಸಿ ಎದ್ದು ಕೂರುತ್ತಿದ್ದ. ಓ! ಬೆನ್ನಿನ ಮೂಲಕ ಬೆಚ್ಚಗಿನ ಹಬೆ ಏಳುತ್ತಾ ಇದೆಯೇ? ಅವಳ ತುಂಬು ತೋಳಿಗೊರಗಿ ಕುಳಿತಾಗ ಅಲ್ಲೇ ಕೊಂಚ ನಿದ್ರಿಸಬೇಕೆಂದು ಹಂಬಲಿಸಿದ. ಆಗ ಮನದಾಳದಿಂದಲೇ ಅಂದುಕೊಳ್ಳುತ್ತಿದ್ದ. "ನನ್ನ ಕರುಳೇ!"

ಅವನ ಆತ್ಮ ಆ ವರಕನ್ಯೆಯ ಮಾಂಸಲ ಸ್ಪರ್ಶದ ಮೋಡಿಯಲ್ಲಿ ಸಿಲುಕಿಕೊಂಡಿತು. ದೇಹದಲ್ಲಾದರೋ ತುರಿಕೆ ಹಾಗೂ ಜುಮುಗುಟ್ಟುವಿಕೆಗಳು. ತನ್ನ ಸೊರಗಿದ ಕೈಗಳತ್ತ ನೋಡಲಿಕ್ಕೇ ಸಾಧ್ಯವಾಗುತ್ತಾ ಇಲ್ಲ. ಅವು ತನ್ನದ್ದಲ್ಲವೆಂದೇ ಅನಿಸುತ್ತದೆ. ತೊಗಲಿಳಿಬಿದ್ದು ಹೊಟ್ಟೆದ್ದು ಎಷ್ಟೊಂದು ವಿಕಾರವಾಗಿಲ್ಲ!

ಅವಳು ಅವನ ಅನಿಸಿಕೆಗಳನ್ನು ಗ್ರಹಿಸುತ್ತಿದ್ದಳು. ತನ್ನ ತೋಳಿಗೊರಗಿದ್ದ ಅವನ ದೇಹದಿಂದ ಹೇನುಗಳನ್ನೂ ಬೇರುಗಳನ್ನೂ ತೆಗೆದು ಉಗುರಿನ ಮೇಲಿಟ್ಟು ಜಜ್ಜುತ್ತಿದ್ದಳು. ಅವನು ಸನ್ನೆ ಮಾಡಿದಾಗ, ಅವನು ತೊಟ್ಟುಕೊಂಡಿದ್ದ ಉಣ್ಣೆಯ ಅಂಗಿಯನ್ನು ಕಳಚಲು ಸಹಾಯ ಮಾಡಿದಳು.

ಅವಳಿಗೆ ಬೆರಗೋ ಬೆರಗು. ಅವನ ಎದೆ ತುಂಬಾ ಕೂದಲುಗಳಿದ್ದುವು! ಅದರ ಕಾರಣ ತಿಳಿಯದ ಅವಳು ಪುಲಕಿತಳಾದಳು.

ಸ್ವತಃ ಎದ್ದೇಳುವ ಮಟ್ಟಿಗೆ ಅವನ ಆರೋಗ್ಯ ಸುಧಾರಿಸಿದಾಗ ಹಂಸರಾಜ್ ಎಲ್ಲಾ ವಿಚಾರಗಳನ್ನೂ ಹೇಳಿದ. ಆತನ ಸಲುವಾಗಿಯೇ ವಿಶೇಷ ವಿಮಾನ ಬಂದುಹೋಗಿತ್ತು. ಅವರು ಮದ್ದು, ಥರ್ಮಾಮೀಟರ್ ಮೊದಲಾದವುಗಳನ್ನೆಲ್ಲಾ ಗಾಳಿ ಕೊಡೆಯ ಮೂಲಕ ಕೆಳಕ್ಕೆ ಎಸೆದುಕೊಟ್ಟಿದ್ದರು. ವಿಮಾನದ ಸದ್ದು ಕಿವಿಗೆ ಬೀಳುತ್ತಲೇ ಕಾಡರೆಲ್ಲಾ ಗುಡಿಸಲುಗಳನ್ನು ಸೇರಿ ಅವಿತಿದ್ದರು. ಮದ್ದುಗಳನ್ನು ಬಲವಂತವಾಗಿ ಅವನ ಬಾಯಿಗೆ ಸುರಿಯಲಾಯಿತು. ಅದು ಪೂರ್ತಿ ಹೊರಕ್ಕೇ ಹರಿದು ಹೋಗುತ್ತಿತ್ತು. ಉಸಿರಾಟವೇ ನಿಂತು ಹೋಗುವುದರಲ್ಲಿತ್ತು, ನಿಲ್ಲುತ್ತಿತ್ತು, ನಿಂತೇ ಹೋಗಿತ್ತು. ಗಾಂಬಡೆಯ ಬಳಿ ಕಟ್ಟಿಗೆ ತರಲು ಕ್ಯಾಪ್ಟನ್ ಹೇಳಿದ್ದ. ತನ್ನದೇ ಸ್ವಂತ

ಚಿಕಿತ್ಸೆಗಳಿವೆ ಎಂದಿದ್ದ ಗಾಂಜಡೆ ತನ್ನ ಬಳಗವನ್ನು ಕೂಡಿಕೊಂಡು ಎಮ್ಮೆಯನ್ನು ಕಡಿದು ಹೋಮ ಮಾಡಿದ್ದ. ಎಲ್ಲರೂ ಒಟ್ಟಾಗಿ ಭಾರೀ ಅಗ್ನಿಕುಂಡದ ಸುತ್ತ ಡೋಲು ಬಡಿಯುತ್ತಾ, ಪಾಡ್ದನ ಹೇಳುತ್ತಾ ಕುಣಿದಾಡಿದ್ದರು. ಕ್ಯಾಪ್ಟನಿಗೆ, ಮುಂದೆ ಸಾಗಬೇಕೆಂಬ ಆದೇಶ ಆಗಲೇ ದೊರೆತಿತು. ಅಸ್ಸಾಂ ರೈಫಲ್ಸಿನ ಮೂವರು ಸಿಪಾಯಿಗಳನ್ನೂ ಹಂಸರಾಜನನ್ನೂ ಅಲ್ಲೇ ಇರಗೊಡಲಾಗಿತ್ತು.

"ನಾನು ಸಾಯೋದಿಲ್ಲ."

ರಾಮಚಂದ್ರ ನಕ್ಕ.

ಸಾವೆಂದರೇನು? ಇಸ್ಪೀಟು ಆಟವೇ? ಆಗ ಎಂದೂ ಇಲ್ಲದ ಭಯ ತಲೆದೋರಿತು. ಅಮ್ಮ ಹೇಗಿದ್ದಾಳೋ ಏನೋ.

ಸುಮ್ಮನೆ ಮಂಚದ ಮೇಲೆ ಬಿದ್ದುಕೊಂಡಿರುವಾಗ ಪರಸ್ಪರ ಸಂಬಂಧವಿಲ್ಲದ ನೂರಾರು ವಿಚಾರಗಳು ಆತನ ಮನಸ್ಸಿನಿಂದ ಹಾದು ಹೋಗುತ್ತಿದ್ದವು. ಕಾಡರ ಗುಡಿಸಲುಗಳ ಬಳಿ ಗಟ್ಟಿಮುಟ್ಟಾದ ಬೆಳ್ಳನ್ನ ಬರಿ ಮೈಯ ಪುಟಾಣಿಗಳು ಪುಟ್ಟ ಬಿಲ್ಲಿನ ಹೆದೆಗಳನ್ನು ಜಗ್ಗಿ ನಿರ್ದಿಷ್ಟ ಗುರಿಗೆ ಬಾಣ ಬಿಟ್ಟು ಅಭ್ಯಾಸ ಮಾಡುತ್ತಿದ್ದರು. ಚಿಕ್ಕಂದಿನಲ್ಲಿ ಆತನಿಗೆ ಬೇಟೆಯ ಗೀಳು ವಿಪರೀತವಾಗಿತ್ತು. ತನ್ನ ಸಾಕುನಾಯಿಯೊಂದಿಗೆ ಮನೆಯಿಂದ ಹೊರಬೀಳುತ್ತಿದ್ದಾತ ತೆಂಗಿನ ಸೋಗೆಗಳ ಮೇಲೆ ಓಡಿ ಹೋಗುತ್ತಿದ್ದ ಅಳಿಲನ್ನು ಕವಣೆ ಕಲ್ಲುಗಳಿಂದ ಹೊಡೆದುರುಳಿಸುತ್ತಲೋ ಮಾರಸನ ಗೆಡ್ಡೆಗಳನ್ನು ಕೊರೆಯುತ್ತಿದ್ದ ಹೆಗ್ಗಣದ ಬಿಲಗಳನ್ನು ನಾಯಿಯಿಂದ ತೋಡಿಸುತ್ತಲೋ ಕ್ಷಣ ಹೊತ್ತೂ ಸುಮ್ಮನಿರದೆ ಓಡಾಡುತ್ತಿದ್ದ. ಅಮ್ಮನಿಗೆ ಅವನು ಸದಾ ಕಣ್ಣ ಮುಂದೆಯೇ ಇರಬೇಕು. ಅದಕ್ಕೆಂದೇ ಸದಾ ಕರೆಯುತ್ತಾ ಇರುತ್ತಾಳೆ. ಅಂದು ಆತ ತೆಂಗಿನ ಬುಡ ಸೇರಿದಾಗ ಅಮ್ಮ ಸಿಡುಕಿದ್ದಳು. "ಲೋ! ಹಡಬೆ ಹೈದ!" ಬಳಿಕ ಸ್ವತಃ ಸಮಾಧಾನ ತಂದುಕೊಂಡಳು. "ಗಂಡು ಹೆತ್ತ ಹೊಟ್ಟೆಗೆ ಸದಾ ಸಂಕಟಾನೆ."

ಮಂಚದಿಂದೆದ್ದು ತೂರಾಡಿ ತೂರಾಡಿ ನಡೀಬೇಕೆಂದೆನಿಸಿತು. ಜಾರಿ ಬೀಳಬಹುದೇನೋ ಎಂಬ ಭಯ. ಅಷ್ಟರಲ್ಲೇ ಆ ವನಕನ್ಯೆ ತನ್ನ ಗುಡಿಸಲಿನಿಂದ ಇಳಿದುಬರುತ್ತಿದ್ದಳು. ಅವಳು ಆವನ ಹೃದಯವನ್ನು ಆಗಲೇ ತುಂಬಿಕೊಂಡಿದ್ದಳು. ಹೆಗಲಿಗಿಳಿದಿದ್ದ ಕರ್ರಗಿನ ದಟ್ಟ ಕೂದಲು ಅವಳ ಕೆಂಪಡರುವ ಹಾಲ್ಗೆನ್ನೆಗಳಲ್ಲಿ ಹಾರಾಡುತ್ತಿದ್ದವು. ಅವಳು ಬರುವಾಗಲೆಲ್ಲಾ ಕುಡಿಯಲು ಏನನ್ನಾದರೂ ತರುತ್ತಿದ್ದಳು. ಈ ಆದಿವಾಸಿಗಳಿಗೆ ಸತ್ವಯುತವಾದ ಮದ್ಯ ತಯಾರಿಸಲು ಗೊತ್ತು. ಬೇಯಿಸಿದ ರಾಗಿಯನ್ನು ತೇವವಿರುವಾಗಲೇ ಬಾಳೆಲೆಯಲ್ಲಾಗಲೀ ಬಿದಿರಿನಂಡೆಯಲ್ಲಾಗಲೀ ತುಂಬಿಸಿ ತಣ್ಣಗಿನ ಸ್ಥಳದಲ್ಲಿ ತೂಗುಹಾಕಿ ಭಟ್ಟಿಯಿಳಿಸುತ್ತಿದ್ದ ಶರಾಬಿಗೆ ಗಿಡ ಮೂಲಿಕೆಗಳನ್ನು ಬೆರಸಿ ಅವನಿಗಾಗಿ ಅವಳ ತಂದೆ ಕಳುಹಿಸಿ ಕೊಡುತ್ತಿದ್ದ. ಕೊಟ್ಟದ್ದು ತಾಯಿಯೋ ತಂದೆಯೋ ಎಂಬುದನ್ನು ಅವಳಿಂದ ತಿಳಿದುಕೊಳ್ಳಬಹುದು. ಅವರು ಪರಸ್ಪರ ಮಾತನಾಡುತ್ತಿರಲಿಲ್ಲ. ಆಡಿದರೆ ಅರ್ಥವಾಗುವ ಹಾಗೂ ಇರಲಿಲ್ಲ. ಆದರೆ ಅವಳ ವಾಚಾಲವಾದ ನೀಲಿ ಕಣ್ಣುಗಳೂ ಬಿಕ್ಕಳಿಸುತ್ತಿರುವಂತೆ ತೋರುತ್ತಿದ್ದ ತೆಳ್ಳನ್ನ ಕೆಂದುಟಿಗಳೂ ನೆತ್ತರು ಚಿಮ್ಮುತ್ತಿದ್ದ ಬೆರಳ ತುದಿಗಳೂ ಮಾತುಗಳಿಗಿಂತಲೂ ಸ್ಪಷ್ಟವಾಗಿ ವಿಚಾರಗಳನ್ನು ತಿಳಿಸುತ್ತಿದ್ದವು. ತಂದೆ ತಾಯಿಯರನ್ನು ವಿಂಗಡಿಸಿ ತಿಳಿಸಲು ಅವಳು ಬಳಸುತ್ತಿದ್ದ ಸಂಜ್ಞೆಗಳು ನಾಗರಿಕರಾದ ನಮಗೆ ಅಸಭ್ಯವಾಗಿ ತೋರಬಹುದು. ಗಂಡು ಹೆಣ್ಣುಗಳಲ್ಲಿರುವ ಮೂಲಭೂತ ವ್ಯತ್ಯಾಸವನ್ನೇ ಅವಳು ಸಂಜ್ಞೆಯಾಗಿ ಬಳಸುತ್ತಿದ್ದಳು. ಅವಳ ಮಟ್ಟಿಗೆ ಆ ಬಗ್ಗೆ ನಾಚಿಕೆ, ಮುಜುಗರಗಳಾಗುವುದೂ ಇರುತ್ತಿರಲಿಲ್ಲ. ರೂಢಿಯಿಂದಾಗಿ ಅವನ ಮಟ್ಟಿಗೂ ಅದರಲ್ಲಿದ್ದ ಅಸಭ್ಯತೆಯು ಹೊಸತನ ಕಳೆದುಕೊಂಡಿತು.

ಮೊದಲನೆಯ ದಿನ ಅವಳ ತೋಳನ್ನಾಧರಿಸುತ್ತಾ ಆತ ಅಲ್ಲೆಲ್ಲಾ ದಟ್ಟಡಿಯಿಟ್ಟು

ನಡೆದಿದ್ದ. ಎದ್ದು ನಿಂತಿದ್ದ ತನ್ನ ಪರಿಪುಷ್ಟವಾದ ವಕ್ಷಸ್ಥಳಕ್ಕೆ ಅವಳು ಆತನನ್ನು ಸೆಳೆಸೆಳೆದಾನಿಸಿದಳು. ಮರದ ನೆರಳಿನಲ್ಲಿ ಮುರಕಲ್ಲಿನ ಮೇಲೆ ಅವಳು ಕುಳಿತಾಗ ಮಾಂಸಲವಾದ ಅವಳ ತೊಡೆಯ ಮೇಲೆ ತಲೆಯಿಟ್ಟು ಆತ ಮಲಗಿದ. ಅವಳ ನೀಲಿ ಕಣ್ಣುಗಳಲ್ಲಿ ದಿಟ್ಟಿಸಿದಾಗ ಅವನಿಗೆ, ತನ್ನಲ್ಲಿ ಕರಗಿ ಲೀನವಾಗುತ್ತಿರುವ ಒಂದು ಆತ್ಮ ಗೋಚರಿಸುತ್ತಿತ್ತು. ಅವಳ ವಿಶಾಲವಾದ ಕಣ್ಣುಗಳು ಆತ್ಮ ಪೊಂವರ ಸಮಸ್ತ ಭಾವನೆಗಳನ್ನೂ ಅವನಿಗರ್ಪಿಸಿದವು.

ಅನತಿ ದೂರದ ಬೆಟ್ಟದ ಇಳಿಜಾರಿನಲ್ಲಿ ಅರೆ ನಗ್ನ ಹೆಣ್ಣು ಮಕ್ಕಳು ಕತ್ತಿಯಿಂದ ನೆಲವನ್ನಗೆದು ಬೀಜ ಬಿತ್ತುತ್ತಿರುವುದನ್ನಾಗಲಿ ಬೆಳೆದ ಬತ್ತವನ್ನು ತೆನೆಸಹಿತ ಕಿತ್ತು ತೆಗೆಯುತ್ತಿರುವುದನ್ನಾಗಲಿ ನೋಡಬಹುದಾಗಿತ್ತು. ಯಾವತ್ತೂ, ಬಿತ್ತುವ ಯಾವತ್ತೂ, ಕೊಯ್ಯುವಂಥದ್ದು ಅವರ ಬೇಸಾಯ! ಎಳೆದು ತೆಗೆವ ಬೆಳೆದ ಪೈರನ್ನು ಬಿದಿರು ಬುಟ್ಟಿಯಲ್ಲಿ ಹಾಕಿ ಗದ್ದೆಯಲ್ಲೇ ಮುಚ್ಚಿಡುತ್ತಾರೆ. ಅಗತ್ಯವಿದ್ದಷ್ಟನ್ನು ಮಾತ್ರ ಆಯಾಯ ದಿನ ಅದರಿಂದ ತೆಗೆದೊಯ್ಯುತ್ತಾರೆ. ಬಿದಿರ ಬುಡಕ್ಕೆ ಬೆಂಕಿ ಹಾಕಿ ಕೊರೆದ ಒರಳೂ ಬಿದಿರ ಒನಕೆಗಳೂ ಅವರ ಬಳಿ ಇರುತ್ತವೆ. ಅಕ್ಕಿಯನ್ನು ಬಿದಿರಿನಂಡೆಯಲ್ಲಿ ಹಾಕಿ ಒತ್ತಟ್ಟಿಗೆ ಇರಿಸಿದ ಬಳಿಕ ಅದರ ಸುತ್ತಲೂ ಬೆಂಕಿಯೊಡ್ಡಿ ಬೇಯುತ್ತಲೇ ಬಾಳೆಲೆಗೆ ಸುರಿಯಲ್ಪಡುತ್ತಿರುವ ಅವರ ಅನ್ನ 'ಪುಟ್ಟು'ನ ಹಾಗೆಯೇ ಇರುತ್ತದೆ. (ಪುಟ್ಟು ಅಕ್ಕಿ ಹಿಟ್ಟನ್ನು ತುಸು ಹುರಿದು ಬಿದಿರ ಕೊಳವೆಯಲ್ಲಿ ಹಾಕಿ ಹಬೆಯಲ್ಲಿ ಬೇಯಿಸಿ ತಯಾರಿಸಲ್ಪಡುವ ಒಂದು ತಿನಿಸು.)

ಅವಳು ಅವನಿಗಾಗಿ ಅಷ್ಟಿಷ್ಟು ಏನನ್ನಾದರೂ ತರುತ್ತಿದ್ದಳು. ಅವಳು ಸದಾ ಅವನ ರೋಮಾವೃತವಾದ ಎದೆಯಿಂದ ಹೇನು ಬೇರುಗಳನ್ನು ತೆಗೆಯುತ್ತಾ, ಅವನ ಇಡಿಯ ಮೈಯಿಂದ ಹೊಟ್ಟು ಕೊಳೆಗಳನ್ನು ಕೆರೆದು ದೂರ ಮಾಡುತ್ತಾ ಇರುತ್ತಾಳೆ. ಆಗಲೂ ಅವಳು 'ಅಮು' 'ಖಲಾಯತ್' ಎಂಬೀ ಕೆಲವೇ ಶಬ್ದಗಳನ್ನಷ್ಟೇ ಹೇಳುತ್ತಾಳೆ. 'ಬಾಬೂಜಿ' 'ಏಳಿರಿ' ಎಂದೇ ಅವುಗಳ ಅರ್ಥವೆಂದೂ ಆತ ತಿಳಿದಿದ್ದ. ಸಂಜ್ಞೆಯ ಮೂಲಕ ಹೆಣಗಾಡಿ ಅವಳ ಹೆಸರನ್ನು ಕೂಡ ಆತ ಅವಳಿಂದ ಹೊರಡಿಸಿದ್ದ "ಬಿನ್ನಿ"

ಶಿಕಾರಿಗಳು ಹಿಂತಿರುಗುತ್ತಿದ್ದಂತೆ ಅವಳೂ ಹೊರಟು ಹೋಗುತ್ತಿದ್ದಳು. ಬಲೆಯಲ್ಲಿ ಹಿಡಿಯಲ್ಪಟ್ಟ ಕಾಡ್ಕೋಣಗಳನ್ನು ಬಳಲಿನ ಹಗ್ಗಗಳನ್ನು ಹಾಕಿ ನಾಲ್ದೆಸೆಯಲ್ಲೂ ಹಿಡಿದುಕೊಳ್ಳುತ್ತಾ ಅವರು ಗ್ರಾಮಕ್ಕೆ ಎಳೆದು ತಂದಿರುತ್ತಾರೆ. ಈ ಗಿಡ್ಡ ದೇಹದ ಬಲಿಷ್ಠ ಜನರಿಗೆ ಕಾಡು ಮೃಗಗಳನ್ನು ಜೀವಂತ ಹಿಡಿಯಲು ಸಾಧ್ಯವಾದರೇನೆ ಬೇಟೆಯು ಖುಷಿ ಕೊಡುತ್ತಿರುವುದಾಗಿ ತೋರುತ್ತದೆ. ಬಳಿಕ ಕಟ್ಟಿಗೆಯೊಡ್ಡಿ ಬೆಂಕಿ ಹಾಕುತ್ತಾರೆ. ಕೋಣದ ಕುತ್ತಿಗೆಗೆ ಕಬ್ಬಿಣದ ಸಬ್ಬಲನ್ನು ತಿವಿತಿವಿದು ನಾಟುತ್ತಾರೆ.

ಬಿದಿರಿನಂಡೆಯಿಂದ ತೆಗೆದ ಪುಟ್ಟಿನಂತಹ ಅನ್ನವನ್ನು, ಎಳೆಸು ಬಿದಿರ ತುಂಡುಗಳನ್ನು ಸೀಳಿ ಚಪ್ಪಟೆಮಾಡಿ ತಯಾರಿಸಲಾದ ಪಾತ್ರೆಗಳಲ್ಲಿ ಬಡಿಸುತ್ತಾರೆ. ಕೆಂಡದ ಮೇಲಿಟ್ಟು ಕಾಯಿಸಿ ತೆಗೆದ ಒಣ ಮೆಣಸನ್ನು ಪುಡಿಮಾಡಿ ನಿಧಿಯಂತೆ ಬಿದಿರಂಡೆಯಲ್ಲಿ ಭದ್ರಪಡಿಸಿಟ್ಟಿದ್ದ ಉಪ್ಪಿನ ಹರಳನ್ನು ಸೇರಿಸಿ ಬೆಂಕಿಯಲ್ಲಿ ಸುಟ್ಟ ಮಾಂಸದ ತುಂಡುಗಳೊಂದಿಗೆ ಅವರು ಬೆಂಕಿಯ ಸುತ್ತಲೂ ಕುಳಿತು ಊಟ ಮಾಡುತ್ತಾರೆ. ಊಟದ ಬಳಿಕ ಬಿದಿರಂಡೆಗಳಿಂದ ಮದ್ಯವನ್ನು ಬಗ್ಗಿಸಿ ಕುಡಿಯುತ್ತಾ, ಹಾಡುತ್ತಾ, ಕುಣಿಯ ತೊಡಗುತ್ತಾರೆ.

ಮುಸುಕೆಳೆದು ಮಲಗಿ ನಿದ್ರೆಯ ನಿರೀಕ್ಷೆಯಲ್ಲಿರುತ್ತಿದ್ದ ರಾಮಚಂದ್ರ ಅವರ ಸಾಮಾಜಿಕ ಜೀವನದ ಕುರಿತೇ ಯೋಚಿಸುತ್ತಿದ್ದ. ಎಂಥ ಒಗ್ಗಟ್ಟು! ಎಂಥ ಸರಳತೆ! ನಿದ್ದೆ ಹತ್ತುವಾಗ ಅವನು ಬಿನ್ನಿಯ ಕುರಿತೇ ಯೋಚಿಸುತ್ತಿರಬಹುದು. ಅವಳಿಗೆ ಎಣ್ಣೆ ಹಚ್ಚಿ ಮೀಯಿಸಿ ತಿಳಿನೀಲಿ ಸೀರೆಯನ್ನು ಉಡಿಸಿದರೆ.... ಹೇಗೆ ಕಾಣಿಸಿಯಾಳೆಂದು ಕೆಲವು ದಿನಗಳಿಂದ ಕುಸು

ಕಾಣುತ್ತಿದ್ದ. ಹಾಗೆ ಮಾಡಿ ಅವಳೊಂದಿಗೆ ತನ್ನ ಹಳ್ಳಿಯ ಗ್ರಾಮಪಂಚಾಯತಿ ರಸ್ತೆಯ ಮೂಲಕ ಹೆಜ್ಜೆ ಬದಲಿಸುತ್ತಿರುವಾಗ... ನಿದ್ರೆ ಸವಿಗನಸುಗಳ ಕಾಣಿಕೆಗಳನ್ನೊಪ್ಪಿಸುತ್ತಾ ಇರುತ್ತದೆ.

ತನ್ಮಧ್ಯೆ ಆ ಆದಿವಾಸಿಗಳೆಡೆಯಲ್ಲಿ ಒಂದು ಮದುವೆ ಜರುಗಿತು. ಅರೆನಗ್ನ ವಧೂ ವರರೊಂದಿಗೆ ಗ್ರಾಮಸ್ಥರೆಲ್ಲರೂ ಒಟ್ಟಾಗಿದ್ದರು. ಅಲ್ಲೇ ನೆಲದಲ್ಲಿ ಅಗ್ನಿಕುಂಡದ ಬಳಿ ಹೋಮವೋ ಪೂಜೆಯೋ ನಡೆಯುತ್ತಿತ್ತು. ಅದಾದ ಬಳಿಕ ಗಾಂಬಡೆಯ ಆದೇಶದ ಮೇರೆಗೆ ವಧು, ಒಂದು ಮುಷ್ಟಿ ಪೂಜಿತ ಮಣ್ಣು ತೆಗೆದು ವರನ ಕೈಗಿತ್ತಳು. ಅದನ್ನಾತ ತಿನ್ನ ಬೇಕು. ವರನೂ ಒಂದು ಹಿಡಿ ಮಣ್ಣು ಬಾಚಿ ವಧುವಿಗೆ ಕೊಡುತ್ತಾನೆ. ಅಲ್ಲದೆ ವರನ ಕಡೆಯವರು ವಧುವಿನ ಹೆತ್ತವರಿಗೆ, ನಷ್ಟ ಪರಿಹಾರವೆಂಬಂತೆ ಎರಡು ಎಮ್ಮೆಗಳನ್ನು ಸಹ ಕೊಡುತ್ತಾರೆ. ಬಳಿಕ ವರ ವಧುವನ್ನು ತನ್ನ ಗುಡಿಸಲಿಗೆ ಕರೆದೊಯ್ಯುತ್ತಾನೆ. ಆಕೆ ಅವನ ಸ್ವಂತದವಳಾಗುತ್ತಾಳೆ. ಈ ಭೂಮಿ ಇರುವತನಕವೂ ಅವರ ದಾಂಪತ್ಯ ಮುಂದುವರೆಯುತ್ತದೆ. ಸತ್ತು ಮಣ್ಣು ಸೇರುವ ತನಕವೂ ಆತ ಅವಳಾತನೇ ಆಗಿರುತ್ತಾನೆ.

ಅವರು ಮಣ್ಣೇ ಆಗಿದ್ದಾರೆ.
(ಅವರೂ ಮಣ್ಣೇ!)

ಅವನಿಗೆ ರೆಕ್ಕೆ ಪುಕ್ಕಗಳು ಮೂಡುತ್ತಲೇ ಒಂದು ದಿನ, ಅವನಿದ್ದ ತುಕಡಿ ಹಿಂದಕ್ಕೆ ಮರಳಿತು. ಅವನಾಗ ಹೊರಗೆ ಅಡ್ಡಾಡುತ್ತಿದ್ದ. ಅವನನ್ನು ನೋಡಿದ ಕ್ಯಾಪ್ಟನಿಗೆ ಅಚ್ಚರಿ( ಆತಂಕ. ಹವಿಲ್ದಾರ್ ಗಂಗಾಪ್ರಸಾದ್ ಜೋರು ಜೋರಾಗಿಯೇ ಅಳತೊಡಗಿದ.

'ದೇವರಿಗೆ ವಂದನೆಗಳು. ಇನ್ನು ನಾವು ಹಿಂತಿರುಗೋಣ."

ಆತ ಅಲ್ಲಿಂದ ತೆರಳಬೇಕಾಗಿದೆ. ಹೊರೆಯಾಳುಗಳಿಗೆ ಸಮನಾಗಿ ಹೆಜ್ಜೆ ಹಾಕಲು ರಾಮಚಂದ್ರನಿಂದಾಗದು. ಅದ ಕಾರಣ ಆತನನ್ನು ಇನ್ನೊಬ್ಬನ ಜೊತೆಯಲ್ಲಿ ಮುಂಚಿತವಾಗಿಯೇ ಕಳುಹಿಸಿ ಕೊಡಲು ನಿರ್ಧರಿಸಲಾಯಿತು.

ಆತ ಹೊರಡುವಷ್ಟರಲ್ಲೇ ಗ್ರಾಮಸ್ಥರು ಪೂರ್ತಿ ದೇಶೆಯ ಮುಂದೆ ಜಮಾಯಿಸಿದ್ದರು. ಬೊಬ್ಬಿಟ್ಟು ಅಳುತ್ತಿದ್ದ ತಮ್ಮ ಮಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಗಾಬಂಡೆ ದಂಪತಿಗಳು ಅವರ ಮುಂದುಗಡೆಯೇ ಅಸಹಾಯಕರಾಗಿ ನಿಂತುಕೊಂಡರು.

ಕ್ಯಾಪ್ಟನ್ನೂ ಸಂಗಡಿಗರೂ ಬೆಕ್ಕಸ ಬೆರಗಾಗಿ ಪಿಳಿ ಪಿಳಿ ನೋಡುತ್ತಾ ನಿಂತರು.

ಅಷ್ಟರಲ್ಲೇ ಹೊರಟಿದ್ದ ಆತ ಮುಂದಕ್ಕೆ ಕಾಲೆಳೆಯತೊಡಗಿದ.

ಅವಳು ಬೊಬ್ಬಿಡುತ್ತಾ ಹೆತ್ತವರ ಹಿಡಿತದಿಂದ ಕೊಸರಿ ನೆಲಕ್ಕುರುಳಿ ಹೊರಳುತ್ತಾ ತಲೆ ಜಪ್ಪತೊಡಗಿದಳು. ರಾಮಚಂದ್ರ ಬಿಡುಗಣ್ಣು ಬಿಡುತ್ತಾ ನಿಂತುಬಿಟ್ಟ. ಏನು ಮಾಡಲಿ? ಏನಂತ ಹೇಳಲಿ?

"ಬನ್ನಿ." ಆತ ಕರೆದ. ಗಂಟಲು ಕಟ್ಟಿತು.

"ಚಲೇ ಜಾವ್‌ಓ?" ಕ್ಯಾಪ್ಟನ್ ಗುಡುಗಿದ.

"ನಾನು ಬರುತ್ತೇನೆ."

ಹೆಜ್ಜೆ ಕೀಳಲು ಹೆಣಗಾಡಿದ.

ಆಗ ಅವಳು ನೆಲದಿಂದ ಒಂದು ಹಿಡಿ ಮಣ್ಣು ಬಾಚಿ ತೆಗೆದು ಧಾವಿಸುತ್ತಾ ಅವನ ಬಳಿಸಾರಿ ಎದುರು ಬದುರಾಗಿ ನಿಂತಳು. ಅವಳಾಗ ಅಳಲಿಲ್ಲ. ಕಣ್ಣೀರಿನಲ್ಲದ್ದಿದ್ದ ಆ ಕರಿಗುರುಳು ಅವಳ ಹಣೆ, ಕೆನ್ನೆಗಳನ್ನೆಲ್ಲಾ ಅಂಟಿಕೊಂಡಿದ್ದವು. ಕಣ್ಣೀರು ಮಡುಗಟ್ಟಿದ್ದ ಅವಳ ನೀಲಿ ಕಣ್ಣುಗಳನ್ನು ಆತ ನೋಡಿದ್ದು ಒಮ್ಮೆ ಮಾತ್ರ. ಆ ಕಣ್ಣುಗಳಲ್ಲಿ ಜ್ವಲಿಸುತ್ತಿದ್ದ ಪ್ರೇಮಜ್ವಾಲೆ ಆತನನ್ನು ದಹಿಸಲು ಸಮರ್ಥವಾಗಿತ್ತು.

ನಡುಗುತ್ತಿರುವ ಕೈಗಳಲ್ಲಿ ಅವಳು ಚಾಚಿದ ಒದ್ದೆ ಮಣ್ಣನ್ನು ಆತ ತನ್ನ ಕೈಗಳಲ್ಲಿ ವಹಿಸಿಕೊಂಡ. ಅವಳು ಮತ್ತೂ ನೋಡಿದಳು. ಆ ನೋಟದ ಗಹನವಾದ ಅರ್ಥ ಅರಿವಿಗೆ ಬರುತ್ತಲೇ ಆತ ಒಂದು ಚಿಟಿಕೆ ಮಣ್ಣು ತೆಗೆದು ಬಾಯಿಗೆ ಹಾಕಿದ. ಉಪ್ಪಿನ ಚೊಗರು ನಾಲಿಗೆಗೆ ತಾಗಿ ಅವನಿಗೆ ಮೈ ನವಿರೆದ್ದು ಜುಮು

ಗುಟ್ಟಿತ್ತು. ಅದು ಅವಳ ಕಣ್ಣೀರಿನ ಚೊಗರಾಗಿತ್ತು.

ಬಳಿಕ ಆತ ಹೆಜ್ಜೆ ಮುಂದಿಡುವಷ್ಟರಲ್ಲೆ ಮೌನವಾಗಿ ಕಣ್ಣೀರಿಳಿಸುತ್ತಿದ್ದ ಅವಳ ಹೆತ್ತವರು ಅವಳನ್ನು ಹಿಡಿದು ಅತ್ತ ಸರಿಸಿದ್ದರು. ಅವಳು ಕೊಸರಾಡುತ್ತಾ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದಳು.

"ಅಮ್ಮಾ."

ಆತ ಮುಂದಕ್ಕೆ ಹೆಜ್ಜೆ ಬದಲಿಸಿದ. ದಾರಿಯುದ್ದಕ್ಕೂ ಅವಳ ಬೊಬ್ಬೆ ಕೇಳಿಸುತ್ತಲೇ ಇತ್ತು. ಮುಂದಿನ ತಂಗುದಾಣದಲ್ಲಿ ರಾತ್ರಿ ಮಲಗಿದಾಗ ಆತ ಆಕೆಯ ಕುರಿತೇ ಯೋಚಿಸಿದ. ಹೊತ್ತು ಸರಿಯುತ್ತಲೇ ಇತ್ತು. ಮುಂಜಾವದ ವೇಳೆ ಆತನಿಗೊಂದು ಕನಸು. ಅವಳು ಅವನ ಮಂಚದ ಮೇಲೆ ಬಗ್ಗಿ ಕುಳಿತ್ತಿದ್ದಳು. ಆತ ಸರಕ್ಕನೆ ಎದ್ದು ಅವಳನ್ನು ತೆಕ್ಕೈಸಲು ಕೈಗಳನ್ನು ಚಾಚಿದ. ಅವಳ ರೂಪು ಆಗ ಒಂದು ಗೆರೆಯಷ್ಟು ಚಿಕ್ಕದಾಗಿರುವದನ್ನೂ ವಾತಾವರಣದಲ್ಲಿ ಕರಗಿ ಲೀನವಾಗುತ್ತಿರುವದನ್ನೂ ಆತ ನೋಡಿದ.

"ನಾನೊಂದು ಪ್ರೇತವಾಗಿದ್ದೇನೆ" ಅವಳ ಗಿಳಿದನಿ ಅವನಿಗೆ ಕೇಳಿಸಿತು.

"ಓ"

ಎದೆಯೊಡೆದಂಥ ಅನುಭವ. ಕಣ್ಣು ಮುಚ್ಚಿದಾಗಲ್ಲೆಲ್ಲಾ ಯಾವತ್ತೂ ಅದೇ ಕನಸು.

ರಾಮಚಂದ್ರನನ್ನು ನೀವು ಹೋಗಿ ನೋಡಬಹುದು. ಸದಾ ಹೊತ್ತೂ ಚಿತ್ರ ಬಿಡಿಸುತ್ತಾ ಕುಳಿತಿರುತ್ತಾನೆ. ಈಶಾನ್ಯ ಗಡಿ ಪ್ರದೇಶಗಳಿಗೆ ಭೇಟಿ ಕೊಟ್ಟಿದ್ದ ಸೈನಿಕ ತುಕಡಿಯ ಪ್ರತ್ಯಕ್ಷಾನುಭವಗಳನ್ನು ಆತ ಗೆರೆಗಳಲ್ಲೂ ಬಣ್ಣಗಳಲ್ಲೂ ಚಿತ್ರಿಸುತ್ತಾ ಇರುತ್ತಾನೆ. ಬದುಕಿನಲ್ಲಿ ಅವನಿಗೆ ಇನ್ನಾವ ಆಸೆಯೂ ಉಳಿದಿಲ್ಲ. ಯಾಕೆ ಹೀಗೆ ಎಂದು ಪ್ರಶ್ನಿಸಿದರೆ ಅವನು ತಕ್ಷಣ ಉತ್ತರಿಸಲಾರ. ಪಿಳಿಪಿಳಿ ನೋಡುತ್ತಾ ಇರುತ್ತಾನೆ. ಅವನ ಕಣ್ಣುಗಳು ತುಂಬುತ್ತಿರುವುದು ನಿಮಗೆ ಕಾಣಿಸಬಹುದು. ಕೆಲ ಹೊತ್ತಿನ ನಂತರ ಮೇಜು ತೆರೆದು ಒಂದು ಕರಡಿಗೆಯನ್ನು ಹೊರತೆಗೆಯುತ್ತಾನೆ. ನೀವೊಮ್ಮೆ ಅದನ್ನು ನೋಡಿ, ಒಣಗಿದ ಮಣ್ಣು.

ಈ ಭೂಮಿ ಇರುವಷ್ಟು ಕಾಲವೂ ಅವರು ದಂಪತಿಗಳು. ಸತ್ತು ಮಣ್ಣಾದ ಬಳಿಕವೂ ಆತ ಅವಳವನೇ.

ಮನುಷ್ಯ, ಬರೇ ಮಣ್ಣು.



**ಇಲಿ ಕಾಣುವವರೆಗೆ ಬೆಕ್ಕು, ಹುಲ್ಲೆ ಕಾಣುವವರೆಗೆ ಹುಲಿ ತುಂಬಾ ಸಾಧು ಪ್ರಾಣಿಗಳು.**
**—ಜಪಾನಿ ಗಾದೆ**

**ಕ್ರಿಸ್ತಪೂರ್ವ ಹಾಗೂ ಕ್ರಿಸ್ತನಂತರ ಎಂದು ಇತಿಹಾಸವನ್ನು ವಿಭಾಗಿಸಿದ ಹಾಗೇ ನಾನು ನನ್ನ ಇತಿಹಾಸವನ್ನು ವಿಭಾಗಿಸಿದ್ದೇನೆ- ವಿವಾಹಪೂರ್ವ ಹಾಗೂ ವಿವಾಹಾನಂತರ ಎಂದು.**
**—ಉಲಾಸೋ ತರಾನಾ**

**Edited, Printed & published by M. N. Mahishi on behalf of the Receive (Moveables), Loka Shikshna Trust, Samykuta Karnataka Press, Koppika Road, Hubli- 580 020. Rept: Bombay; V. Satyamurthy Phone: 551050 Calcutta: H. Majumdar Phone: 46-42331 Madras: K. A. Subramania Phone: 842201: New Delhi; V. K. Chopra Phone: 7114785.**

*Registered with the Registrar of News papers for India under No. 3530/57*

*Licensed to Post without Prepayment.* *Licence No. L2120 |WPP No. 3*